# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ತನು, ರವಿ ಹೆಗ್ಗಡೆ, ಶ್ರೀಹರಿ, ವಿ. ಗೋಪಾಲ್,
ಕಮಲಂ ಅರಸು, ರಾಂಚಂದ್ರ ಕೊಪ್ಪಲು, ಗೋಪಿ, ಜಿಎಂಬೊ
**ಮುಖಪುಟದ ಛಾಯಾಚಿತ್ರ :** ಶ್ರೀಶೈಲ ಹೊಸಮನಿ, ಹುನಗುಂದ
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

"ಗುಜರಾತ್ ಮಾದರಿ ಅಭಿವೃದ್ಧಿ" ಎಂಬುದು ನರ್ಮದಾ ಅಣೆಕಟ್ಟಿನ ಸಂದರ್ಭದಲ್ಲಿ ಎರಗಿಬಂದಿದೆ. ಮಾನ್ಯ ಮೋದಿಯವರು ತಮ್ಮ ಕಾರ್ಯವೈಖರಿಯ ಒಂದು 'ಸ್ಯಾಂಪಲ್'ಅನ್ನು ದೇಶದೆದುರು ಸಾಬೀತು ಪಡಿಸಿದ್ದಾರೆ. ಅವರು ಪ್ರಧಾನಿಯಾದರೆ ತಮ್ಮ ಗುಜರಾತಿಗೆ ಏನೇನನ್ನು ಮಾಡಬೇಕೆಂಬ ಸಂಕಲ್ಪ ಹೊಂದಿದ್ದರೋ ಅದರ ಪರಿಚಯ ಆರಂಭವಾಗಿದೆ. ಲೋಕಸಭಾ ಚುನಾವಣೆಯಲ್ಲಿ ಮುಂಬೈನ ಒಂದು ಕ್ಷೇತ್ರದಿಂದ ಸ್ಪರ್ಧಿಸಿ ಠೇವಣಿ ಕಳೆದುಕೊಂಡ ಮೇಧಾ ಪಾಟ್ಕರ್ ಅವರು ರಾಷ್ಟ್ರಮಟ್ಟದಲ್ಲಿ ಗಮನಾರ್ಹ ಹೋರಾಟಗಾರ್ತಿಯಾಗಿ ರೂಪುಗೊಂಡಿದ್ದು 'ನರ್ಮದಾ ಉಳಿಸಿ' ಚಳುವಳಿಯ ಮೂಲಕ. "ಕೃಷಿ ಮತ್ತು ಕುಡಿಯುವ ನೀರಿಗಾಗಿ" ಎಂಬ ಘೋಷಣೆ ನರ್ಮದಾ ಅಣೆಕಟ್ಟಿನ ಯೋಜನೆಯ ಮೊದಲ ದಿನಗಳಲ್ಲಿ ಕೇಳಿಬಂದಿತ್ತು. ರಾಜಸ್ತಾನದ ಹಾಗೂ ಗುಜರಾತಿನ ಹಳ್ಳಿಗಳಿಗೆ ಕುಡಿಯುವ ನೀರು ಮತ್ತು ಮಧ್ಯಪ್ರದೇಶ – ಗುಜರಾತುಗಳಿಗೆ ನೀರಾವರಿ, ಇದು ಯೋಜನೆಯ ಉದ್ದೇಶಿತ ಗುರಿ. ಅಣೆಕಟ್ಟು ನಿರ್ಮಾಣಗೊಂಡಾಗ ನೂರಾರು ಹಳ್ಳಿಗಳು ನೀರಿನಲ್ಲಿ ಮುಳುಗಿದವು. ಆ ಹಳ್ಳಿಗಳ ಜನಕ್ಕೆ ಪರ್ಯಾಯ ವಸತಿ ಸೌಕರ್ಯ ಮಾಡಿಕೊಡುವ ಭರವಸೆ ಇನ್ನೂ ಈಡೇರಿಲ್ಲ. ಅದೂ ಸುಮಾರು ಇಪ್ಪತ್ತು ವರ್ಷಗಳ ಅವಧಿಯಲ್ಲಿ. ಆ ಸಂದರ್ಭದಲ್ಲಿ ಹಳ್ಳಿಗಳ ಮಹಿಳೆಯರೂ ಸೇರಿದಂತೆ ಎಲ್ಲ ನಿವಾಸಿಗಳೂ ದಿನಗಟ್ಟಲೆ ನರ್ಮದಾ ನೀರಿನಲ್ಲಿ ನಿಂತು ಮತ್ತು ಕುಳಿತು ಪ್ರತಿಭಟನೆ ನಡೆಸಿದರು. ಮೇಧಾ ಅವರು ಅದರ ಮುಂದಾಳು. ಪುನರ್ವಸತಿ ಯಾವುದೂ ಆಗಲಿಲ್ಲ. ಆಮೇಲೆ ಅಣೆಕಟ್ಟಿನ ಎತ್ತರ ಹೆಚ್ಚಿಸುವ ಪ್ರಸ್ತಾಪ ಬಂದಿತು. ಅಂದರೆ ಇನ್ನಷ್ಟು ಹಳ್ಳಿಗಳ ಮುಳುಗಡೆ ಮತ್ತು ಜನರ ನಿರ್ವಸತಿ. ಅವರ ಜೀವನಾಧಾರವಾದ ಭೂಮಿಯು ಮುಳುಗಿದಾಗ ಅವರ ಜೀವನವೂ ಮುಳುಗಿತು. ಸರ್ವೋಚ್ಚ ನ್ಯಾಯಾಲಯದವರೆಗೂ ಹೋದ ಈ ತಕರಾರು ಜನರ ಪರವಾಗಿ ತೀರ್ಪು ಪಡೆಯಲಿಲ್ಲ. ನೊಂದ ಗ್ರಾಮವಾಸಿಗಳಲ್ಲಿ ಬುಡಕಟ್ಟು ಜನರೂ ಸೇರಿದ್ದಾರೆ. ಇದಿಷ್ಟು ಪ್ರಹಾರ ಸಾಲದೆಂದು ನರ್ಮದಾ ಅಣೆಕಟ್ಟಿನ ಎತ್ತರವನ್ನು ಇನ್ನೂ ಹೆಚ್ಚಿಸಬೇಕೆಂದು ಗುಜರಾತ್ ಸರ್ಕಾರ ಆಗ್ರಹಿಸುತ್ತಾ ಬಂದಿತ್ತು. ಮುಖ್ಯಮಂತ್ರಿ ಮೋದಿಯವರ ಕನಸಿನ ಕ್ರೂರ ಯೋಜನೆ ಅದು; ಪ್ರಧಾನ ಮಂತ್ರಿಯಾಗಿ ಈಗ ಆ ಕನಸಿಗೆ ಮೂರ್ತರೂಪ ಕೊಟ್ಟಿದ್ದಾರೆ ಮೋದಿ. ಅಣೆಕಟ್ಟಿನ ಎತ್ತರವನ್ನು ಇನ್ನೂ ೫೭ ಅಡಿ ಹೆಚ್ಚಿಸುತ್ತಾರಂತೆ. ಅಂದರೆ ಒಂದು ಕಟ್ಟೆಯ ಮೇಲೆ ಇನ್ನೊಂದು ದೊಡ್ಡ ಕಟ್ಟೆ ಕಟ್ಟಿದಂತೆ ! ಈಗ ಹೊಸದಾಗಿ ಮುಳುಗಡೆಯಾಗುವ ಜಮೀನು ಲಕ್ಷಗಟ್ಟಲೆ ಎಕರೆಗಳು, ಮುಳುಗಿಹೋಗುವ ಹಳ್ಳಿಗಳು ಮತ್ತು ಜನರು ನೂರಾರು. ಅವರೆಲ್ಲರ ಭವಿಷ್ಯವು ಅಣೆಕಟ್ಟೆಯಡಿ ಹೂತುಹೋಗುತ್ತದೆ. ಪರಿಹಾರ ರೂಪದಲ್ಲಿ ಒಂದು ವಾಕ್ಯದ ಆಶ್ವಾಸನೆ ನೀಡಲಾಗಿದೆ : 'ಮುಳುಗಡೆ ಯಾಗುವ ಎಲ್ಲ ಹಳ್ಳಿಗಳ ಜನರಿಗೂ ಪುನರ್ವಸತಿ ಕಲ್ಪಿಸಲಾಗುತ್ತದೆ.' ಇಂತಹ ಹಿಂದಿನ ಆಶ್ವಾಸನೆಗಳು ಬೂದಿಯಲ್ಲಿ ಮುಚ್ಚಿಹೋಗಿವೆ; ಈಗ ಇನ್ನಷ್ಟು ಬೂದಿ. ಜೀವಂತವಾಗಿರುವ ಜನರ ನಾಳೆಗಳೆಂದರೆ 'ಅಭಿವೃದ್ಧಿ'ಯ ತಕ್ಕಡಿಯಲ್ಲಿ ಲೆಕ್ಕಕ್ಕೆ ಬಾರದ ಹಕ್ಕಿಯ ಪುಕ್ಕಗಳು. ಮೋದಿಯವರು ಪ್ರಧಾನಿಯಾದ ಎರಡು ವಾರಗಳಲ್ಲೇ ಅಣೆಕಟ್ಟೆಯ ಎತ್ತರಕ್ಕೆ ಸಂಬಂಧಿಸಿದ ಕಡತವನ್ನು ಹೊರತೆಗೆಸಿ ತೀರ್ಮಾನ ನೀಡಿದ್ದಾರೆ. "ಚುರುಕು ಪ್ರಧಾನಿ" ಎಂಬ ಹಣೆಪಟ್ಟಿಯನ್ನು ಕಟ್ಟಿರುವ ನಮ್ಮ ಮಾಧ್ಯಮಗಳು ನರ್ಮದಾ ಸುತ್ತಮುತ್ತ ವಾಸವಿರುವ ಲಕ್ಷಗಟ್ಟಲೆ ಜನರ ಜೀವನವನ್ನು ಯಃಕಶ್ಚಿತ್ ಜೀವಗಳೆಂದು ಅಲ್ಲಗಳೆದಿವೆ. ಮೇಧಾ ಪಾಟ್ಕರ್ ಮತ್ತೆ ಚಳುವಳಿಗೆ ಧುಮುಕಬೇಕು. ಜನರ ಜೀವನಕ್ಕೆ ಬೆಲೆ ಕಟ್ಟಿದ ಮೇಧಾ ಚುನಾವಣೆಯಲ್ಲಿ ಠೇವಣಿ ಕಳೆದುಕೊಂಡರು, ಜೀವಹಾನಿಯನ್ನು ಗಂಭೀರ ಸಮಸ್ಯೆಯೆಂದು ಸಹ ಪರಿಗಣಿಸದ ಮೋದಿ ಪಕ್ಷ ಹಿಗ್ಗಾಮುಗ್ಗಾ ಜಯಭೇರಿ ಬಾರಿಸಿತು. ಬಹುಶಃ ನರ್ಮದಾ ಆಸುಪಾಸಿನ ಜನರೂ ಅದೇ ಪಕ್ಷಕ್ಕೆ ಮತ ನೀಡಿದ್ದರೋ ಏನೋ ! ಮೋದಿಯವರಿಗೆ ವಿಜಯ ಕಿರೀಟವನ್ನು ತೊಡಿಸಿದ ಜನ ಈಗಲಾದರೂ ಅವರಿಗೆ ಹೇಳಬೇಕು, "ಸನ್ಮಾನ್ಯರೆ, ಇದು ಅಭಿವೃದ್ಧಿಯಲ್ಲ;

(೬ನೇ ಪುಟಕ್ಕೆ)



# ಸಂಪಾದಕೀಯ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೫ ಸಂಚಿಕೆ-೧೨ ಜುಲೈ ೨೦೧೪





**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೭
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


## ಮನೆ ಸುರಕ್ಷಿತವಿರಬಹುದು...

ಅತ್ಯಾಚಾರ ಪ್ರಕರಣಗಳು ಆತಂಕಪಡುವ ಪ್ರಮಾಣದಲ್ಲಿ ಹೆಚ್ಚುತ್ತಿವೆ. ಪ್ರತಿನಿತ್ಯ ಬರುವ ಮಹಿಳೆಯರ ಮೇಲಿನ ದೌರ್ಜನ್ಯದ ವರದಿಗಳು ನಾಗರಿಕ ಸಮಾಜವನ್ನು ಬೆಚ್ಚಿ ಬೀಳಿಸುತ್ತಿವೆ. ಇತ್ತೀಚೆಗೆ ಬರುತ್ತಿರುವ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳ ಮೇಲಿನ ಅತ್ಯಾಚಾರ ಮತ್ತು ಕೊಲೆಗಳ ವಾರ್ತೆಗಳು ನಾವೂ ಒಂದು ನಾಗರಿಕ ಸಮಾಜದಲ್ಲಿ ಬದುಕಿದ್ದೇವೆಯೆ, ಎಂದು ಪ್ರಶ್ನೆ ಮಾಡುವಂತೆ ಮಾಡಿವೆ. ಅತ್ಯಾಚಾರ ಪ್ರಕರಣಗಳಿಗೆ ಹೋಲಿಸಿದರೆ ನಮ್ಮ ನಾಗರಿಕ ಸಮಾಜದ ಪ್ರತಿರೋಧ ಮತ್ತು ಪ್ರತಿಭಟನೆಗಳ ಸಂಖ್ಯೆ ಕ್ಷೀಣಿಸುತ್ತಿದೆ. ಇಂಥ ಸುದ್ದಿಗಳನ್ನು ಪ್ರತಿನಿತ್ಯ ಓದಿ ಇವೆಲ್ಲ ಸಹಜವೇನೋ ಎಂಬ ಭಾವ ಬೆಳೆಯುತ್ತಿದೆ. ಯಾವುದೋ ಒಂದು ಘಟನೆ ಪ್ರಾಮುಖ್ಯತೆ ಪಡೆದು ಅದಕ್ಕೆ ಪ್ರತಿಭಟನೆ ನಡೆದರೆ ಉಳಿದ ಬಹುತೇಕ ಘಟನೆಗಳು ಯಾವುದೇ ಪ್ರತಿರೋಧವಿಲ್ಲದೇ ಪೊಲೀಸ್ ಫೈಲಿನಲ್ಲಿ, ಕೆಲವು ನ್ಯಾಯಾಲಯದ ಕಡತಗಳಲ್ಲಿ ಸೇರಿ ಹೋಗುತ್ತಿವೆ. ಅತ್ಯಾಚಾರ, ದೌರ್ಜನ್ಯಗಳಲ್ಲಿ ಪ್ರಮುಖ ಮತ್ತು ಪ್ರಮುಖವಲ್ಲದ ಪ್ರಕರಣಗಳಿರುವುದಿಲ್ಲ. ಎಲ್ಲ ಪ್ರಕರಣಗಳಲ್ಲೂ ಮನುಷ್ಯನ ಕ್ರೂರತನ ತಾಂಡವವಾಡುತ್ತದೆ. ಆದರೆ ಅವುಗಳನ್ನು ನೋಡುವ ಮನಸ್ಸುಗಳಲ್ಲಿ ಮಾತ್ರ ಈ ತಾರತಮ್ಯ, ಉದಾಸೀನ ಮನೋಭಾವ ವ್ಯಕ್ತವಾಗುತ್ತಿದೆ. ಕೆಲವು ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ಮಾಹಿತಿ ತಂತ್ರಜ್ಞಾನ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದ ಪ್ರತಿಭಾ ಎಂಬ ಯುವತಿಯನ್ನು ಅತ್ಯಾಚಾರ ಮಾಡಿ ಕೊಲೆಗೈದ ಅಮಾನುಷ ಘಟನೆ ನಡೆದಿತ್ತು. ಆ ಘಟನೆ ನಡೆದಾಗ ಬೆಂಗಳೂರು ನಗರವೇ ಬೆಚ್ಚಿಬಿದ್ದಿತ್ತು. ಬೆಂಗಳೂರಿನ ಪೊಲೀಸ್ ಕಮೀಶನರ್ ಅವರು ಎಲ್ಲ ಕಂಪನಿಗಳ ಆಡಳಿತ ಮಂಡಳಿಯವರ ಸಭೆ ನಡೆಸಿ ಆ ಅತ್ಯಾಚಾರ ಹಾಗೂ ಕೊಲೆಯ ಪ್ರಕರಣದ ಕುರಿತು ಗಂಭೀರವಾಗಿ ಚರ್ಚಿಸಿ ಅಂಥ ಕಂಪನಿಗಳಲ್ಲಿ ಕೆಲಸ ಮಾಡುವ ಮಹಿಳೆಯರ ರಕ್ಷಣೆಗೆ ಸೂಕ್ತ ಕ್ರಮಗಳನ್ನು ಕೈಗೊಂಡಿದ್ದರು. ಇದು ಸ್ವಾಗತಾರ್ಹವೇ. ಆದರೆ ಆ ಸಭೆ ನಡೆದ ಸಂದರ್ಭದಲ್ಲಿಯೇ ಗಾರ್ಮೆಂಟ್ ಮತ್ತಿತರ ಸಾಮಾನ್ಯ ವರ್ಗದ ಮಹಿಳೆಯರು ಕೆಲಸ ಮಾಡುವ ಪ್ರದೇಶಗಳಲ್ಲಿ ನಡೆದ ಅತ್ಯಾಚಾರ, ದೌರ್ಜನ್ಯದ ಪ್ರಕರಣಗಳನ್ನು ಸಹಜ ಎಂದು ಪರಿಗಣಿಸಿದ್ದರು. ಇಂಥ ಉದಾಸೀನ ಪ್ರವೃತ್ತಿ ಕೇವಲ ಆಡಳಿತ ವರ್ಗದಲ್ಲಲ್ಲ, ಇಡೀ ಸಮಾಜದಲ್ಲಿಯೇ ಎದ್ದು ಕಾಣುತ್ತಿದೆ. ದೆಹಲಿಯ ಪ್ಯಾರಾ ಮೆಡಿಕಲ್ ವಿದ್ಯಾರ್ಥಿನಿಯ ಮೇಲಿನ ಅತ್ಯಾಚಾರ ಮತ್ತು ಕೊಲೆ, ಮುಂಬಯಿಯ ಪತ್ರಕರ್ತೆ ಮೇಲಿನ ಅತ್ಯಾಚಾರಗಳಿಗೆ ವ್ಯಾಪಕ ಪ್ರತಿಭಟನೆಗಳು ನಡೆದರೆ ಇತ್ತೀಚೆಗೆ ಉತ್ತರ ಪ್ರದೇಶದ ಬದಾಯುನಲ್ಲಿ ದಲಿತ ಸಹೋದರಿಯರ ಮೇಲೆ ಅತ್ಯಾಚಾರವೆಸಗಿ ಮರಕ್ಕೆ ನೇಣು ಹಾಕಿದ ಅಮಾನವೀಯ ಘಟನೆ ಒಂದು ಸುದ್ದಿ ಮಾತ್ರವಾಗಿ ಜನ ಮಾನಸದಿಂದ ಮರೆಯಾಯಿತು. ಇಂಥ ಘಟನೆಗಳು ಪ್ರತಿನಿತ್ಯ ವರದಿಯಾಗುತ್ತಲೇ ಇದ್ದರೂ ಕೆಲವು ಮಾತ್ರ ಪ್ರಾಮುಖ್ಯತೆಯನ್ನು ಪಡೆದು ಉಳಿದವು ಪ್ರತಿರೋಧವಿಲ್ಲದೇ ಇತಿಹಾಸ ಸೇರುತ್ತವೆ. ಇವು ಕೇವಲ ಪ್ರಕರಣಗಳಾಗದೆ ಹೆಣ್ಣನ್ನು ನೋಡುವ ದೃಷ್ಟಿಕೋನವನ್ನು ಸಾದರಪಡಿಸುತ್ತಿವೆ. ಧಾರವಾಡ ಪಕ್ಕದ ಮುಗದ ಎಂಬ ಗ್ರಾಮದಲ್ಲಿ ಪುಟ್ಟ ಹೆಣ್ಣು ಮಗುವನ್ನು ಅದರ ತಂದೆಯೇ ಸಿಗರೇಟಿನಿಂದ ಸುಟ್ಟ ಘಟನೆ, ಅದಕ್ಕೆ ಸಾರ್ವಜನಿಕರಿಂದ ವ್ಯಕ್ತವಾದ ತಣ್ಣನೆಯ ಪ್ರತಿಕ್ರಿಯೆ ನಮ್ಮ ನಾಗರಿಕ ಸಮಾಜ ಹೊರಟ ದಿಕ್ಕನ್ನು ತೋರಿಸುತ್ತದೆ. ಇಂಥ ಸಾವಿರಾರು ಪ್ರಕರಣಗಳು ಪ್ರತಿವರ್ಷ ನಡೆದರೂ ಪ್ರತಿನಿತ್ಯ ಸುದ್ದಿಯಾದರೂ ಅವೆಲ್ಲ ಸಹಜ ಘಟನೆಗಳ ರೀತಿಯಲ್ಲಿ ವರದಿಯಾಗಿ ಮನಸ್ಸಿನಿಂದ ಮರೆಯಾಗುತ್ತಿವೆ. ಕರ್ನಾಟಕವೊಂದರಲ್ಲಿಯೇ ೨೦೧೨ರಲ್ಲಿ ೧೦,೩೬೬ ಅತ್ಯಾಚಾರ ಪ್ರಕರಣಗಳು ದಾಖಲಾಗಿವೆಯೆಂದು ಪೊಲೀಸ್ ದಾಖಲೆಗಳು ಹೇಳುತ್ತಿವೆ. ಇನ್ನು ದಾಖಲೆಯಾಗದ ಪ್ರಕರಣಗಳ ಸಂಖ್ಯೆಯನ್ನು ಕಲ್ಪಿಸಿಕೊಂಡರೆ ನಡುಕ ಉಂಟಾಗುತ್ತದೆ. ಅತ್ಯಾಚಾರ ಮತ್ತು ಕೊಲೆಗಳ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ವ್ಯವಸ್ಥೆಯಲ್ಲಿ ಇದೆಲ್ಲ ಸಹಜವೆಂಬಂತೆ ನಮ್ಮ ಸಮಾಜ ಪ್ರತಿಕ್ರಿಯಿಸುತ್ತಿದೆ. ಬೆಂಗಳೂರು ನಗರದಲ್ಲಿ ತೃತೀಯ ಲಿಂಗಿ ಒಬ್ಬಳು ತನ್ನನ್ನು ನಾಲ್ಕು ಜನ ಸೇರಿ ರೇಪ್ ಮಾಡಿದರು ಎಂದು ಮಧ್ಯರಾತ್ರಿ ಪೊಲೀಸ್ ಠಾಣೆಗೆ ಹೋಗಿ ಕಂಪ್ಲೇಂಟ್ ಕೊಟ್ಟರೆ ಪೊಲೀಸರೇ ಅವಳನ್ನು ಮತ್ತೊಮ್ಮೆ ರೇಪ್ ಮಾಡಿದರೆಂದು ಸಾರ್ವಜನಿಕರೆದುರಿಗೆ ಹೇಳಿದಳು. ಇವೆಲ್ಲ ರೋಚಕ ಸುದ್ದಿಗಳಾದುವೇ ಹೊರತು ಅತ್ಯಾಚಾರದ ಪ್ರವೃತ್ತಿಗಳನ್ನು ತಡೆಯಲು ಸರಕಾರವಾಗಲೀ, ಸಾರ್ವಜನಿಕರಾಗಲೀ ನಿರ್ದಿಷ್ಟ ಕಾರ್ಯಕ್ರಮವನ್ನು ಹಾಕಿಕೊಳ್ಳುತ್ತಿಲ್ಲ. ನಮ್ಮ ರಾಜ್ಯದ ಹೈದರಾಬಾದ ಕರ್ನಾಟಕ ಪ್ರದೇಶದಲ್ಲಿ ೨೦೦೮ರಿಂದ ೨೦೧೩ರವರೆಗಿನ ಅವಧಿಯಲ್ಲಿ ೪೭೭ ಅತ್ಯಾಚಾರ ಪ್ರಕರಣಗಳು ದಾಖಲಾಗಿ ೬೫೦ ಆರೋಪಿಗಳು ಪತ್ತೆಯಾಗಿ ಅವರಲ್ಲಿ ಶಿಕ್ಷೆಗೆ ಗುರಿಯಾಗಿರುವವರು ಕೇವಲ ೨೯ ಜನ ಮಾತ್ರ ಎಂದು ವರದಿಯಾಗಿದೆ. ಬೆಂಗಳೂರು ನಗರ ಅತ್ಯಾಚಾರದ ಸುದ್ದಿಗಳಿಲ್ಲದೇ ಸೂರ್ಯೋದಯವಾಗದಂಥ ಹಂತ ತಲುಪಿದೆ. ಇದನ್ನು ಸರಕಾರ, ಸಂಘಸಂಸ್ಥೆಗಳು, ರಾಜಕೀಯ ಪಕ್ಷಗಳು ಗಂಭೀರವಾಗಿ ಪರಿಗಣಿಸದೆ ಇರುವುದು ಆತಂಕದ ಸಂಗತಿಯಾಗಿದೆ. ಮಹಿಳೆಯ ಮೇಲೆ ಅತ್ಯಾಚಾರ ನಡೆದಾಗ ಅವರ ಕುಟುಂಬದವರೋ, ಕೆಲವು ಸಂಘಟನೆಗಳೋ ತಮ್ಮ ಕೈಲಾದಮಟ್ಟಿಗೆ ಪ್ರತಿಭಟಿಸಿ ಸುಮ್ಮನಾಗುತ್ತವೆ. ಆದರೆ ಈ ಅತ್ಯಾಚಾರದ ಸುನಾಮಿ ದಿನದಿಂದ ದಿನಕ್ಕೆ ಹೆಚ್ಚುತ್ತಲೇ ಇದೆ. ಪ್ರತಿರೋಧ ಮಾತ್ರ ಸಣ್ಣ ಅಲೆಯಂತಿದೆ.

ಸಾಮಾನ್ಯವಾಗಿ ಹೆಣ್ಣನ್ನು ನೋಡುವ ಮನೋಭಾವದಲ್ಲಿಯೇ ತಾರತಮ್ಯವು ಗಾಢವಾಗಿದೆ. ಹೆಣ್ಣಿನ ಮೇಲಿನ ದೌರ್ಜನ್ಯ, ಅತ್ಯಾಚಾರಗಳು ನಮ್ಮ ಸಮಾಜವನ್ನು ಬೆಚ್ಚಿ ಬೀಳಿಸದೇ ಇರುವುದಕ್ಕೆ, ಪ್ರತಿರೋಧ ವ್ಯಕ್ತಪಡಿಸದೇ ಇರುವುದಕ್ಕೆ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿಯೆ ದೋಷಗಳಿವೆ. ನಮ್ಮ ಪುರಾಣಗಳಲ್ಲಿ ಬರುವ ಘಟನೆಗಳನ್ನೇ ನೋಡಿ: ಸೀತೆಯನ್ನು ಕಾಡಿಗಟ್ಟಿದ ರಾಮ, ಶೂರ್ಪನಖಿಯ ಮೊಲೆ - ಮೂಗು ಕೊಯ್ದ ಲಕ್ಷ್ಮಣ, ಅಹಲ್ಯೆಯನ್ನು ರೇಪ್ ಮಾಡಿದ ಇಂದ್ರ, ತಾಯಿಯ ತಲೆಯನ್ನೇ ಕತ್ತರಿಸಿದ ಪರಶುರಾಮ ಇಂಥ ನೂರಾರು ಪ್ರಸಂಗಗಳು, ಮನುವಿನ ಅಮಾನವೀಯ ಸಂಹಿತೆಗಳು ನಮ್ಮ ಜನಮನದಲ್ಲಿ ಒಂದು ಮೌಲ್ಯವಾಗಿ ಉಳಿದಿವೆ. ಇಂಥ ದೌರ್ಜನ್ಯ, ಅತ್ಯಾಚಾರ ನಡೆಸಿದವರು, ಹೆಣ್ಣಿನ ಕುರಿತು ಅಮಾನುಷ ನೀತಿ ಸಂಹಿತೆಗಳನ್ನು ಹೇರಿದವರು ದೈವೀಪುರುಷರಾಗಿ, ಮಹರ್ಷಿಗಳಾಗಿ ನಮ್ಮ ಜನಮನಗಳಲ್ಲಿ ಸ್ಥಾಪಿತಗೊಂಡಿದ್ದಾರೆ. ಇನ್ನು ನಮ್ಮ ಸಮಾಜಕ್ಕೆ ಮಾದರಿಯಾಗಬೇಕಾದ ರಾಜಕಾರಣಿಗಳು ಮಾರಿಯಂತಾದ ಹಲವಾರು ಉದಾಹರಣೆಗಳಿವೆ. ಕಾಂಗ್ರೆಸ್‌ನ ಎನ್. ಡಿ. ತಿವಾರಿಯಂಥ ಹಿರಿಯ ರಾಜಕಾರಣಿ, ರಾಜ್ಯಪಾಲನಾಗಿದ್ದವನು. ಕರ್ನಾಟಕದ ಬಿ. ಜೆ. ಪಿ. ಸರಕಾರದಲ್ಲಿ ಮಂತ್ರಿಗಳಾಗಿದ್ದ ಹಾಲಪ್ಪ, ರೇಣುಕಾಚಾರ್ಯ, ಉಡುಪಿಯ ಶಾಸಕನಾಗಿದ್ದ ರಘುಪತಿ ಭಟ್ ಮುಂತಾದವರು. ತೇಜ್‌ಪಾಲ್‌ನಂಥ ಪತ್ರಕರ್ತರು, ವಾಡಿಯಾನಂಥ ಉದ್ಯಮಿಗಳು, ನಿತ್ಯಾನಂದ, ಅಸಾರಾಂ ಬಾಪುರಂಥ ಸನ್ಯಾಸಿಗಳು, ಇವರೆಲ್ಲ ಮಹಿಳೆಯರ ಮೇಲೆ ಅತ್ಯಾಚಾರ, ದೌರ್ಜನ್ಯ ನಡೆಸಿಯೂ ಯಾವ ಆತಂಕ, ಪಾಪಪ್ರಜ್ಞೆಗಳಿಲ್ಲದೆಯೇ ಬದುಕುತ್ತಿದ್ದಾರೆ. ಹುಡುಕಿದರೆ ದೇಶದಾದ್ಯಂತ ಇಂಥ ಸಾವಿರಾರು ಉದಾಹರಣೆಗಳು ಸಿಗುತ್ತವೆ. ಇವೆಲ್ಲವೂ ಅತ್ಯಾಚಾರಗಳ ಘಟನೆಗಳ ಹಿಂದಿರುವ ಗಂಭೀರ ಸ್ಥಿತಿಯನ್ನು ಸಹಜಗೊಳಿಸಿಬಿಡುತ್ತವೆ. ನಮ್ಮ ಸಾಮಾಜಿಕ ಸ್ಥಿತಿ ಹೇಗಿದೆಯೆಂದರೆ, ಜಾತಿ, ಧರ್ಮ ಸಂಘರ್ಷಗಳು ನಡೆದ ಸಂದರ್ಭದಲ್ಲಿ ಒಂದು ಗುಂಪಿನ ಪುರುಷರು ಇನ್ನೊಂದು ಗುಂಪಿನ ಮಹಿಳೆಯರ ಮೇಲೆ ದೌರ್ಜನ್ಯ, ಅತ್ಯಾಚಾರ ನಡೆಸಿದರೆ, ಅತ್ಯಾಚಾರ ನಡೆಸಿದ ಗುಂಪಿನ ಪರವಾಗಿರುವ ಮಹಿಳೆಯರು ಹೆಮ್ಮೆಪಡುತ್ತಾರೆ. ಬಡವನ ಮೇಲೆ ಶೋಷಣೆ ನಡೆಯುತ್ತಿದೆ ಎಂದು ಹೇಳಿದರೆ ಎಷ್ಟು ಸಹಜವಾದ ಹೇಳಿಕೆಯಾಗುತ್ತದೋ ಹಾಗೆ ಹೆಣ್ಣಿನ ಮೇಲೆ ದೌರ್ಜನ್ಯ, ಅತ್ಯಾಚಾರ ನಡೆಯುತ್ತಿದೆ ಎಂದು ಹೇಳುವುದೂ ಅಷ್ಟೇ ಸಹಜವಾದ ಹೇಳಿಕೆಯಾಗುತ್ತಿದೆ.

ಒಟ್ಟಾರೆ ಇಂದು ಮಹಿಳೆಯ ಮೇಲೆ ಪ್ರತಿನಿತ್ಯ ನಡೆಯುತ್ತಿರುವ ವಿವಿಧ ರೀತಿಯ ದೌರ್ಜನ್ಯಗಳು ಮತ್ತು ಅತ್ಯಾಚಾರ, ಕೊಲೆಗಳು ಮಹಿಳೆಯರಲ್ಲಿ ಸದಾ ಆತಂಕ ಹಾಗೂ ಅಭದ್ರತೆಯನ್ನು ಹುಟ್ಟುಹಾಕಿವೆ. ಸರಕಾರ ಮತ್ತು ಎಲ್ಲ ಸಂಘಸಂಸ್ಥೆಗಳು, ಸಾರ್ವಜನಿಕರು ಈ ಕುರಿತು ಗಂಭೀರವಾಗಿ ಚಿಂತಿಸಬೇಕಾಗಿದೆ. ಅತ್ಯಾಚಾರ ಪ್ರಕರಣಗಳ ವಿರುದ್ಧ ತಾರತಮ್ಯ ರಹಿತವಾದ, ತೀವ್ರವಾದ, ತಕ್ಷಣದ ಪ್ರತಿರೋಧದ ಅವಶ್ಯಕತೆ ಇದೆ. ಅದಕ್ಕೆ ಸದಾ ಜಾಗೃತವಾದ, ಸಂವೇದನಾಶೀಲವಾದ ಸಮಾಜವನ್ನು ನಿರ್ಮಾಣ ಮಾಡುವುದು ಎಲ್ಲರ ಜವಾಬ್ದಾರಿ. ಸಾಮಾಜಿಕ ಆರೋಗ್ಯವನ್ನು ಕಾಪಾಡಿಕೊಳ್ಳುವಲ್ಲಿ ಸರಕಾರದಷ್ಟೇ ಜವಾಬ್ದಾರಿ ಸಾರ್ವಜನಿಕರಿಗೂ ಇದೆ. ಅನ್ಯಾಯ ನಡೆದಾಗ ಅದಕ್ಕೊಂದು ಧಿಕ್ಕಾರ ಹೇಳಬೇಕೆನ್ನುವ ಮನೋಭಾವವೂ ಮೂಡದಿದ್ದರೆ ಅದು ನಾಗರಿಕ ಸಮಾಜವಾಗುವುದಿಲ್ಲ. ನಾನು, ನನ್ನ ಮನೆ ಸುರಕ್ಷಿತವಾಗಿರಬಹುದು. ಆದರೆ ಊರು ಸುರಕ್ಷಿತವಾಗಿಲ್ಲ ಎಂಬ ಸತ್ಯವನ್ನು ಮನಗಾಣಬೇಕು.

## ಮಂಡೂರಿನ ಜನರ ಬವಣೆ, ಗೋಳು - ಸರಕಾರದ ಅಸಡ್ಡೆ

ಏಳು ವರ್ಷಗಳಿಂದ ಬೆಂಗಳೂರಿನ ಕಸದ ರಾಶಿಯ ಬೆಟ್ಟ ಬೆಳೆಯುತ್ತಿರುವುದನ್ನು ಕಾಣುತ್ತಿರುವ, ಅದರ ಗಬ್ಬುನಾತವನ್ನು ಅನುಭವಿಸುತ್ತಿರುವ ಮಂಡೂರಿನ ಜನ ಪರಿಹಾರಕ್ಕೆ ಪಟ್ಟು ಹಿಡಿದಿರುವುದು ಆಶ್ಚರ್ಯವೇನಲ್ಲ. ಬೆಂಗಳೂರು ನಗರದ ಹೊರವಲಯದಲ್ಲಿ ಕೃಷ್ಣರಾಜಪುರ ಮತ್ತು ಹೊಸಕೋಟೆಯ ಮಧ್ಯೆ ಹೆದ್ದಾರಿಯಿಂದ ಒಳಗಿರುವ ಮಂಡೂರು ಹಾಗೂ ಸುತ್ತಮುತ್ತಲ ಗ್ರಾಮಸ್ಥರು ವಿಮೋಚನೆಗಾಗಿ ಮಾಡಿಕೊಂಡ ಮನವಿಗಳು, ನಡೆಸಿದ ಚಳವಳಿಗಳು ಬೃಹತ್ ಬೆಂಗಳೂರು ನಗರ ಪಾಲಿಕೆ, ಕರ್ನಾಟಕ ಸರಕಾರಗಳ ಕಣ್ಣು ತೆರೆಸಲೇ ಇಲ್ಲ. ಸುಳ್ಳು ಭರವಸೆಗಳನ್ನು ನೀಡಿ ಕಾಲ ನೂಕುತ್ತ ಬಂದ ಸರಕಾರ ಮತ್ತು ಪಾಲಿಕೆಯ ನೀತಿಯಿಂದ ಬೇಸತ್ತ ಗ್ರಾಮಸ್ಥರು ಈಗ ಹೋರಾಟದ ಹಾದಿ ತುಳಿದಿದ್ದಾರೆ. ರಸ್ತೆ ತಡೆ, ಸರದಿ ಉಪವಾಸ ಸತ್ಯಾಗ್ರಹ ಪ್ರಾರಂಭಿಸಿದ್ದಾರೆ. ಕಸದ ರಾಶಿಯ ಗೋಪುರದಿಂದ ಬೀಸುವ ಗಾಳಿಯಿಂದ ಜನ ಅನಾರೋಗ್ಯಕ್ಕೀಡಾಗಿದ್ದಾರೆ. ಇದರಿಂದ ಸಾವು ಕೂಡ ಸಂಭವಿಸಿದೆ. ಈ ಗ್ರಾಮಸ್ಥರ ನ್ಯಾಯವಾದ ಬೇಡಿಕೆಗೆ, ಅವರು ನಡೆಸುತ್ತಿರುವ ಹೋರಾಟಕ್ಕೆ ಬೆಂಗಳೂರಿನ ನಾಗರಿಕರು ಪೂರ್ಣಬೆಂಬಲ ನೀಡುವುದರ ಜೊತೆಗೆ ತ್ಯಾಜ್ಯ ನಿರ್ವಹಣೆಗೆ ಶಾಶ್ವತವಾದ ಪರಿಹಾರ ಕಾಣಬೇಕೆಂದು ಸರಕಾರ ಮತ್ತು ಪಾಲಿಕೆಯ ಮೇಲೆ ಒತ್ತಾಯ ತರುವುದು ಅತ್ಯಗತ್ಯ.

ಮಂಡೂರು ಸುತ್ತಮುತ್ತಲ ಗ್ರಾಮಸ್ಥರಿಗೆ ಪಾಲಿಕೆ ಅಧಿಕಾರಿಗಳು ಬೆಂಗಳೂರಿನ ಕಸವನ್ನು ಹಾಕುವುದಕ್ಕೆ ಮುನ್ನ ನೀಡಿದ್ದ ಯಾವ ಭರವಸೆಯನ್ನೂ ಈವರೆಗೆ ಪಾಲಿಸಿಲ್ಲ. ಈ ಪ್ರದೇಶದಲ್ಲಿ ಕಸ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಿ, ವಿದ್ಯುತ್ ಕೇಂದ್ರವನ್ನು ಸ್ಥಾಪಿಸಿ ಗ್ರಾಮಗಳಿಗೆ ವಿದ್ಯುತ್ ಒದಗಿಸುವ ಯೋಜನೆ ಕಾಗದದ ಮೇಲೆ ಉಳಿದಿದೆಯೇ ಹೊರತು ಬೇರೇನೂ ಆಗಿಲ್ಲ. ಕಸದ ರಾಶಿ ಮಾತ್ರ ಬೆಳೆಯುತ್ತಾ ಹೋಗಿ ಗ್ರಾಮಸ್ಥರ ಜೀವನವನ್ನು




ತಿಂಗಳ ಪತ್ರಿಕೆ
**ಹೊಸತು**
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ – ೫೮೫ ೧೦೨
✆ : ೦೮೪೭೨-೨೨೪೩೦೨

ನರಕವಾಗಿಸಿತು. ಈ ವಿಚಾರ ಕರ್ನಾಟಕದ ಉಚ್ಚ ನ್ಯಾಯಾಲಯದ ಮೆಟ್ಟಿಲೇರಿ, ನ್ಯಾಯಾಲಯ ಬೆಂಗಳೂರು ನಗರ ಪಾಲಿಕೆ ಮತ್ತು ಸರಕಾರವನ್ನು ತರಾಟೆಗೆ ತೆಗೆದುಕೊಂಡರೂ ಪ್ರಯೋಜನವಾಗಲಿಲ್ಲ. ಇದೀಗ ಕೆಲವು ಸಂಸ್ಥೆಗಳು ನ್ಯಾಯಾಲಯ ನಿಂದನೆಯ ಪ್ರಕರಣ ದಾಖಲಿಸಿವೆ. ಹಿಂದೊಮ್ಮೆ ಭಾಜಪ ಸರಕಾರ ಅಧಿಕಾರದಲ್ಲಿದ್ದಾಗ, ಬೃಹತ್ ಬೆಂಗಳೂರು ನಗರ ಪಾಲಿಕೆಯೂ ಕೂಡ ಭಾಜಪದ ಕೈಯಲ್ಲೇ ಇತ್ತು. ಕಸ ಹೊತ್ತು ತಂದ ಲಾರಿಗಳನ್ನು ಮಂಡೂರಿನ ಜನ ತಡೆದು ಇನ್ನು ಮುಂದೆ ತಮ್ಮ ಗ್ರಾಮದಲ್ಲಿ ತ್ಯಾಜ್ಯ ಸುರಿಯಲು ಅವಕಾಶ ನೀಡುವುದಿಲ್ಲ ಎಂದು ಪ್ರತಿಭಟನೆ ನಡೆಸಿದರು. ಆಗ ಬೆಂಗಳೂರು ನಗರ ಸಿಲಿಕಾನ್ ಸಿಟಿಯಾಗಿದ್ದೂ ಉದ್ಯಾನನಗರಿಯಾಗಿರದೆ ಎಲ್ಲೆಲ್ಲೂ ಕಸದ ರಾಶಿ ತುಂಬಿ 'ಗಾರ್ಬೇಜ್ ಸಿಟಿ' ಎಂದು ಕುಖ್ಯಾತಿಗೀಡಾಯಿತು. ರಾಜ್ಯದ ಹೈಕೋರ್ಟ್ ಆಗ ಎಚ್ಚೆತ್ತು ಸ್ವಯಂಪ್ರೇರಣೆಯಿಂದ ಸರಕಾರ ಮತ್ತು ಪಾಲಿಕೆಯನ್ನು ತರಾಟೆಗೆ ತೆಗೆದುಕೊಂಡು ಸಮಸ್ಯೆಗೆ ಪರಿಹಾರ ಕಾಣಬೇಕೆಂದು ತಾಕೀತು ಮಾಡಿದ್ದನ್ನು ನೆನಪಿಸಿಕೊಳ್ಳಬಹುದು. ಆಗ ಏನೋ ತಾಟಾ ಪೋಟಿ ಮಾಡಿ ಗ್ರಾಮಸ್ಥರಿಗೆ ಭರವಸೆಗಳನ್ನು ನೀಡಿ ಮತ್ತೆ ಸಮಸ್ಯೆಯನ್ನು ಹಾಗೇ ಕೊಳೆಯಲು ಬಿಡಲಾಯಿತು. ಸರಕಾರ ಆಗ ನಗರದ ತ್ಯಾಜ್ಯ ವಿಲೇವಾರಿಗೆ ಬೇರೇ ವ್ಯವಸ್ಥೆ ಮಾಡುವುದಾಗಿ, ತ್ಯಾಜ್ಯ ಸಂಸ್ಕರಣೆ ಸ್ಥಾವರಗಳನ್ನು ನಿರ್ಮಿಸುವುದಾಗಿ ಭರವಸೆ ನೀಡಿತು. ಆದರೆ ಅದು ಮಾಮೂಲಿನಂತೆ ಭರವಸೆಯಾಗಿ ಉಳಿಯಿತು.

ಈಗ ಮಂಡೂರಿನ ಹಾಗೂ ಅದರ ಆಸುಪಾಸಿನ ಜನ ಎಚ್ಚೆತ್ತು ಸರಕಾರದ ಆಶ್ವಾಸನೆಗಳಿಗೆ ಮಣಿಯದೆ ಹೋರಾಟ ಮುಂದುವರಿಸಿದ್ದಾರೆ. ಸಿದ್ದರಾಮಯ್ಯ ಸರಕಾರ ಕೇಳಿರುವ ಆರು ತಿಂಗಳ ಕಾಲಾವಕಾಶವನ್ನು ಜನ ನ್ಯಾಯವಾಗಿಯೇ ತಿರಸ್ಕರಿಸಿದ್ದಾರೆ. ಸರಕಾರ ಜನರ ಹೋರಾಟವನ್ನು ಬಗ್ಗುಬಡಿಯಲು ಆ ಪ್ರದೇಶದಲ್ಲಿ ನಿಷೇಧಾಜ್ಞೆ ವಿಧಿಸಿದೆ. ಹಲವು ಮಂದಿ ಹೋರಾಟಗಾರರನ್ನು ಬಂಧಿಸಿದೆ. ಪ್ರತಿದಿನ ಸಮಸ್ಯೆ ಉಲ್ಬಣವಾಗುತ್ತಿದೆ. ಬೇಸತ್ತ ಗ್ರಾಮದ ಜನ ಒಂದುಗೂಡಿ ಹೋರಾಟ ನಡೆಸುತ್ತಿದ್ದಾರೆ. ಸರಕಾರ ಮತ್ತು ಪಾಲಿಕೆ ಮಾತ್ರ ಬೀಸೋ ದೊಣ್ಣೆ ತಪ್ಪಿದರೆ ಸಾಕು ಎನ್ನುವ ನೀತಿ ಅನುಸರಿಸುತ್ತಿವೆ. ಬೆಂಗಳೂರು ನಗರ ಪಾಲಿಕೆ ಮತ್ತು ಸರಕಾರ ಹಾಗೂ ತ್ಯಾಜ್ಯ ವಿಲೇವಾರಿ ಕಂಟ್ರಾಕ್ಟರುಗಳು ಒಂದು ಮಾಫಿಯಾ ಆಗಿ ವರ್ತಿಸುತ್ತಿವೆ ಎನ್ನುವುದು ಜನರ ಆರೋಪ. ಇದು ನಿಜ ಕೂಡ. ಭ್ರಷ್ಟತೆಗೆ ಗೂಡಾಗಿರುವ ನಗರ ಪಾಲಿಕೆ ಹಾಗೂ ಅಧಿಕಾರಿಗಳು ಮತ್ತು ಕಂಟ್ರಾಕ್ಟರುಗಳು ಇದರಲ್ಲಿ ಶಾಮೀಲಾಗಿದ್ದಾರೆ. ತ್ಯಾಜ್ಯ ವಿಂಗಡನೆ, ಸಂಸ್ಕರಣೆ ಹೊಣೆ ಹೊತ್ತಿರುವ ಕಂಟ್ರಾಕ್ಟರುಗಳು ಏನೂ ಮಾಡದೆ ಕಸದ ರಾಶಿ ಹಾಕುತ್ತಿದ್ದಾರೆ ಅಷ್ಟೆ. ಪ್ರತಿದಿನ ಬೆಂಗಳೂರು ನಗರದಲ್ಲಿ ಸುಮಾರು ನಾಲ್ಕು ಸಾವಿರ ಟನ್ ತ್ಯಾಜ್ಯ ಉತ್ಪತ್ತಿಯಾಗುತ್ತಿದೆ. ಇದರಲ್ಲಿ ೨೦೦೦ ಟನ್‌ಗಳನ್ನು ಮಂಡೂರಿನಲ್ಲಿ ಸುರಿಯ ಲಾಗುತ್ತಿದೆ. ಹೋರಾಟಕ್ಕೆ ಬೆಂಬಲ ನೀಡಿ ಅದರಲ್ಲಿ ಭಾಗವಹಿಸುತ್ತಿರುವ ಹಿರಿಯ ಸ್ವಾತಂತ್ರ್ಯ ಹೋರಾಟಗಾರ ದೊರೆಸ್ವಾಮಿಯವರ ಪ್ರಕಾರ ಜನ ಅಲ್ಲಿ ಹೇಗೆ ವಾಸಿಸುತ್ತಿದ್ದಾರೆ ಎಂದು ಊಹಿಸಿಕೊಳ್ಳುವುದೂ ಕಷ್ಟ, ಅಷ್ಟು ಗಟ್ಟುನಾತ ಹೊಡೆಯುತ್ತಿರುತ್ತದೆ. ಮಾಜಿ ಸಚಿವ ಕಾಂಗ್ರೆಸ್ಸಿನ ಬಿ. ಕೆ. ಚಂದ್ರಶೇಖರ್ ಕಸದ ಮಾಫಿಯಾ ಬಗ್ಗೆ ನ್ಯಾಯಾಂಗ ತನಿಖೆ ನಡೆಯಬೇಕೆಂದು ಒತ್ತಾಯಪಡಿಸಿದ್ದಾರೆ.

ಮಂಡೂರಿನ ಜನರು ಹೋರಾಟ ಹೂಡಿದ ಮೇಲೆ ಎಚ್ಚೆತ್ತ ಮುಖ್ಯಮಂತ್ರಿಗಳು ಅವರೊಂದಿಗೆ ನಡೆಸಿದ ಮಾತುಕತೆ ವಿಫಲವಾಗಿದೆ. ಆರು ತಿಂಗಳ ಕಾಲಾವಕಾಶವನ್ನು ನೀಡಲು ಹೋರಾಟಗಾರರು ನಿರಾಕರಿಸಿದ್ದಾರೆ. ಅದು ನ್ಯಾಯಯುಕ್ತವೂ ಆಗಿದೆ. ಅಧಿಕಾರವಹಿಸಿಕೊಂಡು ಒಂದು ವರ್ಷವಾದರೂ ಸಮಸ್ಯೆಯತ್ತ ಗಮನಹರಿಸದ ಸರಕಾರ ಇನ್ನಾದರೂ ಗಮನಹರಿಸುವ ಭರವಸೆ ಏನಿದೆ. ಸರಕಾರ ಲಿಖಿತ ಭರವಸೆ ನೀಡಿದರೆ ಮಾತ್ರ ಮೂರು ತಿಂಗಳ ಕಾಲಾವಕಾಶ ನೀಡಬಹುದು ಎಂದು ಹೋರಾಟಗಾರರ ವಕ್ತಾರರು ಹೇಳಿದ್ದಾರೆ. ಸರಕಾರ ಅದಕ್ಕೆ ಸಿದ್ಧವಿದೆಯೆ? ಅಂತೂ ಬೆಂಗಳೂರು ನಗರದ ಕಸ ವಿಲೇವಾರಿ ಸಮಸ್ಯೆ ಮಾತ್ರ ಹಾಗೆಯೇ ಉಳಿದಿದೆ. ಇಡೀ ರಾಜಧಾನಿಯೇ ಕೊಳಚೆ ಪ್ರದೇಶವಾಗುವ ಕಾಲ ದೂರವಿಲ್ಲ ಎನ್ನೋಣವೆ? ಮಂಡೂರಿನ ಜನರ ಗೋಳೂ ಬಗೆಹರಿಯುವುದಿಲ್ಲ ಎಂದು ಕಾಣುತ್ತದೆ. ಸದ್ಯಕ್ಕೆ ಒಂದು ಒಪ್ಪಂದವಂತೂ ಆಗಿದೆ. ಆದರೆ ನಾಳೆ ಏನು?

ಈ ತಿಂಗಳು (೩ನೇ ಪುಟದಿಂದ)

ಇದು ಜನರನ್ನು ಅನಾಮಧೇಯರನ್ನಾಗಿ ಮಾಡಿ ಹೊಸಕಿಹಾಕುವ ಕ್ರೂರ ಯೋಜನೆ. ಇದು ಬೇಡ. ಬೇಕೇಬೇಕೆಂದು ಒಂದು ವರ್ಗದ ಜನ ಹಠ ತೊಟ್ಟರೆ, ಮೊದಲು ನಿರ್ವಸಿತರಾಗುವ ಜನರ ಜೀವನಕ್ಕೆ ಸ್ಥಿರವಾದ ಆಧಾರ ಒದಗಿಸಿ; ಅದರ ನಂತರ ಅಣೆಕಟ್ಟನ್ನು ಎತ್ತರಿಸುವ ಯೋಚನೆ ಮಾಡುವಿರಂತೆ. ಜನರನ್ನು ನಿರ್ಲಕ್ಷಿಸಿ ಪ್ರಗತಿ ಹೊಂದುತ್ತೇವೆಂಬುದು ಅತ್ಯಂತ ಕೀಳಾದ ಮನೋಭಾವ," ಎಂದು.

✶ ✶ ✶

ನರ್ಮದಾ ತೀರ್ಮಾನಕ್ಕೂ ಮುಂಚೆ ಮೋದಿ ಸರ್ಕಾರವು ಇನ್ನೊಂದು ಪ್ರಮುಖ ತೀರ್ಮಾನ ಕೈಗೊಂಡಿತು. ಮಂತ್ರಿಗಳೆಲ್ಲಾ ಪ್ರಮಾಣ ವಚನ ಸ್ವೀಕರಿಸಿದ ೨೪ ಗಂಟೆಗಳಲ್ಲಿ ಈ ತೀರ್ಮಾನ ಹೊರಬಿತ್ತು. ಅಂದರೆ, ಮೋದಿ ಪಕ್ಷದ ಬಹಳ ಹಳೆಯ ನಿಲುವು ಅದು; ಇಂದು ಅದು ಪ್ರಕಟವಾಗಿದೆ. ಅರುಣ್ ಜೇಟ್ಲಿಯವರ ಮಿದುಳಿನಲ್ಲಿ ಈ ಹುಳ ಕೊರೆಯುತ್ತಿತ್ತು ಮತ್ತು ಅವರು ಸಚಿವರಾದ ಕೂಡಲೆ ಅದನ್ನು ಸರ್ಕಾರದ ನೀತಿ ಮತ್ತು ತೀರ್ಮಾನವೆಂದು ಹುಳುವನ್ನು ಹೊರಬಿಟ್ಟರು. ಏನದು ತೀರ್ಮಾನ? ದೇಶದ ರಕ್ಷಣಾ ವಿಷಯಕ್ಕೆ ಸಂಬಂಧಿಸಿದ್ದು. ಆಯುಧ, ಅಸ್ತ್ರ, ಕ್ಷಿಪಣಿ, ಮದ್ದುಗುಂಡು, ಇತ್ಯಾದಿ ಶಸ್ತ್ರಾಸ್ತ್ರ ತಯಾರಿಕೆಯ ಕ್ಷೇತ್ರದಲ್ಲಿ ವಿದೇಶಿ ಬಂಡವಾಳವು ನೂರಕ್ಕೆ ನೂರರಷ್ಟು ಹೂಡಿಕೆಯಾಗುವಂತೆ ಈವರೆಗೆ ಜಾರಿಯಲ್ಲಿದ್ದ ನಿಯಮವನ್ನು ಸಡಿಲಿಸುವುದು. ಇತ್ತೀಚೆಗೆ ಭೂತಾನ್‌ಗೆ ತೆರಳುವ ಮುಂಚೆ ಪ್ರಧಾನಿ ಹೇಳಿದರು, "ನಮ್ಮ ದೇಶವು ಶಸ್ತ್ರಾಸ್ತ್ರಗಳನ್ನು ದೊಡ್ಡ ಪ್ರಮಾಣದಲ್ಲಿ ಮಾರುವ ದೇಶವಾಗಬೇಕು", ಎಂದು. ಯಾರಿಗೆ ಮಾರೋಣ? ಪಾಕಿಸ್ತಾನಕ್ಕೆ, ಇಸ್ರೇಲಿಗೆ, ಸೂಡಾನ್‌ಗೆ, ಸೋಮಾಲಿಯಾಕ್ಕೆ, ತಾಲಿಬಾನರಿಗೆ, ಹೀಗೆ ಇವರಲ್ಲಿ ಯಾರಿಗೆ ಮಾರೋಣ? ಶಸ್ತ್ರಾಸ್ತ್ರಗಳ ಮಾರಾಟವು ಆರ್ಥಿಕತೆಯ ಬೆನ್ನೆಲುಬಾಗಿರುವುದು ಸ್ವೀಡನ್ನಿನಂತಹ ದೇಶಗಳಿಗೆ. ನಾವು ಆ ದೇಶಗಳಿಗೆ ಸೆಡ್ಡುಹೊಡೆದು ಅಂತರರಾಷ್ಟ್ರೀಯ ಆಯುಧ ಮಾರಾಟದಲ್ಲಿ ಸ್ಪರ್ಧಿಗಳಾಗುತ್ತೇವೆಯೆ? ಇದಕ್ಕಿಂತಲೂ ಮುಖ್ಯವಾದ ಬೇರೊಂದು ಅಂಶವಿದೆ: ನಮ್ಮಲ್ಲಿ ಎಂತೆಂತಹ ಆಯುಧಗಳಿವೆ, ಅವುಗಳ ತಯಾರಿಕೆಗೆ ತಂತ್ರಜ್ಞಾನ ಎಂಥದು, ಅವುಗಳ ಪ್ರಮಾಣ ಎಷ್ಟಿದೆ, ಅವೆಲ್ಲಾ ಎಲ್ಲಿ ಶೇಖರಗೊಂಡಿವೆ, ಎಂಬ ವಿಷಯಗಳೆಲ್ಲಾ ವಿದೇಶಿ ಬಂಡವಾಳ ಹೂಡುವ ಸಂಸ್ಥೆಗೆ ಮತ್ತು ತನ್ಮೂಲಕ ವಿವಿಧ ದೇಶಗಳ ಸರ್ಕಾರಗಳಿಗೆ ಸಂಪೂರ್ಣವಾಗಿ ಗೊತ್ತಿರುವ ಸಂಗತಿಗಳಾಗುತ್ತವೆ. "ಈಗಲೂ ಗೊತ್ತಿಲ್ಲವೆ?" ಎಂದು ಉದ್ಗಾರ ತೆಗೆಯಬಹುದು. ಅಮೆರಿಕಾದ ಸೆಟಲೈಟ್‌ಗಳು ಗ್ರಹಿಸದಿರುವುದು ಏನೂ ಇಲ್ಲ. ಅದನ್ನು ಸ್ನೋಡೆನ್ ತಿಳಿಸಿಕೊಟ್ಟಿದ್ದಾನೆ. ವಿದೇಶಿ ಬಂಡವಾಳ ಹೂಡಿ ಸ್ಥಾಪನೆಗೊಳ್ಳುವ ಕಾರ್ಖಾನೆಗಳ ಇಡೀ ಚಿತ್ರವು ಸೆಟಲೈಟ್ ಇಲ್ಲದೆಯೂ ಅಮೆರಿಕಾಕ್ಕೆ ತಿಳಿಯುವಂತಾಗಬೇಕೆ? ಈ ಬಗೆಗಿನ ನಿರ್ಧಾರದಲ್ಲಿ ನಾವು ದುಡುಕಬಾರದು, ಅದರ ಪೂರ್ವಾಪರಗಳನ್ನು ಗಂಭೀರವಾಗಿ ಯೋಚಿಸಬೇಕು. ವಿದೇಶಿ ಬಂಡವಾಳವಿಲ್ಲದೆಯೂ ನಮ್ಮ ದೇಶವು ಶಸ್ತ್ರಾಸ್ತ್ರ ತಯಾರಿಕೆಯಲ್ಲಿ ಸಾಕಷ್ಟು ಸ್ವಾವಲಂಬಿಯಾಗಿದೆ. ತಂತ್ರಜ್ಞಾನವಿದ್ದೂ ಅದನ್ನು ಬಳಸದೆ ಆಮದಿಗೆ ಕಟ್ಟುಬಿದ್ದಿರುವುದಕ್ಕೆ ಕಾರಣ ಶಸ್ತ್ರಾಸ್ತ್ರ ವ್ಯಾಪಾರದಲ್ಲಿ ಲಾಭ ಮಾಡಿಕೊಳ್ಳುತ್ತಿರುವ ದುರುಳರ ಪ್ರಭಾವ. ನಮ್ಮ ಬೆಂಗಳೂರಿನಲ್ಲೇ ಇರುವ ಹಿಂದುಸ್ತಾನ್ ಏರೊನಾಟಿಕ್ಸ್‌ನಲ್ಲಿ ಕೆಲಸ ಮಾಡುವ ಉನ್ನತ ಹಂತದ ಅಧಿಕಾರಿಗಳನ್ನು ಮತ್ತು ತಂತ್ರಜ್ಞರನ್ನು ಕೇಳಿದರೆ ಈ ಬಗ್ಗೆ ಬೇಕಾದಷ್ಟು ಮಾಹಿತಿ ನೀಡಬಲ್ಲರು. ಮೋದಿ ಮತ್ತು ಜೇಟ್ಲಿ ದೇಶದ ಸುರಕ್ಷತೆಯ ಕಾರಣಕ್ಕಾಗಿ ಮೊದಲು ಈ ಕೆಲಸವನ್ನು ಮಾಡಬೇಕೆಂದು ವಿನಂತಿಸಿಕೊಳ್ಳೋಣ, ಶೇಕಡ ನೂರರಷ್ಟು ವಿದೇಶಿ ಬಂಡವಾಳದ ಹೂಡಿಕೆ ಈ ಕ್ಷೇತ್ರಕ್ಕೆ ಸರ್ವಥಾ ಸಲ್ಲದು.

✶ ✶ ✶

ಮೋದಿಯವರು ಪ್ರಧಾನಿಯಾಗುತ್ತಾರೆಂದು ತಿಳಿದ ಕ್ಷಣದಿಂದ ಅಮೆರಿಕಾ ಮತ್ತು ಒಬಾಮ ನಮ್ಮ ಪ್ರಧಾನಿಯನ್ನು ಹಾಡಿಹೊಗಳಲು ಆರಂಭಿಸಿದ್ದು, ದೂರವಾಣಿ ಕರೆಗಳನ್ನು ಮಾಡಿದ್ದು, ವೀಸಾ ಕೊಡಲು ಸಮ್ಮತಿಸಿದ್ದು, ಕೆಲವು ಉನ್ನತಮಟ್ಟದ ಅಧಿಕಾರಿಗಳು ಭಾರತಕ್ಕೆ ದೌಡಾಯಿಸಿದ್ದು, ಪರಸ್ಪರ ಸಹಕಾರದಿಂದ ಸ್ವರ್ಗ ನಿರ್ಮಿಸೋಣ ಎಂಬ ಘೋಷಣೆಗಳನ್ನು ಕೊಟ್ಟಿದ್ದು, ಇದೆಲ್ಲದರ ಹಿಂದಿನ ತುಡಿತವೇನು, ಹುನ್ನಾರವೇನು? ನಮ್ಮ ದೇಶದ ಮೇಲೆ ಪ್ರೀತಿ ಉಕ್ಕಿ ಹರಿದಿದೆಯೆ? ಹಾಗಿದ್ದರೆ ನಮ್ಮ ಕೆಲವು ನೆರೆರಾಷ್ಟ್ರಗಳಿಗೆ ಶಸ್ತ್ರಾಸ್ತ್ರ ಸರಬರಾಜನ್ನು

ಅಮೇರಿಕಾ ನಿಷೇಧಿಸಲು ಸಿದ್ಧವಿದೆಯೆ? ಮನಮೋಹನಸಿಂಗ್ –ನಟ್ವರ್‌ಸಿಂಗ್ ಸೇರಿ ಅಮೇರಿಕಾದ ಪರಮಾಣು ರೀಯಾಕ್ಟರ್‌ಗಳ ಖರೀದಿಯ ಬಗೆಗೆ ತೀರ್ಮಾನ ಕೈಗೊಂಡಿದ್ದು, ರೀಯಾಕ್ಟರ್‌ಗಳಿಂದ ಹಾನಿಯುಂಟಾದರೆ ಅಷ್ಟೇನೂ ಪರಿಹಾರ ನೀಡಬೇಕಾಗಿಲ್ಲವೆಂದು ಒಪ್ಪಂದದಲ್ಲಿ ತುರುಕಿದ್ದು, ಅಮೇರಿಕಾದ ಜನರಲ್ ಇಲೆಕ್ಟ್ರಿಕ್ ಕಂಪನಿಯು ತಯಾರಿಸಿರುವ ರೀಯಾಕ್ಟರ್ ಯಂತ್ರಗಳು ಮಾರುಕಟ್ಟೆ ಇಲ್ಲದೆ ಕೊಳೆಯುತ್ತಾ ಬಿದ್ದಿರುವುದು, ತುರ್ತಾಗಿ ಅವನ್ನು ಮಾರಿಬಿಡಬೇಕೆಂಬ ಒಬಾಮ ತರಾತುರಿ, ಇವನ್ನೆಲ್ಲಾ ನಾವು ಮರೆತಿಲ್ಲ ತಾನೆ? ಅಮೇರಿಕಾದ ಇಂದಿನ ಸಂಭ್ರಮದ ಹಸ್ತಲಾಘವದ ಹಿನ್ನೆಲೆಯಲ್ಲಿ ಈ ಧೃತರಾಷ್ಟ್ರಾಲಿಂಗನದ ಒತ್ತಾಸೆ ಇದೆ. ಬೇರೆ ದೇಶಗಳು ನಿರಾಕರಿಸುತ್ತಿರುವ ರೀಯಾಕ್ಟರ್‌ಗಳಿಗೆ ಭಾರತವು ನೆಲೆ ನೀಡಬೇಕೆ? ಅಮೇರಿಕಾದ ಜನರಲ್ ಇಲೆಕ್ಟ್ರಿಕ್ ಕಂಪನಿಯ ಗುಜರಿ ಯಂತ್ರಗಳನ್ನು ತ್ಯಾಜ್ಯವಸ್ತುಗಳಂತೆ ಸುರಿದುಬಿಡಲು ಇಡೀ ಭಾರತವನ್ನು ನಾವು ಮಂಡೂರು ಮಾಡಕೂಡದು. ಆದರೆ ನಮಗೆ ಕಾಳಜಿ ಬೇಡವೆ? ಮೋದಿ – ಜೇಟ್ಲಿ – ಸುಷ್ಮಾ ಅವರು ಇದನ್ನು ಆಲೋಚಿಸಲಿ.

✶ ✶ ✶

ಶ್ರೀಮತಿ. ಸ್ಮೃತಿ ಇರಾನಿಯವರು ನಮ್ಮ ದೇಶದ ಮಾನವ ಸಂಪನ್ಮೂಲ ಸಚಿವರಾಗಿ ಅಧಿಕಾರ ಸ್ವೀಕರಿಸಿದ ತರುವಾಯದಲ್ಲಿ ಅವರ ವಿದ್ಯಾರ್ಹತೆಯ ಬಗ್ಗೆ ಅನಗತ್ಯವಾದ ಮತ್ತು ಅನಂಗೀಕಾರಾರ್ಹವಾದ ಟೀಕೆಗಳನ್ನು ಮಾಡಲಾಯಿತು. ಶ್ರೀಮತಿ. ಇರಾನಿಯವರು ನಿರರ್ಗಳವಾಗಿ ಮಾತನಾಡುತ್ತಾರೆ. ವಿಚಾರಗಳ ಗ್ರಹಿಕೆ ಮತ್ತು ಸಂವಹನದಲ್ಲಿ ಅವರು ಚತುರರು. ಆದರೆ ಒಂದು ಸಮಸ್ಯೆ ಇದೆ: ಅವರ ಗ್ರಹಿಕೆಯು ಗೊಲ್ವಾಲ್ಕರ್ – ಮೋಹನ್ ಭಾಗವತ್ ಅವರ ವಿಚಾರ ಪರಂಪರೆಗೆ ಸೇರಿದೆ. ಅಂದರೆ, ಅದಕ್ಕಷ್ಟೇ ಸೀಮಿತವಾಗಿದೆ ಎನ್ನಲಾಗದು. ಗೊಲ್ವಾಲ್ಕರ್ ಅವರಂತೆ ಇರಾನಿಯವರು ಸಹ 'ಜನನೀ ಜನ್ಮ ಭೂಮಿಶ್ಚ' ಮತ್ತು 'ವಸುಧೈವ ಕುಟುಂಬಕಂ' ಎಂಬ ಶ್ಲೋಕಗಳನ್ನು ಉದ್ಧರಿಸದೆ ಇರುವುದಿಲ್ಲ. ನಮ್ಮ ದೇಶದ ಸಮಕಾಲೀನ ಶಿಕ್ಷಣ ವ್ಯವಸ್ಥೆಯ ಮಾರ್ಪಾಟು, ಹೊಸ ಕ್ರಮಗಳು, ಹೊಸ ದೃಷ್ಟಿ, ಹೊಸ ಪಠ್ಯಗಳು, ಮುಂತಾದ ಪ್ರಶ್ನೆಗಳು ಬಂದಾಗ ಈ ಧೋರಣೆಯು ಸಮಗ್ರ ಉತ್ತರ ನೀಡಲಾರದು. ಅವರನ್ನು ಆ ಕಾರ್ಯಸೂಚಿಯ ಅಳವಡಿಕೆಗೆ ಸಾಧನವನ್ನಾಗಿ ಮಾಡಿಕೊಳ್ಳುವುದು ಸುಲಭವೆಂದೋ ಏನೋ ಅವರಿಗೆ ಈ ಖಾತೆಯನ್ನು ವಹಿಸಿಕೊಟ್ಟಿದ್ದಾರೆ ಎಂಬ ಶಂಕೆಗೆ ಆಸ್ಪದವಿದೆ. ಆ ಶಂಕೆಗೆ ಹುರುಳಿಲ್ಲ ಎಂಬುದನ್ನು ಆಕೆ ಪ್ರಾಯೋಗಿಕವಾಗಿ ಸಿದ್ಧಪಡಿಸಿ ಕೊಡುತ್ತಾರೆಯೆ, ಎಂಬುದನ್ನು ಕಾತುರದಿಂದ ನಿರೀಕ್ಷಿಸಬೇಕಾಗಿದೆ.

✶ ✶ ✶

ಸಿರಿಯಾದಲ್ಲಿ ಈಚೆಗೆ ನಡೆದ ಅಧ್ಯಕ್ಷೀಯ ಚುನಾವಣೆಯಲ್ಲಿ ಗೆದ್ದ ಅಸ್ಸಾದ್ 'ಸರ್ವಾಧಿಕಾರಿ'; ಆದ್ದರಿಂದ ಆ ಚುನಾವಣೆಗೆ ಬೆಲೆಯಿಲ್ಲ, ಎಂದು ಅಮೇರಿಕಾದ ಒಬಾಮ ಹೇಳಿದ್ದನ್ನು ಯಥಾವತ್ತಾಗಿ ವರದಿ ಮಾಡಿ, ಅದನ್ನು ಸಮರ್ಥಿಸಿದ ನಮ್ಮ ದೇಶದ ಮಾಧ್ಯಮಗಳಿಗೆ ಏನೆನ್ನಬೇಕು? ಮೋದಿಯವರ ಬಗೆಗೂ ಅಂಥದೇ ಮಾತನ್ನು ಹೇಳಲು ಅವಕಾಶ ಇದೆ, ಆದರೆ ಅದು ಯಥಾರ್ಥವಾಗುವುದಿಲ್ಲ. ಸಿರಿಯಾದಲ್ಲಿ ಒಬಾಮ ಮತದಾರರಲ್ಲ, ಅಲ್ಲಿಯ ಜನ ಮತದಾರರು. ಹಾಗಿದ್ದರೆ ಅಸ್ಸಾದ್ ಚುನಾಯಿತನಾದುದನ್ನು ಯಾವ ಕಾರಣಕ್ಕೆ ಪ್ರಶ್ನಿಸಬೇಕು? ಸಿರಿಯಾದ ಒಂದು ಭೌಗೋಳಿಕ ಭಾಗದಲ್ಲಿ ಜನರು ಮತ ಚಲಾಯಿಸಲಿಲ್ಲ ಎಂಬ ಕಾರಣಕ್ಕಾಗಿಯೇ? ಹಾಗಾಗಿದ್ದು ನಿಜ, ಅದಕ್ಕೆ ಅಮೇರಿಕಾ ಬೆಂಬಲಿತ ಜಡ್ಡು ಮತಾಂಧರ ದಂಡುಗಳು ಕಾರಣ. ಎಲ್ಲೆಲ್ಲೂ ಮತಾಂಧರನ್ನು ಹೀಗೆ ಪೋಷಿಸಿ ಬೆಳೆಸುವುದು ಅಮೇರಿಕಾದ ನೀಚ ಪ್ರವೃತ್ತಿಯಾಗಿಹೋಗಿದೆ. ಅದರ ಪರಿಣಾಮವಾಗಿ ಅರಬ್ ರಾಷ್ಟ್ರಗಳಲ್ಲಿ ಉದಾರವಾದಿ ಧೋರಣೆಯ ಆಡಳಿತಗಳನ್ನು ನಾಶಮಾಡಿ, ಮತಾಂಧ ಕ್ರೌರ್ಯದ ಉಪಟಳಕ್ಕೆ ಅಮೇರಿಕಾ ಮೂಲಕಾರಣವಾಗುತ್ತಿದೆ. ಇರಾಕ್, ಯೆಮೆನ್, ಆಫ್ಘಾನಿಸ್ತಾನ, ಸೋಮಾಲಿಯ, ಸಿರಿಯಾ, ಇವೆಲ್ಲಾ ಉದಾಹರಣೆಗಳು. ಹೀಗೆ ಬೆಳೆಸಿದ ನಂತರ ಅವರನ್ನು ಕೊಲ್ಲಲು 'ಡ್ರೋನ್' ಬಳಕೆಯಾಗುತ್ತದೆ. ಪಾಕಿಸ್ತಾನದ ಮೇಲೆ ಡ್ರೋನ್ ಧಾಳಿಯು ದೈನಂದಿನ ಚಟುವಟಿಕೆಯಾಗಿದೆ. ಡ್ರೋನ್ ಧಾಳಿಗೆ ತುತ್ತಾಗಿ ಸತ್ತವರನ್ನೆಲ್ಲಾ "ಭಯೋತ್ಪಾದಕರು" ಎಂದು ಬಣ್ಣಿಸಿಬಿಟ್ಟರೆ ಆಯಿತು! ಅವರು ಅಮಾಯಕ ಅಜ್ಜಿಗಳೋ, ಪುಟ್ಟ ಪಾಪುಗಳೋ ಆಗಿದ್ದರೂ ಅವರು ಭಯೋತ್ಪಾದಕರೆ!

✶ ✶ ✶

ಹಾನಿಕಾರಕ ಮೌಢ್ಯಾಚರಣೆಗಳನ್ನು ತಡೆಗಟ್ಟಲು ಕರ್ನಾಟಕದಲ್ಲಿ ಒಂದು ವಿಧೇಯಕವು ಜಾರಿಯಾಗಬೇಕೆಂಬ ಒತ್ತಾಯ ಕೆಲವು ವರ್ಷಗಳಿಂದ ಹೆಚ್ಚುತ್ತಾ ಬಂದಿದೆ. ಈಚೆಗೆ ಮಹಾರಾಷ್ಟ್ರದಿಂದ ಶ್ರೀಮತಿ. ಮುಕ್ತಾ ದಾಭೋಲ್ಕರ್‌ರವರು ಬೆಂಗಳೂರಿಗೆ ಬಂದಿದ್ದಾಗ ಹಲವು ಸಂಘಟನೆಗಳವರು ಜಂಟಿಯಾಗಿ ಒಂದು ಕಾರ್ಯಕ್ರಮವನ್ನೇರ್ಪಡಿಸಿ ಮಹಾರಾಷ್ಟ್ರದಲ್ಲಿ ಈ ಸಂಬಂಧವಾಗಿ ಜಾರಿಯಲ್ಲಿರುವ ಶಾಸನದ ಸ್ಥೂಲ ಪರಿಚಯ ಮಾಡಿಕೊಂಡರು. ಆ ಶಾಸನದಡಿ ಈವರೆಗೆ ಮಹಾರಾಷ್ಟ್ರದಲ್ಲಿ ಸುಮಾರು ಅರವತ್ತು ಮೊಕದ್ದಮೆಗಳು ದಾಖಲಾಗಿವೆ, ಆ ಪೈಕಿ ೧೫ ಇಸ್ಲಾಂ ಮತಾಂಧತೆಯ ಹಿನ್ನೆಲೆಯಲ್ಲಿ ಜರುಗಿವೆ ಎನ್ನಲಾದ ಹಾನಿಕಾರಕ ಆಚರಣೆಗಳು, ಎಂಬ ಒಂದು ಮಾಹಿತಿಯನ್ನು ಮುಕ್ತಾ ನೀಡಿದರು. ಎಲ್ಲ ಮತಧರ್ಮಗಳಲ್ಲಿರುವ ಹಾನಿಕಾರಕ ಆಚರಣೆಗಳನ್ನು, ವ್ಯಕ್ತಿಗಳ ಘನತೆಗೆ ಚ್ಯುತಿಯುಂಟುಮಾಡುವಂತಹ ಆಚರಣೆಗಳನ್ನು ಮತ್ತು ಇತರರನ್ನು ಶೋಷಣೆಗೆ ಗುರಿ ಮಾಡುವಂತಹ ಆಚರಣೆಗಳನ್ನು ನಿಷೇಧಿಸಬೇಕೆಂಬುದು ಇಂದಿನ ಒತ್ತಾಯವಾಗಿದೆ. ನಮ್ಮ ಕೆಲವು ಮಾಧ್ಯಮಗಳಿಗೆ ಇದು ಗೌಣವಾಗಿ ಹೋಯಿತು. ಅವಕ್ಕೆ ಗಂಟೆಗಟ್ಟಲೆ ವೃಥಾ ಚರ್ಚೆಗೆ ವಸ್ತುವಾಗಬಲ್ಲಂತಹ ಯಾವುದೋ ಒಂದು ಮಾತು ಪ್ರಮುಖವೆನಿಸಿಬಿಟ್ಟಿತು. ಎಷ್ಟೋ ವರ್ಷಗಳ ಹಿಂದೆ ಡಾ॥ ಯು. ಆರ್. ಅನಂತಮೂರ್ತಿಯವರು ಬರೆದಿದ್ದ ಅವರ ಬಾಲ್ಯದ ಒಂದು ಕುತೂಹಲ ಮತ್ತು ನೆನಪು ಇಂದು ಕೆಲವರಿಗೆ "ಮನಸ್ಸಿಗೆ ಅತೀವ ನೋವು" ತರುವ ಸಂಗತಿಯಾಯಿತು. ಅವರು ಹಾಗೆ ಬರೆದಿದ್ದರೆಂಬುದನ್ನು ಈವರೆಗೆ ತಿಳಿದೇ ಇರದಿದ್ದ ಈ ಮಂದಿಗೆ ನೋವುಂಟಾಗುವ ಮನಸ್ಸುಗಳಿವೆ ಎಂಬುದು ಮೆಚ್ಚಬೇಕಾದ ವಿಷಯ. ಅನಂತಮೂರ್ತಿಯವರಿಗಿದ್ದ ಕುತೂಹಲ ಬಾಲ್ಯದಲ್ಲಿ ಇರಬೇಕಾದ್ದು, ಅವರದನ್ನು ಪ್ರಾಮಾಣಿಕವಾಗಿ ದಾಖಲಿಸಿರುವುದು ಸ್ವಾಗತಾರ್ಹವಾದ್ದು. ಅವರ ಅಂದಿನ ಕ್ರಿಯೆಯನ್ನು ಇಂದು ಸಮರ್ಥಿಸುವ ಮಾತನ್ನಾಗಲಿ, ಇತರರು ಅದನ್ನು ಅನುಕರಿಸಬೇಕೆಂದಾಗಲಿ ಅವರು ಹೇಳಿಲ್ಲ. ವಿಶ್ವದ ವಿಸ್ಮಯಗಳಲ್ಲಿ ಒಂದನ್ನು ತಾವು ಬಾಲ್ಯದಲ್ಲಿ ಹೇಗೆ ಅನ್ವೇಷಿಸಲು ಯತ್ನಿಸಿದ್ದರೆಂಬುದು ಅವರ ತಾತ್ಪರ್ಯ. ಈ ಅನುಭವವನ್ನು ಅಂದಿನ ಸಭೆಯ ಉದ್ಘಾಟಕರಾಗಿದ್ದ ಡಾ॥ ಎಂ. ಎಂ. ಕಲ್ಬುರ್ಗಿಯವರು ಉಲ್ಲೇಖಿಸಿ ಜಾರಿಕೆಯ ಒಂದು ವಾಕ್ಯ ಹೇಳಿದರು: ನಾವೂ ಅದನ್ನು ಬೇಕಾದರೆ ಮಾಡಿ ನೋಡಬಹುದು, ಎಂದು. ಅನಂತಮೂರ್ತಿ ಚಿಕ್ಕಂದಿನಲ್ಲಿ ಮಾಡಿದ್ದು ಸರಿ, ನಾವೂ ಹಾಗೆಯೇ ಮಾಡಬೇಕು, ಎಂದೇನೂ ಅವರು ಹೇಳಿರಲಿಲ್ಲ; ಅಲ್ಲದೆ, ಯಾರಿಗಾದರೂ ನೋವಾಗಿದ್ದರೆ ತಮ್ಮ ಮಾತಿಗೆ ಖೇದ ವ್ಯಕ್ತಪಡಿಸುವುದಾಗಿಯೂ ಅವರು ಹೇಳಿದರು. ಆದಾಗ್ಯೂ ಯಾರಿಗೋ ಮನಸ್ಸಿಗೆ ನೋವುಂಟಾಗಿದೆಯಂತೆ; ಆದ್ದರಿಂದ ಅವರು ಡಾ॥ ಕಲ್ಬುರ್ಗಿಯವರ ಮೇಲೆ ಮೊಕದ್ದಮೆ ಹೂಡಿದ್ದಾರಂತೆ. ನಮ್ಮ ದೇಶದ ದಾರ್ಶನಿಕ ಪರಂಪರೆಯಲ್ಲಿ ದೇವರ ನಿರಾಕರಣೆ, ಮೂದಲಿಕೆ, ಹಾಸ್ಯ, ಇವೆಲ್ಲಾ ಬೇಕಾದಷ್ಟಿವೆ. ಅದು ಯಾರಿಗೂ ನೋವುಂಟುಮಾಡಿಲ್ಲ. ಶ್ರದ್ಧೆ ಗಟ್ಟಿಯಾಗಿದ್ದರೆ ಇವೆಲ್ಲಾ ನೋವಿಗೆ ಕಾರಣವಾಗುವುದಿಲ್ಲ. ಪ್ರತಿದಿನ ನಡೆಯುವ ಲೈಂಗಿಕ ಅತ್ಯಾಚಾರಗಳು, ಅತಿಕಾರ್ಪಣ್ಯದಿಂದ ಲಕ್ಷಗಟ್ಟಲೆ ನಮ್ಮ ಸೋದರ – ಸೋದರಿಯರು ಜೀವನ ಸವೆಸುತ್ತಿರುವುದು, ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಿರುವುದು, ಹೀಗೆ ಎಷ್ಟೆಲ್ಲಾ ಕ್ರೌರ್ಯವು ನಮ್ಮ ನಡುವೆ ತಾಂಡವವಾಡುತ್ತಿದೆಯಲ್ಲ, ಅದನ್ನು ನೋಡಿಯೂ ಮನಸ್ಸು ನೋಯದ ಸಂದರ್ಭ ನಮ್ಮಲ್ಲಿದೆ. ದೇವರನ್ನು ದೂಷಿಸಿದರೆ ದೂಷಕರನ್ನು ಹೇಗೆ ನಡೆಸಿಕೊಳ್ಳಬೇಕೆಂದು ಭಗವಂತನಿಗೆ ತಿಳಿದಿರಬಹುದಲ್ಲವೆ? ರಾಮಾನುಜಾಚಾರ್ಯರು ಸಮಾಜದಲ್ಲಿ ಇರುವ ವೈಷಮ್ಯ – ನೈರ್ಘೃಣ್ಯಗಳು ಭಗವಂತನ "ಲೀಲೆ" ಎಂದರು. "ಅದೆಂತಹ ಲೀಲೆಯಯ್ಯಾ ದೇವ, ನಿನ್ನದು?" ಎಂಬ ವಿಸ್ಮಯ ಅಪ್ರಾಸಂಗಿಕವಲ್ಲ.

✶ ✶ ✶

ನಮ್ಮ ದೇಶದಲ್ಲಿ ನ್ಯಾಯವಿತರಣೆಯಲ್ಲಾಗುವ ನಿಧಾನಗತಿಯನ್ನು ಯಾರಿಂದಲೂ ಸರಿಪಡಿಸಲು ಸಾಧ್ಯವಿಲ್ಲವೇನೋ ಎನಿಸುತ್ತದೆ. ಸಿವಿಲ್ ಪ್ರಕರಣವಾಗಲಿ, ಕ್ರಿಮಿನಲ್ ಮೊಕದ್ದಮೆಯಾಗಲಿ ಇತ್ಯರ್ಥವಾಗುವುದಕ್ಕೆ ವರ್ಷಗಟ್ಟಲೆ ಕಾಯಬೇಕು. ಇದು ನಮಗೆ ಅಭ್ಯಾಸವಾಗಿಬಿಟ್ಟಿದೆ. ಅದಲ್ಲದೆ

ನ್ಯಾಯಾಲಯಗಳು ನೀಡುವ ತೀರ್ಪು ಅನೇಕ ವೇಳೆ ವಸ್ತುಸ್ಥಿತಿ ಗಮನಕ್ಕೆ ತೆಗೆದುಕೊಳ್ಳದೆ, ಕೇವಲ ಕಾನೂನಿನ ದೃಷ್ಟಿಯಿಂದಲೇ ನೋಡಿ ಅನ್ಯಾಯವಾಗಿರುವ ಪ್ರಕರಣಗಳು ಬೇಕಾದಷ್ಟಿವೆ. ಇತ್ತೀಚೆಗೆ ಸುಪ್ರೀಂ ಕೋರ್ಟು ಭಾಷಾ ಮಾಧ್ಯಮದ ಆಯ್ಕೆ ವಿಷಯದಲ್ಲಿ ನೀಡಿರುವ ತೀರ್ಪನ್ನು ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಬಡಜನರಿಗಂತೂ ನ್ಯಾಯ ದೊರಕುವುದು ದುರ್ಲಭ. ಶ್ರೀಮಂತರು ಮಾತ್ರ ಹೇಗೋ ಕಾನೂನಿನ ಕಣ್ಣಿನಿಂದ ನುಣುಚಿಕೊಳ್ಳುತ್ತಾರೆ. ಹಾಲಿವುಡ್ ತಾರೆ ಸಲ್ಮಾನ್‌ಖಾನ್ ಫುಟ್‌ಪಾತ್ ಮೇಲೆ ಮಲಗಿದ್ದವರ ಮೇಲೆ ಗಾಡಿ ಓಡಿಸಿ ಕೊಂದ ಪ್ರಕರಣ ಹತ್ತಾರು ವರ್ಷ ಕಳೆದರೂ ಇನ್ನೂ ಇತ್ಯರ್ಥವಾಗಿಲ್ಲ.

ಆಂಧ್ರಪ್ರದೇಶದ ಗುಂಟೂರು ಜಿಲ್ಲೆಯ ತ್ಸುಂದುರು ಗ್ರಾಮದಲ್ಲಿ ೧೯೯೧ರಲ್ಲಿ ಎಂಟು ಮಂದಿ ದಲಿತರ ಕೊಲೆಯಾಯಿತು. ಇದು ಉಚ್ಚ ಜಾತಿಯ ಜನ ನಡೆಸಿದ ಕಗ್ಗೊಲೆ, ಮೇಲ್ಜಾತಿಯವರು ಮತ್ತು ದಲಿತರ ಮಧ್ಯೆ ಆದ ಘರ್ಷಣೆ. ಪೊಲೀಸರು ಈ ಪ್ರಕರಣ ಕುರಿತು ಸಾಕಷ್ಟು ದೀರ್ಘಕಾಲ ತನಿಖೆ ನಡೆಸಿ ೫೬ ಜನರನ್ನು ಆರೋಪಿಗಳೆಂದು ಬಂಧಿಸಿ ವಿಚಾರಣೆಗೊಳಪಡಿಸಿದರು. ಸಾರ್ವಜನಿಕ ಒತ್ತಾಯದ ಮೇಲೆ ಸರ್ಕಾರ ಮೊಕದ್ದಮೆಯ ವಿಚಾರಣೆಗೆ ವಿಶೇಷ ನ್ಯಾಯಾಲಯವನ್ನು ನೇಮಿಸಿತು. ಹದಿನಾರು ವರ್ಷ ತೆಗೆದುಕೊಂಡ ಈ ವಿಶೇಷ ನ್ಯಾಯಾಲಯ ಕೊನೆಗೂ ಆಪಾದಿತರಿಗೆ ಶಿಕ್ಷೆ ವಿಧಿಸಿತು. ಈಗ ಏಳು ವರ್ಷಗಳಾದ ಮೇಲೆ ೨೦೧೪ರಲ್ಲಿ ರಾಜ್ಯದ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠ ಸಾಕಷ್ಟು ಸಾಕ್ಷ್ಯಾಧಾರವಿಲ್ಲ ಎಂದು ಹೇಳಿ ಆಪಾದಿತರನ್ನು ಬಿಡುಗಡೆ ಮಾಡಿದೆ. ಪ್ರಾಸಿಕ್ಯೂಷನ್‌ನವರು ಕೊಲೆ ಸಾಬೀತು ಮಾಡಲು ವಿಫಲಗೊಂಡಿರುವ ಜೊತೆಗೆ, ಸಾವಿನ ಸಮಯ ಹಾಗೂ ಘಟನೆ ಸಂಭವಿಸಿದ ಸ್ಥಳವನ್ನು ಗುರ್ತಿಸಲು, ಆಪಾದಿತರನ್ನು ಗುರ್ತಿಸಲು ವಿಫಲಗೊಂಡಿದೆ ಎಂದು ಹೇಳಿದೆ. ಇಪ್ಪತ್ತಮೂರು ವರ್ಷ ಕಾದರೂ ದಲಿತರ ಕುಟುಂಬದವರಿಗೆ ನ್ಯಾಯ ದೊರಕಲಿಲ್ಲ. ಈ ತೀರ್ಪು ಆಂಧ್ರಪ್ರದೇಶದ ಜನತೆಯನ್ನು, ದಲಿತ ಸಮುದಾಯವನ್ನು ಆಕ್ರೋಶಕ್ಕೀಡುಮಾಡಿದೆ. ಸರಕಾರ ಸುಪ್ರೀಂಕೋರ್ಟು ಮೆಟ್ಟಿಲು ಏರಲು ತೀರ್ಮಾನಿಸಿದೆ. ಕೊಲೆಗೀಡಾದ ಕುಟುಂಬಗಳ ಸದಸ್ಯರು ನ್ಯಾಯಕ್ಕಾಗಿ ಇನ್ನೆಷ್ಟು ವರ್ಷ ಕಾಯಬೇಕೊ ತಿಳಿಯದು.

ಪರಿಶಿಷ್ಟ ಜಾತಿ ಹಾಗೂ ಬುಡಕಟ್ಟುಗಳ ಮೇಲೆ ನಡೆಯುವ ದೌರ್ಜನ್ಯಗಳನ್ನು ತಡೆಯಲು ಈ ದೇಶದಲ್ಲಿ ವಿಶೇಷವಾದ ಕಾಯಿದೆ ಇದೆ; ೧೯೮೯ರಲ್ಲಿ ಅನುಮೋದನೆಯಾದ್ದು. ಈ ಕಾನೂನಿನ ಅಡಿಯಲ್ಲೆ ವಿಶೇಷ ನ್ಯಾಯಾಲಯಗಳ ಸ್ಥಾಪನೆ ಆಗುತ್ತದೆ. ಆದರೆ ದಲಿತರಿಗೆ ನ್ಯಾಯ ದೊರಕಿರುವುದು ಮಾತ್ರ ಅಪರೂಪ. ಆಂಧ್ರಪ್ರದೇಶದ ಕರಮಚೇಡು ಹತ್ಯಾಕಾಂಡ, ಮಹಾರಾಷ್ಟ್ರದ ಖೈರ್ಲಂಜಿ ಕಗ್ಗೊಲೆ, ಬಿಹಾರದ ಲಕ್ಷ್ಮೀಪುರ ಪ್ರಕರಣಗಳಲ್ಲೂ ಇದೇ ರೀತಿ ಆರೋಪಿಗಳ ಖುಲಾಸೆಯಾಗಿರುವ ನಿದರ್ಶನಗಳಿವೆ. ನ್ಯಾಯಾಲಯದ ತೀರ್ಪಿನ ವಿರುದ್ಧ ಪ್ರತಿಭಟನೆಗಳು ನಡೆದಿವೆ. ನಡೆಯುತ್ತಿವೆ. ಆದರೆ ಅವು ಅರಣ್ಯರೋದನ.

✶ ✶ ✶

ದೇವರ ದುಡ್ಡು, ಸರಕಾರದ ದುಡ್ಡು ಉಂಡವನೇ ಜಾಣ ಎನ್ನುವ ನಾಣ್ನುಡಿಯೊಂದನ್ನು ಬಳಸಬಹುದೇನೋ. ಏಕೆಂದರೆ ಎರಡೂ ಸಾರ್ವಜನಿಕರ ಹಣ, ಅದನ್ನು ಲಪಟಾಯಿಸಿದರೆ ಅಭ್ಯಂತರವಿಲ್ಲ. ಸರಕಾರದ ಖಜಾನೆಗೆ ಕೈ ಹಾಕಿದವರು ಸಿಕ್ಕಿಬಿದ್ದು, ಶಿಕ್ಷೆಗೆ ಒಳಗಾದಾರು ಯಾವಾಗಲಾದರೊಮ್ಮೆ. ಆದರೆ ದೇವರ ದುಡ್ಡು ನುಂಗಿದ ಪೂಜಾರಿಯನ್ನು ದೇವರೂ ಶಿಕ್ಷಿಸಲಾರ. ದೇವಸ್ಥಾನಗಳು ಈಗ ಇಪ್ಪತ್ತೊಂದನೇ ಶತಮಾನದಲ್ಲಿ ವಿಪರೀತ ಶ್ರೀಮಂತವಾಗುತ್ತಿವೆ. ಹಿಂದೆ ರಾಜಮಹಾರಾಜರುಗಳ ಕಾಲದಲ್ಲಿ ದೇವಾಲಯಗಳ ನಿರ್ಮಾಣ ಒಂದು ದೊಡ್ಡ ದಂಧೆ. ಈಗ ಅದು ಶ್ರೀಮಂತರ ಪಾಲಾಗಿದೆ. ನೆರೆರಾಜ್ಯಗಳನ್ನು ಆಕ್ರಮಿಸಿಕೊಂಡಾಗ ವಿಜೇತರು ಮೊದಲು ಲೂಟಿ ಮಾಡುತ್ತಿದ್ದುದು ದೇವಾಲಯಗಳನ್ನು. ಹೊರಗಿನವರು ನಮ್ಮ ದೇಶದ ಮೇಲೆ ದಾಳಿ ಮಾಡಿದ್ದಾಗ ದೋಚಿದ್ದೂ ದೇವಾಲಯಗಳನ್ನೇ. ಅಂತೂ ಪರಮಾತ್ಮ ಯಾವತ್ತೂ ಶ್ರೀಮಂತ. ಆದರೆ ಪಾಪ, ಗಳಿಸಿದ್ದನ್ನು ಉಳಿಸಿಕೊಳ್ಳಲಾಗದಷ್ಟು ದುರ್ಬಲ. ಏಕೆಂದರೆ ದೇವಾಲಯಗಳ ಹಣವನ್ನು ಕಬಳಿಸುವವರನ್ನು ಆ ಪರಮಾತ್ಮ ಈವರೆಗೆ ಯಾರನ್ನೂ ಶಿಕ್ಷಿಸಿಯೇ ಇಲ್ಲ. ಎಲ್ಲರೂ ಪೊಗದಸ್ತಾಗಿದ್ದಾರೆ. ದೇವಾಲಯಗಳೆಲ್ಲ ಭಕ್ತಾದಿಗಳನ್ನು ಶೋಷಣೆ ಮಾಡುವ ಕೇಂದ್ರಗಳಾಗಿಬಿಟ್ಟಿವೆ ಎಂದು ಗೊಣಗಾಡಿದರೂ, ಮೂಢನಂಬಿಕೆ, ಗೊಡ್ಡು ಸಂಪ್ರದಾಯಕ್ಕೆ ತಲೆಬಾಗಿ ಪೂಜಾರಿಗೇ ಶರಣಾಗುತ್ತಾರೆ ಮಂದಿ. ತಿರುಪತಿ ತಿಮ್ಮಪ್ಪ, ಮೂಕಾಂಬಿಕಾ, ಗುರುವಾಯೂರು ಕೃಷ್ಣ, ಕುಕ್ಕೆ ಸುಬ್ರಮಣ್ಯ, ಒಂದೇ ಎರಡೇ : ಎಲ್ಲ ದೇವಾಲಯಗಳೂ ಅತ್ಯಂತ ಶ್ರೀಮಂತವಾಗಿಬಿಟ್ಟಿವೆ. ಮುಜರಾಯಿ ಇಲಾಖೆ ಆಡಳಿತದಲ್ಲಿದ್ದರೂ ಸಂಪತ್ತಿನ ಸೋರಿಕೆ ರಾಜಾರೋಷವಾಗಿ ನಡೆಯುತ್ತಲೇ ಇರುತ್ತದೆ.

ಇತ್ತೀಚೆಗೆ ತಿರುವನಂತಪುರದ ಅನಂತಪದ್ಮನಾಭ ಸ್ವಾಮಿ ಸುದ್ದಿಯಲ್ಲಿ ವಿರಾಜಿಸುತ್ತಿದ್ದಾನೆ. ಅಂದಾಜಿಗೂ ನಿಲುಕದಂಥ ಭಾರಿ ಶ್ರೀಮಂತ ಈ ಭಗವಂತ. ರಹಸ್ಯ ಕೋಣೆಗಳಲ್ಲಿ ಕೊಪ್ಪರಿಗೆಗಳ ತುಂಬ ಬಂಗಾರ, ವಜ್ರ, ವೈಢೂರ್ಯಗಳ ಒಡವೆ ತುಂಬಿದೆಯಂತೆ. ಕಳೆದ ೩೦ ವರ್ಷಗಳಿಂದ ಈ ದೇವಸ್ಥಾನದಲ್ಲಿ ಭಕ್ತಾದಿಗಳು ನೀಡಿರುವ ಕಾಣಿಕೆಗೆ ಲೆಕ್ಕವೇ ಇಲ್ಲವಂತೆ. ಇದು ನಾವು ಹೇಳುತ್ತಿರುವುದಲ್ಲ, ನಾಡಿನ ಸರ್ವೋಚ್ಚ ನ್ಯಾಯಾಲಯ ಹೇಳಿರುವುದು. ಈ ದೇವಾಲಯದ ಟ್ರಸ್ಟಿಗಳಾಗಿರುವ ರಾಜಮನೆತನದವರು, ಇತರರು, ಪೂಜಾರಿಗಳು (ಇವರನ್ನು ಕೇರಳದಲ್ಲಿ ತಂತ್ರಿಗಳು ಎನ್ನುತ್ತಾರೆ) ನಡೆಸಿರುವ ಅವ್ಯವಹಾರಗಳಿಗೆ ಮಿತಿಯೇ ಇಲ್ಲ. ಕೊನೆಗೆ ದೇಶದ ಸುಪ್ರೀಂ ಕೋರ್ಟು ಇಡೀ ವ್ಯವಹಾರವನ್ನು ಸಮಗ್ರವಾಗಿ ತನಿಖೆ ಮಾಡಲು, ಸಂಪತ್ತಿನ ಅಂದಾಜು ಮಾಡಲು ವಿಶೇಷವಾದ ಸಮಿತಿಯನ್ನು ರಚಿಸಿದೆ. ಅದು ನೇಮಕಗೊಂಡು ವರ್ಷದ ಮೇಲಾದರೂ ಇನ್ನೂ ದೇವಾಲಯದ ತಿಜೋರಿಗಳ ತಪಾಸಣೆ ಆಗಿಲ್ಲ. ಎಲ್ಲವೂ ನಿಗೂಢ. ಈ ದೇವಾಲಯದಲ್ಲಿರುವ ಸಂಪತ್ತನ್ನು ಸರಕಾರ ಏನಾದರೂ ವಶಪಡಿಸಿಕೊಂಡರೆ ನರೇಂದ್ರ ಮೋದಿ ಸರಕಾರದ ವಿತ್ತಮಂತ್ರಿ ಅರುಣ್ ಜೇಟ್ಲಿ ಹೆಚ್ಚುವರಿ ಆದಾಯ ತೋರಿಸಿ ಬಜೆಟ್ ತೂಗಿಸಬಹುದು. ಈ ದೇವಾಲಯಗಳಲ್ಲಿರುವ ಹಣವನ್ನು ಜನೋಪಯೋಗಿ ಕಾರ್ಯಗಳಿಗೆ ಬಳಸಿದರೆ ದೇಶದಲ್ಲಿ ಬಡತನ ನಿವಾರಣೆಯಾಗುತ್ತಿತ್ತೇನೋ. ಆ ಭಗವಂತ ಇದ್ದಿದ್ದರೆ ಹಾಗೆ ಮಾಡುತ್ತಿದ್ದನೇನೋ. ಈಗಂತೂ ಅದು ಸಾಧ್ಯವಿಲ್ಲ. ದೇವರ ದುಡ್ಡು ಪವಿತ್ರ.

✶ ✶ ✶

ಒಂದು ದಶಕಕ್ಕೂ ಹೆಚ್ಚು ಕಾಲ ಇರಾಕ್ ಪ್ರತಿದಿನವೂ ಸಮಾಚಾರಕ್ಕೆ ವಸ್ತುವಾಗಿದೆ. ಅಮೆರಿಕಾದ ಪಾತಕಕ್ಕೆ ಹೇಗೆ ಎಲ್ಲೆಗಳಿಲ್ಲವೋ ಹಾಗೆ ಇರಾಕಿನ ಹಾನಿಗೂ ಎಣೆಯಿಲ್ಲ. ವಿನಾಕಾರಣ ಸದ್ದಾಂ ಹುಸೇನ್ ಮೇಲೆ ಆರೋಪಗಳನ್ನು ಹೊರಿಸಿ ಬುಷ್ ಹೀನಾಯ ಆಕ್ರಮಣ ನಡೆಸಿ ಲಕ್ಷಗಟ್ಟಲೆ ಜನರನ್ನು ಕೊಂದು ಇರಾಕ್ ಅಧ್ಯಕ್ಷನ ಅಧಿಕೃತ ನಿವಾಸವನ್ನು ತನ್ನ ರಾಯಭಾರ ಕಚೇರಿ ಮಾಡಿಕೊಂಡ. ಈಗಲೂ ಕಚೇರಿ ಅಲ್ಲೇ ಇದೆ. ಇರಾಕಿನ ಬೇರಾವ ಭಾಗಕ್ಕೂ ಇಲ್ಲದ ರಕ್ಷಣೆ ಈ ಕಚೇರಿಗಿದೆ. ಒಮ್ಮೆ ಹೊತ್ತಿಸಿದ ಬೆಂಕಿಯನ್ನು ನೀರು ಸುರಿದು ಆರಿಸಬಹುದು, ಇಲ್ಲವೆ ನಿರಂತರವಾಗಿ ಉರಿಯುತ್ತಿರುವಂತೆ ಉಳಿಸಿಕೊಳ್ಳಬಹುದು. ಇನ್ನೇನು ಕೆಂಡ ಆರಿತು ಎನ್ನುವ ವೇಳೆಗೆ ಮತ್ತೆ ಪುಳ್ಳೆ ಇರಿಸಿ ಬೆಂಕಿ ಹೊತ್ತಿಸುವುದು ನಡೆದುಬಂದ ಪದ್ಧತಿ. ನಮ್ಮ ದೇಶದ ನೂರಾರು ಮಂದಿ ಇರಾಕಿನಲ್ಲಿ ನೌಕರಿಯಲ್ಲಿ ಇದ್ದಾರೆ. ಅವರು ಜೀವ ಉಳಿಸಿಕೊಳ್ಳುವುದೇ ಕಷ್ಟವಾಗಿದೆ. ಹೇಗಾದರೂ ಸರಿ, ಅವರು ಜೀವಂತವಾಗಿ ಹಿಂದಿರುಗಲು ಸಾಧ್ಯವಾಗಬೇಕೆಂದು ಆಶಿಸೋಣ. ಇರಾಕಿನಲ್ಲಿ ಇಂದಿನ ಪ್ರಕ್ಷುಬ್ಧತೆಯನ್ನು ಶಿಯಾ–ಸುನ್ನಿ ಸಂಘರ್ಷವೆಂದು ಬಿಂಬಿಸಲಾಗುತ್ತಿದೆ. ಆದರೆ ಅದು ಭಾಗಶಃ ಮಾತ್ರ ನಿಜ. 'ಉಗ್ರರು' ಎಂದು ಈಗ ಹಲ್ಲೆಕೋರರನ್ನು ಕರೆಯಲಾಗುತ್ತಿದೆ. ಅವರನ್ನು ಉಗ್ರರನ್ನಾಗಿಸಿದ್ದು ಅಮೆರಿಕಾದ ನೀಚ ಧಾಳಿ. ಸದ್ದಾಂ ಕಡೆಯವರನ್ನೆಲ್ಲಾ ಧ್ವಂಸ ಮಾಡುವ ಹುನ್ನಾರದಿಂದಾಗಿ ಅಮೆರಿಕಾ ಇಡೀ ಆಡಳಿತವನ್ನು ತನ್ನದಾಗಿಸಿಕೊಂಡಿತ್ತು. ಅಂದು ದಮನಕ್ಕೀಡಾದವರು ಇಂದು ಪ್ರತೀಕಾರದ ನಿಲುವು ತಾಳಿದ್ದಾರೆ. ಅದು ಸುನ್ನಿ–ಶಿಯಾ ವಿರೋಧದ ರೂಪದಲ್ಲಿ ಪ್ರಕಟವಾಗುತ್ತಿದೆ. ಶಿಯಾಪಂಥದ ಇರಾನ್ ಈಗ ಅಮೆರಿಕಾದ ಮೈತ್ರಿಗೆ "ಅರ್ಹತೆ" ಪಡೆದುಬಿಟ್ಟಿದೆ, ಆಗಲೆ ಕೆಲವು ರಿಯಾಯಿತಿಗಳನ್ನು ಪಡೆದಿದೆ. ಹಿಂದೆ ಇರಾಕನ್ನು ಇರಾನಿನ ಮೇಲೆ ಛೂ ಬಿಟ್ಟಿದ್ದ ಅಮೆರಿಕಾ ಈಗ ಇರಾನನ್ನು ಇರಾಕಿನ ಮೇಲೆ ಮುನ್ನುಗ್ಗುವಂತೆ ಪ್ರೇರೇಪಿಸುತ್ತಿದೆ. ಯಾವ ದೃಷ್ಟಿಯಿಂದಲೂ ಮತಧಾರ್ಮಿಕ ಜಡ್ಡುತನಕ್ಕೆ ಎಡೆಯಿಲ್ಲದಿದ್ದ ಇರಾಕಿನಲ್ಲಿ ಈಗ ತಾಲಿಬಾನರಿಗೆ ಸಮನಾದವರು ಸುನ್ನಿ ಶ್ರೇಷ್ಠತೆಯ ಮುಸುಕಿನಲ್ಲಿ ಈಗ ಹಲ್ಲೆ ನಡೆಸುವಂತಾಗಿದೆ. ಅಮೆರಿಕಾ ಯುದ್ಧದ ನಂತರ ಈಗ ಅಂತರ್ಯುದ್ಧ ! ಅಮೆರಿಕಾದೊಡನೆ ಮೈತ್ರಿ ಎಂದರೆ ಬೆಂಕಿಯೊಡನೆ ಸರಸ ಎಂಬಂತಾಗಿದೆ.




### ಕೃತಿಸ್ವಾಮ್ಯ ವಿವಾದಕ್ಕೆ ಸಿಲುಕಿರುವ ಮಾರ್ಕ್ಸ್ ಮತ್ತು ಏಂಗೆಲ್ಸ್ ಬರಹಗಳು

ವಿಶ್ವದ ಶ್ರೇಷ್ಠ ಚಿಂತಕರ ಸಾಲಿನಲ್ಲಿ ಸ್ಥಾನ ಗಳಿಸಿರುವ ಕಾರ್ಲ್ ಮಾರ್ಕ್ಸ್ ಮತ್ತು ಫ್ರೆಡ್‌ರಿಕ್ ಏಂಗೆಲ್ಸ್ ಅವರ ಬರಹಗಳು ಲಕ್ಷಾಂತರ ಜನರ ಮೇಲೆ ಪ್ರಭಾವ ಉಂಟುಮಾಡಿದ್ದು ಮನುಕುಲದ ಚಿಂತನೆಯ ಗತಿಯನ್ನೇ ಬದಲಿಸಿದೆ. ಮಾರ್ಕ್ಸ್ ಮತ್ತು ಆತನ ಸಿದ್ಧಾಂತದ ಬಗ್ಗೆ ಈಗಲೂ ಚರ್ಚೆ ನಡೆಯುತ್ತಲೇ ಇದೆ. ಇತ್ತೀಚೆಗಷ್ಟೇ ಮಾರ್ಕ್ಸ್‌ನ ವಿಚಾರದ ಪ್ರಸ್ತುತತೆಯ ಬಗ್ಗೆ ಕನ್ನಡದಲ್ಲಿ ಪುಸ್ತಕವೊಂದು ಪ್ರಕಟವಾಗಿದೆ. ಮಾರ್ಕ್ಸ್ ಚಿಂತನೆಗೆ ಮರಳಬೇಕೆಂಬ ಅಭಿಪ್ರಾಯ ವ್ಯಕ್ತವಾಗಿರುವ ಫ್ರೆಂಚ್ ಅರ್ಥಶಾಸ್ತ್ರಜ್ಞ ಥಾಮಸ್ ಪಿಕೆಟಿ ಬರೆದ 'ಕ್ಯಾಪಿಟಲ್ ಇನ್ ದ ಟ್ವೆಂಟಿಫಸ್ಟ್ ಸೆಂಚುರಿ' ಪುಸ್ತಕ ಇತ್ತೀಚೆಗೆ ಪ್ರಕಟವಾಗಿದ್ದು ಅತ್ಯಂತ ಜನಪ್ರಿಯ ಕೃತಿಯಾಗಿದೆ.

ಇವರಿಬ್ಬರ ಬರಹಗಳು ಅನೇಕ ವರ್ಷಗಳಿಂದ ಸಾರ್ವಜನಿಕರಿಗೆ ಲಭ್ಯವಾಗಿವೆ. ಮಾರ್ಕ್ಸಿಸ್ಟ್ ಇಂಟರ್‌ನೆಟ್ ಆರ್ಕೈವ್ (ಎಂಐಎ)ನಲ್ಲಿ ಕಾರ್ಲ್ ಮಾರ್ಕ್ಸ್ ಅವರ ಬರಹಗಳ ೫೦ ಸಂಪುಟಗಳನ್ನು ಯಾರು ಬೇಕಾದರೂ ಓದಬಹುದು. ಇದರಲ್ಲಿ ಹತ್ತು ಸಂಪುಟಗಳನ್ನು ಡಿಜಿಟೈಸ್ ಮಾಡಲಾಗಿದ್ದು ಅವು (Marxists.org) ವೆಬ್‌ತಾಣದಲ್ಲಿ ಲಭ್ಯವಾಗಿದೆ. ಸದ್ದುಗದ್ದಲವಿಲ್ಲದೆ ನಾಗರಿಕರು ಇದರ ಅನುಕೂಲ ಪಡೆಯುತ್ತಿದ್ದರು. ಆದರೆ ಈಗ ಕೃತಿಸ್ವಾಮ್ಯದ ಹೆಸರಿನಲ್ಲಿ ಈ ಇಬ್ಬರು ಚಿಂತಕರ ಬರಹಗಳನ್ನು ಸೀಮಿತಗೊಳಿಸುವ ಪ್ರಯತ್ನ ನಡೆಯುತ್ತಿದೆ. ದುರದೃಷ್ಟವೆಂದರೆ ಈ ಬರಹಗಳ ಮುಕ್ತತೆಗೆ ಮೇ ೧೧ರಿಂದ ತಡೆ ಒಡ್ಡುವ ಸುದ್ದಿ ವಿಶ್ವಾದ್ಯಂತ ಚರ್ಚೆಗೆ ಗುರಿಯಾಗಿದೆ.

ಕಾರ್ಲ್ ಮಾರ್ಕ್ಸ್ ಮತ್ತು ಫ್ರೆಡ್‌ರಿಕ್ ಏಂಗೆಲ್ಸ್ ಅವರ ಬರಹಗಳನ್ನು ೫೦ ಸಂಪುಟಗಳಲ್ಲಿ, ಲಂಡನ್‌ನಲ್ಲಿ ಇರುವ ಲಾರೆನ್ಸ್ ಅಂಡ್ ವಿಷಾರ್ಟ್ ಸಂಸ್ಥೆ ಪ್ರಕಟಿಸಿದೆ. ಬ್ರಿಟನ್‌ನ ಕಮ್ಯುನಿಸ್ಟ್ ಪಕ್ಷದ ಜೊತೆ ಸಂಪರ್ಕವಿರುವ ಈ ಪ್ರಕಟಣ ಸಂಸ್ಥೆ ಈ ಸಂಪುಟಗಳನ್ನು ವೆಬ್‌ತಾಣದಲ್ಲಿ ಅಳವಡಿಸಲು ಸುಮಾರು ಒಂದು ದಶಕದ ಹಿಂದೆ ಎಂಐಎಗೆ ಅನುಮತಿ ನೀಡಿತ್ತು. ಅದರಂತೆ ಕಾರ್ಲ್ ಮಾರ್ಕ್ಸ್ ಮತ್ತು ಫ್ರೆಡ್‌ರಿಕ್ ಏಂಗೆಲ್ಸ್ ಅವರ ಬರಹಗಳು ಸಾರ್ವಜನಿಕರಿಗೆ ಲಭ್ಯವಾಗಿತ್ತು. ಆದರೆ ಈಗ ಲಾರೆನ್ಸ್ ಸಂಸ್ಥೆ ಎಂಐಎಗೆ ಸೂಚನೆ ನೀಡಿ ಬರಹಗಳನ್ನು ವೆಬ್‌ತಾಣದಿಂದ ತೆಗೆದುಹಾಕಬೇಕೆಂದು ಹೇಳಿದೆ. ತಾನು ಒಂದು ಪುಟ್ಟ ಪ್ರಕಟಣ ಸಂಸ್ಥೆಯಾಗಿದ್ದು ತನ್ನ ಚಟುವಟಿಕೆಗಳಿಗೆ ಬೇಕಾಗುವ ಆರ್ಥಿಕ ಆದಾಯದ ದೃಷ್ಟಿಯಿಂದ ಈ ನಿರ್ಧಾರಕ್ಕೆ ಬರಲಾಗಿದೆ ಎಂದು ಲಾರೆನ್ಸ್ ಸಂಸ್ಥೆ ಸ್ಪಷ್ಟೀಕರಣ ನೀಡಿದೆ.

ಕೃತಿಸ್ವಾಮ್ಯ ಕಾಯ್ದೆ ಪ್ರಕಾರ ಕೃತಿ ಅಥವಾ ಬರಹ ಪ್ರಕಟವಾದ ಅರವತ್ತು ವರ್ಷಗಳ ನಂತರ ಅದರ ಕೃತಿಸ್ವಾಮ್ಯ ರದ್ದಾಗುತ್ತದೆ. ಮಾರ್ಕ್ಸ್‌ನ ಬರಹಗಳು ಹತ್ತೊಂಭತ್ತನೇ ಶತಮಾನದಲ್ಲಿ ಪ್ರಕಟವಾದದ್ದು. ಅಲ್ಲದೆ ಅವರು ಕೃತಿಸ್ವಾಮ್ಯ ಬಯಸಿರಲಿಲ್ಲ. ಪರಿಸ್ಥಿತಿ ಹೀಗಿರುವಾಗ ಲಾರೆನ್ಸ್ ಸಂಸ್ಥೆ ಯಾವ ಆಧಾರದ ಮೇಲೆ ಈ ಕೃತ್ಯಕ್ಕೆ ಕೈ ಹಾಕಿದೆ? ಜರ್ಮನ್




ಭಾಷೆಯಲ್ಲಿದ್ದ ಮಾರ್ಕ್ಸ್‌ನ ಮೂಲ ಬರಹಗಳನ್ನು ಇಂಗ್ಲಿಷ್‌ಗೆ ಭಾಷಾಂತರ ಮಾಡಿದ್ದು ಲಾರೆನ್ಸ್ ಸಂಸ್ಥೆ. ಹೀಗಾಗಿ ಮೂಲ ಬರಹಗಳನ್ನು ಅಭಿವೃದ್ಧಿಪಡಿಸಿದ ಕಾರಣ ಲಾರೆನ್ಸ್ ಸಂಸ್ಥೆಗೆ ಕೃತಿಸ್ವಾಮ್ಯದ ಹಕ್ಕು ಲಭಿಸಿತ್ತು. ಮಾರ್ಕ್ಸ್‌ನ ಬರಹಗಳ ಮಹತ್ವ ಮತ್ತು ಅದನ್ನು ಸಾರ್ವಜನಿಕರಿಗೆ ತಲುಪಿಸುವ ದೃಷ್ಟಿಯಿಂದ ಲಾರೆನ್ಸ್ ಸಂಸ್ಥೆ ೫೦ ಸಂಪುಟಗಳಲ್ಲಿ ಹತ್ತು ಸಂಪುಟಗಳನ್ನು ವೆಬ್‌ತಾಣದಲ್ಲಿ ಅಳವಡಿಸಲು ಎಂಐಎಗೆ ಅನುಮತಿ ನೀಡಿತ್ತು. ಈಗ ಆ ಅನುಮತಿಯನ್ನು ಹಿಂಪಡೆಯುವ ಇಂಗಿತ ವ್ಯಕ್ತಪಡಿಸಿದೆ.

ಲಾರೆನ್ಸ್ ಸಂಸ್ಥೆಯ ಪ್ರಕಾರ ಈ ೫೦ ಸಂಪುಟಗಳ ಮಾರಾಟದಿಂದ ತಾನು ಲಾಭ ಗಳಿಸಿಲ್ಲ. ಬದಲಾಗಿ ಅದಕ್ಕೆ ತಗಲಿರುವ ವೆಚ್ಚವನ್ನೂ ಹಿಂಪಡೆಯಲಾಗಿಲ್ಲ. ಆದ್ದರಿಂದ ವೆಬ್‌ತಾಣದಿಂದ ಅದನ್ನು ತೆಗೆದು ಹಾಕುವಂತೆ ಕೇಳಿರುವುದರಲ್ಲಿ ಯಾವುದೇ ತಪ್ಪು ಮಾಡಿಲ್ಲ ಎಂಬುದು ಸಂಸ್ಥೆಯ ವಾದ. ಸಂಪುಟವನ್ನು ಸಿದ್ಧಪಡಿಸಲು ಸಂಸ್ಥೆಯ ಅನೇಕ ವರ್ಷಗಳ ದುಡಿಮೆ ಇದೆ. ನೂರಾರು ತಜ್ಞರನ್ನು ಸರಿಹೊಂದಿಸಿ ಅವರಿಂದ ಭಾಷಾಂತರ ಮಾಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ನಾವು ಸ್ವಲ್ಪ ಆರ್ಥಿಕವಾಗಿ ಸಶಕ್ತರಾಗಲು ಈ ಕ್ರಮ ಕೈಗೊಂಡಿದ್ದೇವೆ ಎಂದು ಸಂಸ್ಥೆ ತನ್ನ ಹೇಳಿಕೆ ನೀಡಿದೆ. ಹತ್ತು ಸಂಪುಟಗಳನ್ನು ವೆಬ್‌ತಾಣದಿಂದ ತೆಗೆದು ಹಾಕಿದರೂ ಮಾರ್ಕ್ಸ್ ಮತ್ತು ಏಂಗೆಲ್ಸ್ ಅವರ ೨ ಲಕ್ಷಕ್ಕೂ ಮೀರಿದ ಇತರೆ ಲೇಖನಗಳು, ಪತ್ರಗಳು ಹಾಗೂ ಇತರೆ ಬರಹಗಳು ಲಭ್ಯವಿರುತ್ತವೆ ಎಂಬುದು ಸಂಸ್ಥೆಯ ಸ್ಪಷ್ಟನೆ. ಅಲ್ಲದೆ, ಬೇರೆ ಪ್ರಕಾಶಕರು ಹೊರತಂದಿರುವ ನೂರಾರು ಸಂಪುಟಗಳೂ ಇವೆ.

*ಬೆಂಗಳೂರು* **ವೈ. ಜಿ. ಮುರಳೀಧರನ್**

### ಅಬ್ ಮೋದೀಕೀ ಸರಕಾರ್

ಶ್ರೀ ನರೇಂದ್ರ ಮೋದಿಯವರು ರಾಷ್ಟ್ರದ ಪ್ರಧಾನಿಯಾಗಿ ಚುನಾಯಿತಗೊಂಡಿದ್ದಾರೆ. ಸುಮಾರು ೧೨೦ ಕೋಟಿಗಿಂತ ಅಧಿಕ ಜನರು ಅವರ ಮೇಲೆ ಅಪೂರ್ವ ನಂಬಿಕೆ ಇಟ್ಟಿದ್ದಾರೆ. ಈ ನಂಬಿಕೆಯನ್ನು ಮೋದಿಯವರು ನಿಭಾಯಿಸಬೇಕಾಗಿದೆ. ೨೧ನೇ ಶತಮಾನದ ಒಂದು ದಶಕದ ನಂತರ ಮೋದಿಯವರು ಅಧಿಕಾರಕ್ಕೆ ಬಂದಿದ್ದಾರೆ. ೨೧ನೇ ಶತಮಾನ ವಿಜ್ಞಾನ ಹಾಗೂ ತಂತ್ರಜ್ಞಾನ ಮತ್ತು ಮಾಹಿತಿ ಜ್ಞಾನಗಳಿಗೆ ಹೆಸರು ಮಾಡಿದೆ. ಹೀಗಾಗಿ ಮೋದಿಯವರು ಈ ಹಂತದಲ್ಲಿ ಹಲವು ಮಹತ್ವ ಬದಲಾವಣೆಗಳನ್ನು ಜಾರಿಗೊಳಿಸುವ ಕಠಿಣ ನಿರ್ಣಯಗಳನ್ನು ಕೈಗೆತ್ತಿಕೊಳ್ಳಲೇಬೇಕಾಗುವುದು ಅನಿವಾರ್ಯ ಎಂದೇ ಹೇಳಬಹುದು. ಅವರು ಎದುರಿಸಬೇಕಾದ ಸವಾಲುಗಳು :

ಮೊಟ್ಟಮೊದಲನೆಯ ಸವಾಲು ಎಂದರೆ ರಾಷ್ಟ್ರೀಯ ಭಾವನೆ. ನಮಗೆ ಸ್ವತಂತ್ರ ಬಂದು ಆರು ದಶಕಗಳಾದರೂ ರಾಷ್ಟ್ರೀಯತೆಯ ಅರಿವು ಬಾರದೆ ನಾವು ಜಾತಿ ಮತ ಭಾಷೆಗಳಿಂದ ಮುಕ್ತಿ ಪಡೆಯದೆ ಆಂತರಿಕ ಜಗಳದಲ್ಲಿಯೇ ಮುಳುಗಿರುವುದು ಖೇದನೀಯ. ಇದರಿಂದ ನಾವು ಅರಿಯಲೇಬೇಕಾದ ಸಂಗತಿ ಎಂದರೆ ನಮಗೆ ಪಾಕಿಸ್ತಾನ ಹಾಗೂ ಚೀನಾ ದೇಶಗಳಿಗಿಂತಲೂ ನಮ್ಮ ಜಾತಿ ಹಾಗೂ ಭಾಷೆಗಳಿಂದಲೇ ರಾಷ್ಟ್ರೀಯ ಭದ್ರತೆಗೆ ಅಧಿಕ ಅಪಾಯ.

ಎರಡನೆಯ ವಿಷಯ ಇದಕ್ಕೂ ಗಂಭೀರವಾಗಿದೆ. ನಮ್ಮ ರಾಷ್ಟ್ರದಲ್ಲಿ ಕಾನೂನು ಹಾಗೂ ಸುವ್ಯವಸ್ಥೆಯ ಕೊರತೆ. ಇದರಿಂದಾಗಿ ನಾವು ನಮ್ಮನ್ನಾಳಲು ಸಮರ್ಥರಲ್ಲ ಎಂಬುದನ್ನು ಸಾಬೀತು ಮಾಡ ತೊಡಗಿರುವುದು ಖೇದನೀಯ.

ಮೂರನೆಯ ಮಹಾಕಂಟಕ ಎಂದರೆ ಜನಸಂಖ್ಯೆ. ಇದರ ಪರಿಣಾಮವೆಂದರೆ ಯಾವ ಯೋಜನೆಗಳೂ ಫಲಪ್ರದವಾಗುವುದಿಲ್ಲ. ನಿಯಂತ್ರಣ ಅನಿವಾರ್ಯ.

ನಾಲ್ಕನೆಯದೆಂದರೆ ಶಿಕ್ಷಣ. ಇದರ ಬಗೆಗೆ ನಮ್ಮಲ್ಲಿ ರಾಷ್ಟ್ರೀಯ ಧೋರಣೆಯೇ ಇಲ್ಲ ಎಂದರೆ ತಪ್ಪಾಗದು.

ಐದನೆಯ ವಿಷಯವೆಂದರೆ ನಮಗೆ ನಮ್ಮ

ಸಂವಿಧಾನದ ಬಗೆಗೆ ಗೌರವವಿಲ್ಲ. ಏಕೆಂದರೆ ಅನೇಕ ಶಾಸನಗಳು ಸಂವಿಧಾನಕ್ಕೆ ಅಪಚಾರವಾಗಿದ್ದರೂ ಅವು ಹೇಗೋ ಜಾರಿಯಲ್ಲಿ ಬರುತ್ತವೆ.

ನಂತರ ಹೇಳಬಹುದಾದ ವಿಷಯ ನಮ್ಮ ಸಮಾಜವಾದದ ಬಗೆಗಿನ ಅಪ್ರಬುದ್ಧ ತಿಳಿವಳಿಕೆ. ಇದನ್ನು ತೊರೆದು ಸರ್ವರಿಗೂ ಸಮಪಾಲು ಎಂಬ ತತ್ವವನ್ನು ಜಾರಿಗೆ ತರಬೇಕು. ಹೀಗಾಗಿ ಭಾರತವನ್ನು ಸಂಪತ್‌ಭರಿತ ದೇಶವನ್ನಾಗಿಸಬೇಕು. ಇದಕ್ಕೆ ಔದ್ಯೋಗೀಕರಣವೇ ಪರಿಹಾರ. ಕೊನೆಯದಾಗಿ ಹೇಳಬಹುದಾದ ವಿಷಯ ಎಂದರೆ ನಾವು ಸಾಚಾ ಮನುಷ್ಯರಾಗಿ ಕಾಯಾವಾಚಾ ಮಾನಸಿಕವಾಗಿ ನಮ್ಮ ಪಾಲಿಗೆ ಬಂದ ಕರ್ತವ್ಯವನ್ನು ನಿಷ್ಠೆಯಿಂದ ಮಾಡಬೇಕು. ಈ ಸವಾಲುಗಳನ್ನು ಎದುರಿಸುವ ಸಾಮರ್ಥ್ಯ ಮೋದಿಯವರಿಗೆ ಸಂಪೂರ್ಣವಾಗಿ ಲಭಿಸಲಿ ಎಂದೇ ಹಾರೈಸುವೆ.

*ಬೆಂಗಳೂರು* **ಪ್ರೊ|| ಎಂ. ಧ್ರುವನಾರಾಯಣ**

### ಅತಿಥಿ ಉಪನ್ಯಾಸಕರ ಬದುಕುಳಿಸಿ...

✉ ಕರ್ನಾಟಕ ರಾಜ್ಯ ಸರ್ಕಾರಿ ಪ್ರಥಮ ದರ್ಜೆ ಪದವಿ ಕಾಲೇಜುಗಳಲ್ಲಿರುವ ೧೦೫೩೮ ಅತಿಥಿ ಉಪನ್ಯಾಸಕರು, ತಮ್ಮ ಬೇಡಿಕೆಗಳಿಗಾಗಿ ಕಳೆದ ಶೈಕ್ಷಣಿಕ ವರ್ಷದಲ್ಲಿ ಹಲವು ಸಂಘಟಿತ ಪ್ರತಿಭಟನೆಗಳನ್ನು ನಡೆಸಿ, ರಾಜ್ಯ ಸರ್ಕಾರದ ಗಮನವನ್ನು ಸೆಳೆದಿದ್ದರು. ಹೀಗಾಗಿ, ಮಾನ್ಯ ಮುಖ್ಯಮಂತ್ರಿಯವರು, ಉನ್ನತ ಶಿಕ್ಷಣ ಸಚಿವರು, ಪದಾಧಿಕಾರಿಗಳ ಜೊತೆಯಲ್ಲಿ ನಡೆಸಿದ್ದ ಮಾತುಕತೆಯ ಸಂದರ್ಭದಲ್ಲಿ **ನಿಮ್ಮನ್ನು ಸೇವೆಯಲ್ಲಿ ಮುಂದುವರಿಸುತ್ತೇವೆ. ಜೊತೆಗೆ ವೇತನವನ್ನು ಸಹ ಹೆಚ್ಚಿಸುತ್ತೇವೆ,** ಎಂದು ಭರವಸೆ ನೀಡಿದ್ದರು. ಅದರಂತೆ ನಿಧಾನವಾಗಿಯಾದರೂ, ಏಪ್ರಿಲ್ ೨೨, ೨೦೧೪ರಂದು ಮಾನ್ಯ ಉನ್ನತ ಶಿಕ್ಷಣ ಸಚಿವರು, ಉನ್ನತ ಶಿಕ್ಷಣ ಇಲಾಖೆಯ ಅಧಿಕಾರಿಗಳೊಂದಿಗೆ ಸಭೆ ನಡೆಸಿ, ಹಾಲಿ ಇರುವ ೧೦೫೩೮ ಅತಿಥಿ ಉಪನ್ಯಾಸಕರನ್ನು ೨೦೧೪-೧೫ರ ಶೈಕ್ಷಣಿಕ ವರ್ಷಕ್ಕೂ ಮುಂದುವರೆಸುವ ಆದೇಶವನ್ನು ಉನ್ನತ ಶಿಕ್ಷಣ ಇಲಾಖೆಯ ಆಯುಕ್ತರು ಜಾರಿಗೆ ತರುವಂತೆ ನಿರ್ದೇಶಿಸಿದ್ದಾರೆ. ಇನ್ನೆರಡು ಮುಖ್ಯ ಬೇಡಿಕೆಗಳ ಬಗ್ಗೆ ರಾಜ್ಯ ಸರ್ಕಾರ ಮೌನವಹಿಸಿರುವುದು ಅತಿಥಿ ಉಪನ್ಯಾಸಕರಲ್ಲಿ ನಿರಾಸೆಯನ್ನು ತಂದೊಡ್ಡಿದೆ.

**ಒಂದನೆಯದು,** ಅತಿಥಿ ಉಪನ್ಯಾಸಕರ ಪದಾಧಿಕಾರಿಗಳ ಜೊತೆ ನಡೆಸಿದ್ದ ಮಾತುಕತೆಯ ಸಂದರ್ಭದಲ್ಲಿ ವೇತನವನ್ನು ಸಹ ಹೆಚ್ಚಿಸುತ್ತೇವೆಂದು ಭರವಸೆ ನೀಡಿದ್ದ ಮುಖ್ಯಮಂತ್ರಿಗಳು, ಉನ್ನತ ಶಿಕ್ಷಣ ಸಚಿವರು ಈ ವಿಚಾರದಲ್ಲಿ ಮೌನವಹಿಸಿದ್ದಾರೆ. ಕೇವಲ ೮-೧೦ ಸಾವಿರ ವೇತನದಿಂದ ಜೀವನ ನಿರ್ವಹಿಸುವುದು ತುಂಬ ಕಷ್ಟಕರವಾಗಿದೆ ಎಂಬುದು ಸಹ ರಾಜ್ಯ ಸರ್ಕಾರಕ್ಕೆ ಗೊತ್ತಿಲ್ಲವೆಂದೇನೂ ಅಲ್ಲ.

**ಎರಡನೆಯದು,** ಪ್ರಸಕ್ತ ಶೈಕ್ಷಣಿಕ ವರ್ಷದಲ್ಲಿ ಹೊಸದಾಗಿ ಆರಂಭಿಸುವ ೫೦ ಕಾಲೇಜುಗಳಿಗೆ ಮತ್ತು ಈಗಿರುವ ಕಾಲೇಜುಗಳಲ್ಲಿ ಕೋರ್ಸುಗಳ ಆಧಾರದಲ್ಲಿ ಹೆಚ್ಚುವರಿಯಾಗುವ ಕಾರ್ಯಭಾರಕ್ಕೆ ಮತ್ತು ಖಾಯಂ ಉಪನ್ಯಾಸಕರು ನಿವೃತ್ತಿ ಹೊಂದುವ ಜಾಗಗಳಿಗೆ ಅಂದಾಜು ಅಗತ್ಯವಿರುವ ೧೦೦೦೦ ಅತಿಥಿ ಉಪನ್ಯಾಸಕರನ್ನು ಹೊಸದಾಗಿ ಆನ್‌ಲೈನ್ ಮೂಲಕ ನೇಮಕ ಮಾಡಿಕೊಳ್ಳಲು ಉನ್ನತ ಶಿಕ್ಷಣ ಇಲಾಖೆ ಸಿದ್ಧತೆ ನಡೆಸುತ್ತಿದೆ. ಈ ರೀತಿಯಲ್ಲಿ ಮತ್ತೆ ಹೊಸದಾಗಿ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಳ್ಳುವ ಬದಲಿಗೆ, ಈಗಾಗಲೇ ಕಳೆದ ೧೫ ವರ್ಷಗಳಿಂದ ಸೇವೆ ಸಲ್ಲಿಸುತ್ತಾ ಬಂದಿರುವ ಮತ್ತು ವಯೋಮಿತಿ ಮೀರಿರುವ ೧೦೩೨ ಅತಿಥಿ ಉಪನ್ಯಾಸಕರಿಗೆ ಹೆಚ್ಚಿನ ಕಾರ್ಯಭಾರ ನೀಡಬೇಕೆಂಬುದು ಅತಿಥಿ ಉಪನ್ಯಾಸಕರ ವಿನಮ್ರ ಮನವಿಯಾಗಿದೆ.

ಮಹಿಳಾ ಅತಿಥಿ ಉಪನ್ಯಾಸಕರ ದುಸ್ಥಿತಿ ಹೇಳತೀರದ್ದಾಗಿದೆ. ೧೦೫೩೮ರಲ್ಲಿ ೪೩೦೦ಕ್ಕಿಂತ ಹೆಚ್ಚಿರುವ ಮಹಿಳಾ ಅತಿಥಿ ಉಪನ್ಯಾಸಕರು ಮಧ್ಯ ವಯಸ್ಸಿನವರಾಗಿದ್ದಾರೆ. ಇವರು ಮದುವೆ ಆಗಿ ಗರ್ಭಿಣಿಯರಾದರೆ, ಹೆರಿಗೆಯಾದರೆ ಕೆಲಸ ಕಳೆದುಕೊಂಡು ಮನೆಗೆ ಹೋಗುವ ಪರಿಸ್ಥಿತಿ ಇದೆ. ಹೀಗಾಗಿ ಇವರಿಗೆ ಕನಿಷ್ಠ ೩-೪ ತಿಂಗಳು ಸಂಬಳ ಸಹಿತ ಹೆರಿಗೆ ರಜೆ ನೀಡುವ ಮೂಲಕ ರಾಜ್ಯ ಸರ್ಕಾರ ಮಹಿಳೆಯರಿಗೆ ನೈಜ ಗೌರವವನ್ನು ತೋರಬೇಕಿದೆ. ಹೀಗೆ, ವರ್ಷಕ್ಕೆ ೫ ಲಕ್ಷಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಅಭ್ಯಾಸ ಮಾಡುತ್ತಿರುವ ಸರ್ಕಾರಿ ಪದವಿ ಕಾಲೇಜುಗಳ ಬಡ ಪದವಿ ವಿದ್ಯಾರ್ಥಿಗಳಿಗೆ ಭವಿಷ್ಯ ರೂಪಿಸುತ್ತಿರುವವರಲ್ಲಿ ಖಾಯಂ ಉಪನ್ಯಾಸಕರು ೪೬೦೦ ಇದ್ದರೆ, ಅತಿಥಿ ಉಪನ್ಯಾಸಕರು ೧೦೫೩೮ ರಷ್ಟಿದ್ದಾರೆ. ಉನ್ನತ ಅಧ್ಯಯನ ಮಾಡಿರುವ ಇವರು ಉನ್ನತ ಅಧ್ಯಯನಕ್ಕೆ ಇವರ ಜೀವಮಾನದಲಿ ೩೦-೩೫ ವರ್ಷ ಸವೆಸಿರುವ ಅತಿಥಿ ಉಪನ್ಯಾಸಕರಿವರು. ಇವರ ಬೇಡಿಕೆಗಳು ನ್ಯಾಯಯುತವಾಗಿವೆ. ಹೀಗಾಗಿ ಅತ್ಯಂತ ಕಡು ಬಡವರ ಹಸಿವನ್ನು ನೀಗಿಸಲು 'ಅನ್ನಭಾಗ್ಯ' ತಂದಂತೆ, ಮತ್ತು ಕಡು ಬಡ ಮಕ್ಕಳನ್ನು ರಕ್ತ ಹೀನತೆಯಿಂದ ರಕ್ಷಿಸಲು 'ಕ್ಷೀರಭಾಗ್ಯ' ತಂದಂತೆ, ತಾತ್ಕಾಲಿಕವಾಗಿಯಾದರೂ ಅತಿಥಿ ಉಪನ್ಯಾಸಕರ ಬಾಳಿಗೂ ಭಾಗ್ಯವನ್ನು 'ಸೂಕ್ಷ್ಮ ಸಂವೇದನಾಶೀಲ'ರಾದ ಸಿದ್ದರಾಮಯ್ಯನವರು ತರಲೆಂದು ಆಶಿಸೋಣವೇ ?

*ಬೆಂಗಳೂರು* **ಬಿ. ರಾಜಶೇಖರಮೂರ್ತಿ**

### ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಕರೆ ಗಮನಿಸಿ...!

✉ ಬಡವರು, ಕೂಲಿಕಾರರು, ದಲಿತರು ಒಟ್ಟಾರೆ ಆರ್ಥಿಕವಾಗಿ ಹಿಂದುಳಿದವರ ಮಕ್ಕಳೇ ಇಂದು ಸರಕಾರಿ ಶಾಲೆಗಳಲ್ಲಿ ಓದುತ್ತಿದ್ದಾರೆ. ನಿಜವಾದ ಶಿಕ್ಷಣ ಇಲ್ಲಿರುವ ಮಕ್ಕಳಿಗೆ ತಟ್ಟಬೇಕಿದೆ. ಸರಕಾರಿ ಶಾಲಾ ಮಕ್ಕಳ ಪೋಷಕರು ಅಷ್ಟೊಂದು ಸುಶಿಕ್ಷಿತರಲ್ಲ, ತನ್ನಿಮಿತ್ತ ನೀವು ತುಂಬು ಜವಾಬ್ದಾರಿಯಿಂದ ಪಾಠ ಮಾಡಬೇಕು.

ನೀವು ಶಾಲಾ ಅಂಗಳಕ್ಕೆ ಕಾಲಿಡುವ ಮುನ್ನ ಜಾತಿ ಮತ್ತು ರಾಜಕೀಯ ಅನ್ನೊ ಈ ಎರಡೂ ವಿಷ(ಯ)ಗಳನ್ನ ಹೊರಗಿಟ್ಟು ಬನ್ನಿರಿ. ಹಳ್ಳಿಯಲ್ಲಿ ಇಂದಿಗೂ ಶಾಲೆಗಳಿಗೆ 'ಸಾಲಿಗುಡಿ' ಅನ್ನೊ ರೂಢಿ ಮಾತಿದೆ, ಇಂತಹ ಗುಡಿಗಳಲ್ಲಿಯೇ ಇಂದು ಅನೈತಿಕತೆ ನಡೆಯುತ್ತಿರುವದು ನಿಜಕ್ಕೂ ಶೋಚನೀಯ ಮತ್ತು ಬಹುದೊಡ್ಡ ದುರಂತ...! ನಿಮ್ಮಲ್ಲಿ ವಿನಂತಿಸಿಕೊಳ್ಳುವದಿಷ್ಟೆ, ನಾಳಿನ ನಾಗರಿಕರಾಗಲಿರುವ ಮಕ್ಕಳ ಪಾಲಿಗೆ ನೀವು ಆದರ್ಶರಾಗಿರಿ, ಮಾರ್ಗದರ್ಶಿಗಳಾಗಿರಿ. ದಯವಿಟ್ಟು ದುರಂತ ನಾಯಕರಾಗಬೇಡಿ. ಮಕ್ಕಳ ಮನಸ್ಸಿನಲ್ಲಿ ಅಚ್ಚಳಿಯದ ಹಾಗೆ ಶಾಶ್ವತ ಆದರ್ಶ ಶಿಕ್ಷಕರಾಗಿ ಉಳಿಯಲು ಪ್ರಯತ್ನಿಸಿರಿ, ಇಲಾಖೆಯವರು ನೀಡುವ ಪ್ರಶಸ್ತಿಗೆ ದಯವಿಟ್ಟು ದುಂಬಾಲು ಬೀಳಬೇಡಿ.

ನೀವು ಕೇವಲ ಸಂಬಳಕ್ಕಾಗಿ ಸೇವೆ ಸಲ್ಲಿಸದೆ, ನಮ್ಮೀ ಸಮಾಜದ ಸಮಾನತೆಗಾಗಿ, ಮುಖವಾಡಗಳನ್ನು ಕಳಚುವದಕ್ಕಾಗಿ ಮತ್ತು ಸತ್ಯ ಮಿಥ್ಯಗಳನ್ನು ಪರಾಮರ್ಶಿಸುವದಕ್ಕೆ ಈಗಲೇ ನಮ್ಮ ಮಕ್ಕಳನ್ನು ಮಾನಸಿಕವಾಗಿ ಸದೃಢರನ್ನಾಗಿ ನಿರ್ಮಾಣ ಮಾಡುವ ಘನಕಾರ್ಯಕ್ಕೆ ನಿಮ್ಮ ಸೇವೆ ಮೀಸಲಾಗಿರಲಿ. ನಮಗೆ ನಿಮ್ಮ ಮೇಲೆ ಭರವಸೆ ಇದೆ, ನೀವು ಬದಲಾಗುತ್ತೀರಿ; ಬದಲಾವಣೆಯ ಜೊತೆಜೊತೆಗೆ ಈ ಸಮಾಜವನ್ನು ಖಂಡಿತ ಬದಲಾಯಿಸುತ್ತೀರೆಂದು. ದಯವಿಟ್ಟು ನಮ್ಮ ಭರವಸೆ/ನಂಬಿಕೆಗೆ ಮೋಸ ಮಾಡದಿರಿ...! ಕೊನೆಯದಾಗಿ ನಮ್ಮಾಸೆ ಇಷ್ಟೆ, 'ನೀವು ಕಷ್ಟಪಟ್ಟು ಕಲಿಸಬೇಡಿ, ಇಷ್ಟಪಟ್ಟು ಕಲಿಸಿರಿ.' ಸುಖ ಶಾಂತಿ ನೆಮ್ಮದಿ ಸದಾ ನಿಮ್ಮ ಬಳಿ ಸುಳಿದಾಡಲೆಂಬ ಸದಾಶಯ ಹೊಂದಿದ್ದೇನೆ.

ಇಲ್ಲಿ ಇನ್ನೊಂದು ವಿಷಯ ಪ್ರಸ್ತಾಪಿಸ ಬಯಸುತ್ತೇನೆ : ಇಂದು ಬಹುತೇಕ ಪತ್ರಿಕೆಗಳು ನಾಸ್ತಿಕ (ಎಡಪಂಥೀಯ) ವಿಚಾರಧಾರೆಗೆ ವಿರೋಧವಾಗಿಯೇ ಪ್ರಕಟವಾಗುತ್ತಿವೆ. ಇಂತಹ ಕ್ಲಿಷ್ಟ ಪರಿಸ್ಥಿತಿಯಲ್ಲಿ ಹೊಸತು, ಸಂಕ್ರಮಣ, ಪ್ರಜಾವಾಣಿಯಂತಹ ಕೆಲವೇ ಕೆಲ ಪತ್ರಿಕೆಗಳು ನಮ್ಮಂತಹವರ ಮನಸ್ಸುಗಳನ್ನು ನಿರಾಳವಾಗಿಸುತ್ತಿವೆ. ಸುಳ್ಳನ್ನು ಪದೇ ಪದೇ ಪುನರಾವರ್ತನೆ ಮಾಡಿದರೆ ಅದು ಸತ್ಯವಾಗಿ ಪರಿವರ್ತನೆಯಾಗುವುದು. ಸುಳ್ಳನ್ನೆ ಸತ್ಯವೆಂದು ಬಿಂಬಿಸಿ ಈ ಸಮಾಜವನ್ನು ಬದಲಾಯಿಸುತ್ತೇವೆಂದು ಜನರಲ್ಲಿ ಭಾರಿ ಭ್ರಮೆ ಹುಟ್ಟಿಸಿದ್ದಾರೆ, ಇನ್ನೂ ಹುಟ್ಟಿಸುತ್ತಲೇ ಇದ್ದಾರೆ. ಇದು ಮುಗ್ಧರ ಮೇಲೆ ನಡೆಯುತ್ತಿರುವ ಮೌನ ಸಂಹಾರ ಎಂದರೆ ತಪ್ಪಾಗದು.

ಅತೀ ಶೀಘ್ರವಾಗಿ ಪ್ರತಿ ತಾಲೂಕಿಗೊಂದು 'ಹೊಸತು' ಬಳಗ ಆರಂಭವಾಗಲಿ. ಪತ್ರಿಕೆಯ ಪ್ರಸಾರ ಸಂಖ್ಯೆಯನ್ನು ಹೆಚ್ಚಿಸಿ, ಜನರಲ್ಲಿ ವೈಚಾರಿಕ ಪ್ರಜ್ಞೆಯನ್ನು ಬೆಳೆಸುವ ಕೆಲಸ ಮಾಡಲಿ. ಒಟ್ಟಾರೆ ತರ್ಕಿಸುವ, ಪ್ರಶ್ನಿಸುವ, ಆಲೋಚಿಸುವ ಚಿಂತನೆಯನ್ನು ಜನರಲ್ಲಿ ಬೆಳೆಸಬೇಕಿದೆ. ನಿರ್ಲಕ್ಷಿಸಿದರೆ ಜಗದ ತುಂಬೆಲ್ಲಾ 'ಬೆಳೆ'ಯ ಬದಲು 'ಕಳೆ'ಯೇ ಬೆಳೆದು ನಿಲ್ಲಬಹುದೆಂಬ ಭಯ ನನ್ನನ್ನು ಕಾಡುತ್ತಿದೆ.

*ಬಾಗಲಕೋಟ* **ಕೆ. ಬಿ. ವೀರಲಿಂಗನ ಗೌಡ್ರ**



# ಋಗ್ವೇದ ಪ್ರವೇಶಿಕೆ
# ಐತಿಹ್ಯ ಮತ್ತು ವಾಸ್ತವ

ಜಿ. ರಾಮಕೃಷ್ಣ

ಸೂರ್ಯಾ ಸೂಕ್ತವು (೧೦.೮೫) ಸೂರ್ಯಾಳ ಕಲ್ಪಿತ ವಿವಾಹದ ವಿವರಣೆಯ ರೂಪದಲ್ಲಿದ್ದರೂ ವಸ್ತುತಃ ಅದು ವೇದಕಾಲೀನ ಸಮಾಜದಲ್ಲಿ ಇದ್ದಿರಬಹುದಾದ ವಿವಾಹೋತ್ಸವದ ವಿಧಾನ ಮತ್ತು ಉತ್ಸಾಹಗಳನ್ನು ಕಟ್ಟಿಕೊಡುತ್ತದೆ. ಪ್ರಸ್ತುತ ಮಾಲಿಕೆಯ ಈ ಹದಿಮೂರನೆಯ ಕಂತಿನಲ್ಲಿ ಸೂಕ್ತದ ಉಳಿದ ಭಾಗವನ್ನು ಪರಿಚಯಿಸಿಕೊಳ್ಳೋಣ. ಮದುಮಗಳ ಒಂದು ಮಾದರಿಯಾಗಿ ಸೂರ್ಯಾ ಕಂಗೊಳಿಸುತ್ತಾಳೆ.

**ಸೂ**ಕ್ತದ ಮುಂದಿನ ೧೪ ಮಂತ್ರಗಳಲ್ಲಿ (೨೦ರಿಂದ ೩೩) ವಧುವು ಪತಿಯ ಗೃಹಕ್ಕಾಗಿ ತೆರಳಲು ರಥವನ್ನೇರುವುದು, ಹಾದಿಯನ್ನು ಕ್ರಮಿಸುವುದು ಹಾಗೂ ಪತಿಗೃಹವನ್ನು ತಲುಪುವುದು ಚಿತ್ರಿತವಾಗಿದೆ. ವಿವಾಹದ ಸಂದರ್ಭವು ಜೀವನದಲ್ಲಿ ತಿರುವಿನ ಒಂದು ಕಾಲ. ಅವಳ ಪಯಣಕ್ಕಾಗಿ ಸುಂದರವಾದ ರಥವೊಂದನ್ನು ಮನೋಜ್ಞವಾಗಿ ಅಲಂಕರಿಸಿ ಸಿದ್ಧಗೊಳಿಸಲಾಗಿದೆ. ಆ ರಥವು ಅವಳನ್ನು ಹೊಸದೊಂದು ಜೀವನಕ್ಕೆ, ಅಮೃತತ್ವಕ್ಕೆ, ಕೊಂಡೊಯ್ಯಲಿದೆ. ಪತಿಗೃಹದಲ್ಲಿ ಅವಳ ಆಗಮನವು ಪತಿಗೆ ಸುಖಕರವಾಗಲಿದೆ. ಮುತ್ತುಗದ ಮತ್ತು ಬೂರುಗದ ಹೂವುಗಳು ರಥವನ್ನು ಆಕರ್ಷಕವಾಗಿರುವಂತೆ ಮಾಡಿವೆ; ರಥದ ಚಕ್ರಗಳನ್ನು ಮುತ್ತುಗ ಮತ್ತು ಬೂರುಗದ ಮರದಿಂದ ಮಾಡಲಾಗಿದೆ ಎಂದು ಸಹ ಅರ್ಥೈಸಬಹುದು; ಅಂದರೆ, ನವಿರು ಮರಗಳಿಂದ ಮಾಡಲಾಗಿರುವುದರಿಂದ ರಥವು ಶೀಘ್ರ ಚಲನೆಗೆ ಸಮರ್ಥವಾಗಿದೆ. ರಥವು ಚಿನ್ನದ ಹೊಳಪನ್ನು ಸಹ ಹೊಂದಿದೆ (೧೦.೮೫.೨೦: ಸುಕಿಂಶುಕಂ ಶಲ್ಮಲಿಂ ವಿಶ್ವರೂಪಂ ಹಿರಣ್ಯವರ್ಣಂ ಸುವೃತಂ ಸುಚಕ್ರಂ। ಆ ರೋಹ ಸೂರ್ಯೇ ಅಮೃತಸ್ಯ ಲೋಕಂ ಸ್ಯೋನಂ ಪತ್ಯೇ ವಹತುಂ ಕೃಣುಷ್ವ॥). ಪತಿಗೃಹಕ್ಕೆ ತೆರಳಲು ರಥವನ್ನೇರುವುದು ಅಮೃತತ್ವದೆಡೆಗೆ ಪಯಣವನ್ನು ಆರಂಭಿಸಿದಂತೆ ಎಂಬ ಚಮತ್ಕಾರದ ಮಾತು ಇಲ್ಲಿದೆ. ವಿವಾಹ ಸಂಭ್ರಮದ ವಾತಾವರಣದ ಚಿತ್ರಣಕ್ಕೆ ಮೀಸಲಾದ ಭಾಗ ಇದು ಎನ್ನಬಹುದು. ಗಂಧರ್ವರು ಕನ್ಯೆಯರ ಶುಭವನ್ನು ಹಾರೈಸುವವರು, ರಕ್ಷಣೆ ನೀಡುವವರು. ಈವರೆಗೆ ಸೂರ್ಯಾಳಿಗೆ ಅವರ ಎಚ್ಚರದ ಪೋಷಣೆ ಅಗತ್ಯವಿತ್ತು, ಆದರೆ ಪತಿಗೃಹಕ್ಕೆ ಹೊರಟಿರುವ ಆಕೆಗೆ ಇನ್ನು ಮುಂದೆ ಪತಿಯ ಆಸರೆ ಇರುತ್ತದಾದ್ದರಿಂದ ಗಂಧರ್ವರು ಬೇರೊಬ್ಬ ಕನ್ಯೆ ಇದ್ದರೆ ಅವಳ ರಕ್ಷಣೆಯ ಭಾರ ಹೊರಬಹುದು! ವಿಶ್ವಾವಸು ಗಂಧರ್ವರಲ್ಲಿ ಒಬ್ಬ. ಈವರೆಗೆ ಸೂರ್ಯಾಳನ್ನು ಎಚ್ಚರದಿಂದ ಕಾದಿರುವ ಅವನು ಸ್ತುತಿಗೆ ಅರ್ಹ, ಆದರೆ ಅವಳನ್ನು ಅವಳ ಪತಿಗೆ ಒಪ್ಪಿಸಿ ನಿರ್ಗಮಿಸುವ ಕಾಲ ಸಂದಿದೆ (೨೧: ಉದೀರ್ಷ್ವ ಅತಃ ಪತಿವತೀ ಹಿ ಏಷಾ ವಿಶ್ವಾವಸುಂ ನಮಸಾ ಗೀರ್ಭಿಃ ಈಳೇ। ಅನ್ಯಾಮಿಚ್ಛ ಪಿತೃಷದಂ ವ್ಯಕ್ತಾಂ ಸ ತೇ ಭಾಗೋ ಜನುಷಾ ತಸ್ಯ ವಿದ್ಧಿ॥). ವಿವಾಹವು ಜೀವನದಲ್ಲಿ ಎಂತಹ ಸಂಧಿಕಾಲವೆಂಬುದನ್ನು ಈ ಮಂತ್ರವು ಸೂಚಿಸುತ್ತದೆ. ಮುಂದಿನ ಮಂತ್ರವು (೨೨) ಇದನ್ನೇ ಪುನರಪಿ ವ್ಯಕ್ತಮಾಡುತ್ತದೆ (ಸಂ ಜಾಯಾಂ ಪತ್ಯಾ ಸೃಜ); ಅಂದರೆ, ವಧುವನ್ನು ಗಂಡನ ಮನೆಗೆ ಬೀಳ್ಕೊಡು ಮತ್ತು ಬೇರೊಬ್ಬ ಹೆಣ್ಣಿನ ರಕ್ಷಣೆಗೆ ಮನಸ್ಸು ಕೊಡು, ಎಂದು. ಆದರೆ ಮುಖ್ಯವಾದ ವಿಷಯವು ವಧುವಿಗೆ ಸಂಬಂಧಿಸಿದ್ದು. ಪತಿಗೃಹಕ್ಕೆ ತೆರಳುತ್ತಿರುವ ಆಕೆಯ ಹಾದಿಯು ನೇರವಾಗಿರಬೇಕು, ಕಲ್ಲುಮುಳ್ಳುಗಳಿಂದ ತುಂಬಿರಬಾರದು; ಅಂದರೆ, ವಿವಾಹಿತ ಜೀವನವು ಸುಗಮವಾಗಿರಬೇಕು, ಮಧುರವಾಗಿರಬೇಕು. ಯಾರೇ ಆಗಲಿ, ವರ ಅಥವಾ ವಧುವಿನ ಅನ್ವೇಷಣೆಗೆ ಹೊರಟಾಗ ಅವರ ಹಾದಿಯೂ ಹಾಗಿರಬೇಕು. ಅರ್ಥಾತ್, ಎಲ್ಲ ವಧೂ–ವರರ ಜೀವನವು ಸುಕ್ಷೇಮವಾಗಿರಬೇಕು; ಅರ್ಯಮನ್ ಮತ್ತು ಭಗ ಎಂಬ ದೇವತೆಗಳು ಇದನ್ನು ಆಗುಮಾಡಿಕೊಡಬೇಕು. ಆಗ ಎಲ್ಲ ಗಂಡು–ಹೆಣ್ಣುಗಳ ಮಿಲನವು ಉತ್ಕೃಷ್ಟವಾಗಿರುತ್ತದೆ ಎಂಬ ಆಶಯವನ್ನಿಲ್ಲಿ ಪ್ರಕಟಿಸಲಾಗಿದೆ





(೨೩ : ಅನೃಕ್ಷರಾ ಋಜವಃ ಸಂತು ಪಂಥಾಃ ಯೇಭಿಃ ಸಖಾಯೋ ಯಂತಿ ನೋ ವರೇಯಂ। ಸಮರ್ಯಮಾ ಸಂ ಭಗೋ ನೋ ನಿನೀಯಾತ್ ಸಂ ಜಾಃ ಪತ್ಯಂ ಸುಯಮಂ ಅಸ್ತು ದೇವಾಃ॥). ಸೂರ್ಯಾಳಿಗೇನೋ ಪತಿಯ ಪ್ರಾಪ್ತಿಯಾಗಿದೆ, ಆದರೆ ಸೂರ್ಯಾಳಂತಹ ಬೇರೆ ವಧುಗಳು ಬೇಕಾದಷ್ಟಿದ್ದಾರೆ, ಇರುತ್ತಾರೆ. ಅವರ ಭಾಗ್ಯವು ಸೂರ್ಯಾಳ ಭಾಗ್ಯದಂತೆಯೇ ಇರಬೇಕೆಂಬ ಲಾಲಸೆ ಕವಿಯದು. ಸೂರ್ಯಾಳ ಮಟ್ಟಿಗೆ ಪಿತೃಗೃಹದ ಸಂಬಂಧ ಕಳಚಿಹೋಗುತ್ತಿದೆ. ಸವಿತೃ ದೇವತೆಯು ಅವಳನ್ನು ತಂದೆಯ ಮಡಿಲಿಗೆ ಹಾಕಿದ್ದ ಮತ್ತು ಆ ಸಂಬಂಧವನ್ನು ವರುಣನು ಜತನದಿಂದ ಈವರೆಗೆ ಕಾಪಾಡಿದ್ದಾನೆ. ತಂದೆಯ ಮನೆಯಲ್ಲಿ ಎಲ್ಲವೂ ನಿರ್ದಿಷ್ಟ ಕ್ರಮದಲ್ಲಿ ನಡೆದಿದೆ; ಅಂದರೆ ಪಾಲನೆ-ಪೋಷಣೆಯಲ್ಲಿ ಯಾವ ನ್ಯೂನತೆಗೂ ಅವಕಾಶ ಇಲ್ಲದಂತೆ ನೋಡಿಕೊಳ್ಳಲಾಗಿದೆ. ಹಾಗೆ ನಾಜೂಕಾಗಿ




ಪೋಷಿಸಲ್ಪಟ್ಟ ಮಗಳನ್ನು ಈಗ ಪತಿಯ ಬಳಿಗೆ ಕಳಿಸಲಾಗುತ್ತಿದೆ (೨೪ : ಪ್ರ ತ್ವಾ ಮುಂಚಾಮಿ ವರುಣಸ್ಯ ಪಾಶಾತ್ ಯೇನ ತ್ವಾ ಅಬಧ್ನಾತ್ ಸವಿತಾ ಸುಶೇವಃ। ಋತಸ್ಯ ಯೋನೌ ಸುಕೃತಸ್ಯ ಲೋಕೇ ಅರಿಷ್ಟಾಂ ತ್ವಾ ಸಹ ಪತ್ಯಾ ದಧಾಮಿ॥). ತಂದೆ-ತಾಯಿಯರ ಮತ್ತು ವಧುವಿನ ಮಾನಸಿಕ ತುಮುಲ ಹಾಗೂ ಗಾಢ ಆಕಾಂಕ್ಷೆಗಳನ್ನು ಇಲ್ಲಿ ವ್ಯಂಜಿಸಲಾಗಿದೆ ಎಂಬುದನ್ನು ಗಮನಿಸಬೇಕು.

ಮುಂದಿನ ಕೆಲವು ಮಂತ್ರಗಳು ವಧುವು ಪಿತೃಗೃಹದಿಂದ ನಿರ್ಗಮಿಸುವ ಸಂದರ್ಭದಲ್ಲಿ ಉಕ್ತವಾಗುವಂಥವು. ವಿವಾಹದ ಸಂದರ್ಭದಲ್ಲಿ ಈಗಲೂ ಅವನ್ನು ಅಂತೆಯೇ ಬಳಸಲಾಗುತ್ತಿದೆ. ಎಲ್ಲ ದೇವತೆಗಳೂ ಅವಳ ಮುಂದಿನ ರಕ್ಷಣೆಗೆ ಬಾಧ್ಯರು, ಅಂತೆಯೇ ಅವಳ ಸರ್ವತೋಮುಖ ವೃದ್ಧಿಗೆ ಸಹ. ಮಗಳನ್ನು ಮನೆಯಿಂದ ಕಳಿಸುವಾಗ "ತಂದೆ-ತಾಯಿಯರ ಕರುಳು ಕಿತ್ತುಬರುತ್ತದೆ" ಎಂಬರ್ಥದಲ್ಲಿ ಅವರ ಮನೋವ್ಯಾಪಾರವನ್ನು ಸಾಹಿತ್ಯದಲ್ಲಿ ಅನೂಚಾನವಾಗಿ ಪ್ರತಿಬಿಂಬಿಸಲಾಗಿದೆ. ಅವರ ಮನಸ್ಸು ಎರಡು ರೀತಿಗಳಲ್ಲಿ ಸಂಚರಿಸುತ್ತದೆ : "ಮಗಳೇ, ನೀನು ನಮ್ಮಿಂದ ನಿರ್ಗಮಿಸುತ್ತಿದ್ದೀಯೆ, ಆದರೆ ಮುಂದೆ ಪತಿಯಿಂದ ನಿರ್ಗಮಿಸುವುದು ಬೇಡ", ಎಂಬುದು ಒಂದು ಧಾರೆ; ಪತಿಯ ಗೃಹದಲ್ಲಿ ಸುಭದ್ರವಾಗಿ ನೆಲೆಸಿ ಹಸನಾದ ಜೀವನವನ್ನು ನಡೆಸಬೇಕು, ಪುತ್ರಭಾಗ್ಯ ಪಡೆದು ಸಂತಸದಿಂದಿರಬೇಕು, ಎನ್ನುವುದು ಇನ್ನೊಂದು ಧಾರೆ (೨೫ : ಪ್ರ ಇತಃ ಮುಂಚಾಮಿ ನ ಅಮುತಃ ಸುಬದ್ಧಾಂ ಅಮುತಃ ಕರಂ। ಯಥೇಯಮಿಂದ್ರ ಮೀಢ್ವಃ ಸುಪುತ್ರಾ ಸುಭಗಾ ಅಸತಿ॥). ಈವರೆಗೆ ವರುಣನ ರಕ್ಷಣೆಯಲ್ಲಿದ್ದವಳು, ಮುಂದೆ ಇಂದ್ರನ ಕೃಪೆಗೆ ಪಾತ್ರಳಾಗುವ ಸನ್ನಿವೇಶ ಬಂದಿದೆ. ಇಂದ್ರನು ಅವಳ ಕೈಹಿಡಿದು ಮುನ್ನಡೆಸಬೇಕೆಂಬ ಪ್ರಾರ್ಥನೆ ಇಲ್ಲಿದೆ.

ಮುಂದಿನ ದಿನಗಳಲ್ಲಿ ಮಗಳ ಜೀವನದ ಬಗೆಗಿನ ಆಶಯದ ಜೊತೆಗೆ ತಂದೆ-ತಾಯಿಯರಲ್ಲಿ ದುಗುಡವೂ ತುಂಬಿದೆ : ಇನ್ನೇನು ಅಚಾತುರ್ಯ ಸಂಭವಿಸಿ ಬಿಡಬಹುದೋ ಎಂದು. ಆದರೆ ದೇವತೆಗಳು ಅವಳ ಬೆನ್ನಿಗೆ ನಿಂತು ಎಲ್ಲವನ್ನೂ ಸುಸೂತ್ರವಾಗಿ ನಡೆಸುತ್ತಾರೆಂಬ ಭರವಸೆಯು ಅವರಿಗೆ ಊರುಗೋಲಾಗುತ್ತದೆ. "ಪೂಷನ್ ನಿನ್ನ ಕೈಹಿಡಿದು ನಡೆಸಲಿ, ಅಶ್ವಿನಿ ದೇವತೆಗಳು ನಿನ್ನನ್ನು ತಮ್ಮ ರಥದಲ್ಲಿ ಕರೆದೊಯ್ಯಲಿ. ನೀನು ಪತಿಗೃಹವನ್ನು ಸೇರಿ ಕುಟುಂಬದ ಯಜಮಾನಿತಿಯಾಗು ಮತ್ತು ಅಲ್ಲಿರುವ ಎಲ್ಲರೊಡನೆ ಚೆನ್ನಾಗಿ ವ್ಯವಹರಿಸು. ಅಲ್ಲಿ ನೀನು ಸುಖವಾಗಿರು, ಮಕ್ಕಳನ್ನು ಪಡೆದು ಕುಟುಂಬವನ್ನು ವಿಸ್ತರಿಸಿಕೋ. ಕುಟುಂಬವನ್ನು ಚೆನ್ನಾಗಿ ನಿರ್ವಹಿಸು. ನಿನ್ನ ಶರೀರವನ್ನು ಪತಿಯೊಡನೆ ಸಮೀಕರಿಸಿಕೊಂಡು ಕುಟುಂಬದ ನೇತಾರಳಾಗಿ ಮುನ್ನಡೆಸು" ಎಂಬುದು ತಂದೆ-ತಾಯಿಯರ ಅಭಿಲಾಷೆ ಮತ್ತು ಆಶೀರ್ವಚನ (೨೬-೨೭ : ಪೂಷಾ ತ್ವಾ ಇತಃ ನಯತು ಹಸ್ತಗೃಹ್ಯಾಶ್ವಿನಾ ತ್ವಾ ಪ್ರ ವಹತಾಂ ರಥೇನ। ಗೃಹಾನ್ ಗಚ್ಛ ಗೃಹಪತ್ನೀ ಯಥಾಸೋ ವಶಿನೀ ತ್ವಂ ವಿದಥಂ ಆ ವದಾಸಿ॥ ಇಹ ಪ್ರಿಯಂ ಪ್ರಜಯಾ ತೇ ಸಮೃಧ್ಯತಾಂ ಅಸ್ಮಿನ್ ಗೃಹೇ ಗಾರ್ಹಪತ್ಯಾಯ ಜಾಗೃಹಿ। ಏನಾ ಪತ್ಯಾ ತನ್ವಂ ಸಂ ಸೃಜಸ್ವ ಅಧಾ ಜಿವ್ರೀ ವಿದಥಂ ಆ ವದಾಥಃ॥). ವಧುವು ಪತಿಗೃಹವನ್ನು ಪ್ರವೇಶಿಸುವಾಗ ಈ ಮಂತ್ರಗಳನ್ನು ಹೇಳುವುದು ರೂಢಿಯಲ್ಲಿದೆ.

ದೇವತೆಗಳೆಲ್ಲಾ ಇದ್ದಾರೆ, ಅವರಲ್ಲಿ ಭರವಸೆ ಇದೆ, ಸರಿ; ಆದರೆ ವಧುವಿಗೆ ತೊಡಕುಂಟಾಗುವ ಸಂಭವ ಪೂರ್ತಿ ನಿವಾರಣೆಯಾಗಿಲ್ಲ. ಏಕೆಂದರೆ, ಕೃತ್ಯಾ ಎಂಬೊಬ್ಬ ಮಾಟಗಾತಿಯೋ ದೇವತೆಯೋ ಇದ್ದಾಳೆ, ಅವಳು ವಧುವನ್ನು ತನ್ನ ತೆಕ್ಕೆಯಲ್ಲಿ ಹಿಡಿದಿಟ್ಟು ಕೊಳ್ಳಬಹುದು ಎಂಬ ಸಂಶಯವಿದೆ. ಅವಳನ್ನು ವಧುವಿನಿಂದ ದೂರಮಾಡಬೇಕು. ಅವಳಾದರೋ ನೀಲಿ ಮತ್ತು ಕೆಂಪು ಬಣ್ಣಗಳಿಂದ ಮಿಶ್ರಿತಳಾಗಿದ್ದಾಳೆ. ಅವಳ ಸಂಭವನೀಯ ಉಪಟಳದಿಂದ ಮುಕ್ತಳಾಗಿ ವಧುವು ತನ್ನ ಕುಟುಂಬದೊಂದಿಗೆ ವರ್ಧಿಸಬೇಕು, ಪತಿಯನ್ನು ತನ್ನ ಪ್ರೇಮಬಂಧನದಲ್ಲಿ ಇರಿಸಿಕೊಳ್ಳಬೇಕು (೨೮ : ನೀಲಲೋಹಿತಂ ಭವತಿ ಕೃತ್ಯಾ ಆಸಕ್ತಿಃ ವ್ಯಜ್ಯತೇ। ಏಧಂತೇ ಅಸ್ಯಾ ಜ್ಞಾತಯಃ ಪತಿರ್ಬಂಧೇಷು ಬಧ್ಯತೇ॥). ಅದನ್ನು ಸಿದ್ಧಿಸಿಕೊಳ್ಳುವುದು ಹೇಗೆ? ಪ್ರಾಚೀನ ಮಾಂತ್ರಿಕತೆಯ ಸುಳುಹು ಇಲ್ಲಿದೆ. ಮಾಂತ್ರಿಕತೆಯೆಂಬುದು ಇಲ್ಲಿ ಮೂರ್ತವಾದ ಕ್ರಿಯೆಯೊಂದನ್ನು ಆಶ್ರಯಿಸಿಲ್ಲ. ಗಟ್ಟಿಯಾದ ಭಾವನೆ ಮತ್ತು ಆಶಯವು ಆ ಗಟ್ಟಿತನದಿಂದಲೇ ಪೂರೈಸಿಬಿಡುತ್ತದೆ. ಇದು ಪ್ರಾರ್ಥನೆಯಲ್ಲ, ಪ್ರಾರ್ಥನೆಯನ್ನು ಯಾವ ದೇವತೆಗೂ ಸಲ್ಲಿಸುವ ಪ್ರಮೇಯವಿಲ್ಲ. ಪ್ರಬಲವಾದ ಆಕಾಂಕ್ಷೆಯು ತನ್ನಿಂದ ತಾನೆ ಸಫಲವಾಗುತ್ತದೆ. ವಧುವಿನ ವಸ್ತ್ರಗಳಲ್ಲಿ ಯಾವುದೋ ಒಂದನ್ನು ಕಳಚಿಹಾಕಿದರೆ ಸಾಕು, ಕೃತ್ಯಾಳಂತಹ ಮಾಟಗಾತಿ ಬದಲಾಗಿಬಿಡುತ್ತಾಳೆ; ಬೇಕಾದರೆ ಯಾರಾದರೂ ಪುರೋಹಿತನಿದ್ದರೆ ಅವನ ಕೈ ಬೆಚ್ಚಗೆ ಮಾಡಿದರಾಯಿತು! ಆಗ ಉಪಟಳ ನೀಡುವ ಬದಲು ಕೃತ್ಯಾ ಪರಿಚಾರಕಿಯಾಗಿಬಿಡುತ್ತಾಳೆ: ಮಡದಿಯು ಪತಿಯ ಪರಿಚಾರಕಿಯಾಗುವಂತೆ (೨೯ : ಪರಾ ದೇಹಿ ಶಾಮುಲ್ಯಂ ಬ್ರಹ್ಮಭ್ಯೋ ವಿ ಭಜಾ ವಸು। ಕೃತ್ಯಾ ಏಷಾ ಪದ್ವತೀ ಭೂತ್ವೀ ಆ ಜಾಯಾ ವಿಶತೇ ಪತಿಂ॥). ವಧುವಿಗೆ ಮಾತ್ರವಲ್ಲ, ವರನಿಗೂ ಕೃತ್ಯಾಳ ಪ್ರಭಾವ ತಟ್ಟುತ್ತದೆ. ಅವನನ್ನು ಅವಳು ಆವರಿಸಿದಾಗ ಅವನ ಶರೀರವು ಕಾಂತಿಹೀನ; ಅದಕ್ಕಿರುವುದು ಒಂದೇ ಪರಿಹಾರ : ಅವನು ತನ್ನ ಪತ್ನಿಯ ಉಡುಗೆಯಲ್ಲಿ ಸೇರಿಕೊಳ್ಳಬೇಕು, ಅಷ್ಟೆ. (೩೦ : ಅಶ್ರೀರಾ ತನೂಃ ಭವತಿ ರುಶತೀ ಪಾಪಯಾಮುಯಾ। ಪತಿಃ ಯತ್ ವಧ್ವಃ ವಾಸಸಾ ಸ್ವಮಂಗಂ ಅಭಿಧಿತ್ಸತೇ॥). ವಧುವು ತನ್ನ ತಂದೆ-ತಾಯಿಯರಿಂದ ಹಾಗೂ ಕುಲದ ಇತರರಿಂದ ಯಕ್ಷ್ಮದಂತಹ (ಕ್ಷಯ) ರೋಗವನ್ನು ಅಂಟಿಸಿ ಕೊಂಡು ಹೋಗಿದ್ದರೆ ಏನು ಮಾಡುವುದು? ಅವಳು ಅದನ್ನು ಕೊಡವಿಹಾಕಿ ಪತಿಯ ಮನೆಯನ್ನು ಸೇರಬೇಕು. ಅಂತಹ ರೋಗವೇನಾದರೂ ಇದ್ದರೆ ಮಹಾನ್ ದೇವತೆಗಳು ಆ ರೋಗವನ್ನು ಅದರ ಮೂಲಸ್ಥಾನದಲ್ಲೇ ಇರುವಂತೆ ಮಾಡಬೇಕು, ವಧುವಿನೊಡನೆ ಅಂಟಿಕೊಂಡು ತಾನೂ ಹೋಗುವಂತಿರಬಾರದು (೩೧ : ಯೇ ವಧ್ವಃ ಚಂದ್ರಂ ವಹತುಂ ಯಕ್ಷ್ಮಾ ಯಾಂತಿ ಜನಾದನು। ಪುನಸ್ತಾನ್ ಯಜ್ಞಿಯಾ ದೇವಾ ನಯಂತು ಯತ ಆಗತಾಃ॥). ಕೆಲವು ರೋಗಗಳು ಆನುವಂಶಿಕವಾಗಿ ಸದಾ ಮುಂದುವರಿಯುತ್ತವೆಂಬ ತಿಳಿವಳಿಕೆಯ ಸ್ಪಷ್ಟೋಕ್ತಿಯನ್ನು ಇಲ್ಲಿ ಗಮನಿಸಬೇಕು. ಆ ಪಿಡುಗನ್ನು ಪ್ರಾಚೀನ ಮಾಂತ್ರಿಕತೆಯಿಂದ ದೂರೀಕರಿಸ ಬಹುದೆಂಬ ನಂಬಿಕೆಯು ವೇದಕಾಲದ್ದು. ಚರಕ ಸಂಹಿತೆಯಲ್ಲಿ ಇದನ್ನು ದೈವವ್ಯಪಾಶ್ರಯ ಭೇಷಜ ಎನ್ನಲಾಗಿದೆ. ಪ್ರಕೃತಿ ಹಾಗೂ ಮಾನವ ದೇಹದ ಅಂತರ್ಗತ ನಿಯಮಗಳ ಜ್ಞಾನವು ದೊರಕಿದ ನಂತರದ ಘಟ್ಟದಲ್ಲಿ ದೈವವ್ಯಪಾಶ್ರಯ ಭೇಷಜದ ಜಾಗದಲ್ಲಿ ಯುಕ್ತಿವ್ಯಪಾಶ್ರಯ ಭೇಷಜವು ಕಾಣಿಸಿಕೊಳ್ಳುತ್ತದೆ. ಮಾನವ ಶರೀರದ ನಿಯಮಗಳ ತಿಳುವಳಿಕೆಯಲ್ಲದೆ ಅಗ್ಗೆ ಪ್ರಕೃತಿಯಲ್ಲಿ ಲಭಿಸುವ ಮೂಲಿಕೆಗಳ ವಿಶೇಷ ಲಕ್ಷಣಗಳ ಪರಿಚಯವೂ ಲಭಿಸಿರುತ್ತದೆ. ಆದ್ದರಿಂದ ಜ್ಞಾನದ ಸಹಾಯದಿಂದ ಮಧ್ಯಪ್ರವೇಶ ಮಾಡಿ ರೋಗವನ್ನು ಹೋಗಲಾಡಿಸಲು ಸಾಧ್ಯವಾಗುತ್ತದೆ. ಕಾರ್ಯ-ಕಾರಣ ಭಾವದ ಜ್ಞಾನ ಲಭಿಸಿದಾಗ ಪ್ರಾಚೀನ ಮಾಂತ್ರಿಕತೆಯು ಅನಗತ್ಯವಾಗುತ್ತದೆ, ಲುಪ್ತವಾಗಿಹೋಗುತ್ತದೆ.

ಒಟ್ಟಿನಲ್ಲಿ, ಮದುವಣಗಿತ್ತಿಯು ತಾನು ಬಹುಶಃ ಎದುರಿಸಬೇಕಾಗುವಂತಹ ಎಲ್ಲ ಕಂಟಕಗಳನ್ನು ಪರಿಹರಿಸಿಕೊಂಡು ಪತಿಗೃಹಕ್ಕೆ ಹೊರಟಿದ್ದಾಳೆ. ಹಾದಿಯಲ್ಲಿ

ಬೇರಿನ್ನಾವ ತೊಡಕುಗಳೂ ಸಂಭವಿಸದಿರಲೆಂದು ಸಹಜವಾಗಿಯೇ ಆಶಿಸಲಾಗುತ್ತದೆ. ಋಗ್ವೇದವು ರಚನೆಗೊಂಡದ್ದು ಭಾರತದ ವಾಯವ್ಯ ಭಾಗದಲ್ಲಿ. ಋಗ್ವೇದದ ಆರ್ಯರು ಅಲ್ಲಿಂದ ಕ್ರಮೇಣ ದಕ್ಷಿಣಕ್ಕೆ ಹೊರಟು ಗಂಗಾ ಬಯಲನ್ನು ಪ್ರವೇಶಿಸಿದರು. ಋಗ್ವೇದ ಸೂಕ್ತಗಳೆಲ್ಲಾ ಒಂದೇ ಪ್ರದೇಶದಲ್ಲಿ ರಚಿತವಾದಂತೆ ತೋರುವುದಿಲ್ಲ. ಉತ್ತರಕಾಲೀನ ಸೂಕ್ತಗಳು ಆರ್ಯಾವರ್ತವೆಂದು ಕರೆಯಲಾದ ಇಂದಿನ ಪಂಜಾಬ್-ಹರ್ಯಾಣ ಪ್ರದೇಶದಲ್ಲಿ ರಚನೆಗೊಂಡಿರುವ ಸಾಧ್ಯತೆ ಇದೆ; ಅದೇ ಆದಿಭಾಗದ ಸೂಕ್ತಗಳು ಇನ್ನೂ ಹೆಚ್ಚು ವಾಯವ್ಯ ಪ್ರದೇಶದಲ್ಲಿ ರಚನೆಗೊಂಡಿವೆ. ಪ್ರಸ್ತುತ ಸೂಕ್ತವು ಎಲ್ಲೇ ರಚಿತಗೊಂಡಿರಲಿ, ವಧುವಿನ ಪ್ರಯಾಣಕ್ಕೆ ಸ್ವಲ್ಪ ದುರ್ಗಮವೆನಿಸುವ ಹಾದಿಯು ಅನಿವಾರ್ಯ. ಕಾಡುಮೇಡಿನ ಪ್ರದೇಶದಲ್ಲಿ ಪ್ರಯಾಣಿಕರನ್ನು ದೋಚುವ ವೃತ್ತಿ ಮಾಡಿಕೊಂಡವರಿಂದ ಭೀತಿ ಇರುತ್ತದೆ. ಋಗ್ವೇದದ ಕಾಲದಲ್ಲೂ ಈ ವೃತ್ತಿಯವರಿದ್ದರು. ಆದ್ದರಿಂದ "ವೇದಕಾಲೀನ ಸಂಸ್ಕೃತಿ"ಗೆ ಹಿಂದಿರುಗೋಣ ಎಂಬ ಕರೆ ಕೊಡುವವರು ಸ್ವಲ್ಪ ಎಚ್ಚರದಿಂದಿರುವುದು ಒಳ್ಳೆಯದು. ಅದೇನೇ ಇರಲಿ, ಸೂರ್ಯಾಳ ಪ್ರಯಾಣವು ಅಪಾಯರಹಿತವಾಗಿರಬೇಕು. ಆದ್ದರಿಂದ ದಂಪತಿಗಳನ್ನು ದಾರಿಹೋಕರು ಅಡ್ಡಗಟ್ಟಿ ಹಾನಿಗೀಡುಮಾಡದಿರುವಂತೆ ಆಗಲೆಂದು ಕವಿಯು ಆಶಿಸುತ್ತಾನೆ. ಇವರು ಆ ದಾರಿಹೋಕರ ಕಣ್ಣಿಗೆ ಬೀಳದಂತೆ ಅಪಾಯರಹಿತ ಪ್ರಯಾಣ ಬೆಳೆಸಲಿ, ಆತಂಕ ಉಂಟುಮಾಡುವಂಥವರು ದೂರ ಸರಿಯಲಿ, ಎಂಬ ಆಶಯವು ಇಲ್ಲಿ ಪ್ರಕಟಗೊಂಡಿದೆ (೩೨: ಮಾ ವಿದನ್ ಪರಿಪಂಥಿನೋ ಯೇ ಆಸೀದಂತಿ ದಂಪತೀ। ಸುಗೇಭಿಃ ದುರ್ಗಂ ಅತಿ ಇತಾಂ ಅಪ ದ್ರಾಂತು ಅರಾತಯಃ॥). ಹಾಗೆ ನಿರಾತಂಕವಾಗಿ ಪಯಣಿಸುತ್ತಿರುವ ಮದುವಣಗಿತ್ತಿ ಸೂರ್ಯಾಳನ್ನು ಬೇರೆ ಪಯಣಿಗರು ಹಾಗೂ ಹಾದಿಗಳಲ್ಲಿ ಓಡಾಡುತ್ತಿರುವ ಇತರೇ ಜನರು ನೋಡಬೇಕು, ಹರ್ಷಿಸಬೇಕು ಮತ್ತು ಆಶೀರ್ವದಿಸಬೇಕು. ಅಂದರೆ, ಸಾರ್ವಜನಿಕರು ಈಕೆಗೆ ಶುಭ ಕೋರಬೇಕು, 'ಇವಳೊಡನೆ ನಮ್ಮದೇನು ಸಂಬಂಧ' ಎಂದು ಅನಾಸಕ್ತರಾಗಿ ಕಣ್ಣೆತ್ತಿ ನೋಡದೆ ಹೋಗಿಬಿಡಬಾರದು. ಹೊಸ ಜೀವನಕ್ಕೆ ಕಾಲಿರಿಸುತ್ತಿರುವ ವಧುವಿಗೆ ಉತ್ತಮ ಭವಿಷ್ಯವಿರಲೆಂದು ಹಾರೈಸುವುದು ಮಾನವ ಧರ್ಮ. ನೆಂಟರಿಷ್ಟರು ಹರಸುವುದು ಇದ್ದೇ ಇದೆ, ಆದರೆ ಸಾರ್ವಜನಿಕರು ಕೂಡ ಮುದದಿಂದ ವಧುವಿಗೆ ಒಳಿತನ್ನು ಆಶಿಸಬೇಕು. "ನೋಡಿ, ವಧುವು ತೆರಳುತ್ತಿದ್ದಾಳೆ. ಉದಾಸೀನದಿಂದ ದೂರದಲ್ಲೇ ನಿಲ್ಲಬೇಡಿ; ಬದಲಾಗಿ, ಹತ್ತಿರ ಬನ್ನಿ ಮತ್ತು ವಧುರತ್ನವನ್ನು ನೋಡಿ. ಅವಳಿಗೆ ಸಕಲ ಸೌಭಾಗ್ಯಗಳೂ ದಕ್ಕಲೆಂದು ಹರಸಿ, ನಂತರ ನಿಮ್ಮ ದಾರಿ ಹಿಡಿದು ಹೋಗಿ." ಇದು ಮಂತ್ರದ ಸಾರಾಂಶ (೩೩: ಸುಮಂಗಲೀಃ ಇಯಂ ವಧೂಃ ಇಮಾಂ ಸಮೇತ ಪಶ್ಯತ। ಸೌಭಾಗ್ಯಂ ಅಸ್ಯೈ ದತ್ತ್ವಾಯ ಅಥ ಅಸ್ತಂ ವಿ ಪರಾ ಇತನ॥ ಪದವಿಭಾಗ ಮಾಡದೆ ಹೇಳುವಾಗ ಮಂತ್ರವು ಹೀಗಿರುತ್ತದೆ: ಸುಮಂಗಲೀರಿಯಂ ವಧೂರಿಮಾಂ ಸಮೇತ ಪಶ್ಯತ। ಸೌಭಾಗ್ಯಮಸ್ಯೈ ದತ್ತ್ವಾಯಾಥಾಸ್ತಂ ವಿ ಪರೇತನ). ಒಟ್ಟಿನಲ್ಲಿ, ವಿವಾಹದ ಸಂದರ್ಭವು ಸಾರ್ವಜನಿಕರು ಉಲ್ಲಾಸದಿಂದ ಭಾಗವಹಿಸಿ ಶುಭ ಕೋರುವ ಸಂದರ್ಭ.

"ನವೋನವೋ ಭವತಿ..." (೧೯) ಮಂತ್ರದಂತೆ ಈ ಮಂತ್ರವನ್ನೂ (೩೩) ಹೆಣ್ಣುಮಕ್ಕಳಿಗೆ ಮತ್ತು ಮಹಿಳೆಯರಿಗೆ ಆಶೀರ್ವಚನ ರೂಪದಲ್ಲಿ ಇಂದಿಗೂ ಬಳಸಲಾಗುತ್ತಿದೆ. ವಿಧವೆಯರಿಗೆ ಹೇಗೂ ಆಶೀರ್ವಚನವೆಂಥದೂ ಇಲ್ಲದ ನಮ್ಮ ಪರಂಪರೆಯಲ್ಲಿ ಅವರನ್ನು ಹರಸಲು ಯಾವ ಮಂತ್ರವೂ ಇಲ್ಲ. ವಿಧವೆಯರು ಹಿರಿಯರಿಗೆ, ಗುರುಗಳಿಗೆ, ನಮಸ್ಕರಿಸಬಹುದು; ಆದರೆ ಅವರಿಗೆ ಆಶೀರ್ವಚನ ಮಂತ್ರವಾವುದೂ ಇಲ್ಲ. ಹಾಗೇನಾದರೂ ಇದ್ದರೆ ಅದು ಪ್ರಸ್ತುತ ಲೇಖಕನಿಗೆ ತಿಳಿಯದು. ಶೃಂಗೇರಿ ಸ್ವಾಮಿಗಳಿಗೆ ವಿಧವೆಯೊಬ್ಬರು ನಮಸ್ಕರಿಸಿದಾಗ ಆಕೆಗೆ ಅವರು ಯಾವುದಾದರೂ ಮಂತ್ರ ಹೇಳಿ ಆಶೀರ್ವಾದ ನೀಡುತ್ತಾರೆಯೇ ಎಂಬುದು ಕುತೂಹಲದ ಸಂಗತಿ. ತೀರ್ಥ-ಪ್ರಸಾದಗಳನ್ನು ಸಹ ಅವರಿಗೆ ನೀಡಬಾರದೆಂಬ ಸಂಪ್ರದಾಯವಿದೆಯೆಂದು ಹೇಳುತ್ತಾರೆ. ಬಹುಹಿಂದೆ ಅಂದಿನ ಶೃಂಗೇರಿ ಸ್ವಾಮಿಗಳು ಮದ್ರಾಸಿನ ಕಲಾಕ್ಷೇತ್ರದ ನಿರ್ದೇಶಕಿ ರುಕ್ಮಿಣಿ ಅರುಂಡೇಲ್ ಅವರಿಗೆ ಸಂಪ್ರದಾಯವನ್ನು ಮುರಿದು ತೀರ್ಥ-ಪ್ರಸಾದ ನೀಡಿದ್ದರಂತೆ. ಅದರಿಂದ ಖ್ಯಾತ ಸಂಗೀತಗಾರರಾದ ಸನ್ಮಾನ್ಯ ವಾಸುದೇವಾಚಾರ್ಯರು, ಕಾರೈಕುಡಿ ಸಾಂಬಶಿವ ಅಯ್ಯರ್ ಅವರು, ಮುಂತಾದವರು ಬಹಳ ಅಸಮಾಧಾನ ಗೊಂಡಿದ್ದರಂತೆ. ಇರಲಿ, ಅದು ಪ್ರಸ್ತುತ ವಿವರಣೆಗೆ ಹೊರತಾದ್ದು. ಆದರೆ "ಸುಮಂಗಲೀರಿಯಂ..." (೩೩) ಮಂತ್ರದ ಇಂದಿನ ಪ್ರಯೋಗ ವಿಚಿತ್ರವಾಗಿದೆ. ಮೂಲದಲ್ಲಿ ಅದು "ಪತಿಗೃಹಕ್ಕೆ ತೆರಳುತ್ತಿರುವ ವಧುವನ್ನು ನೋಡಿ ಹರಸಿ ಹೋಗಿ" ಎಂಬರ್ಥವನ್ನು ಹೊಂದಿದೆ. ಅದರಲ್ಲಿ ನೇರವಾಗಿ ಏನು ಹಾರೈಕೆ ಎಂಬುದನ್ನು ಹೇಳಿಲ್ಲ. ಅದು ಹರಸುವವರಿಗೆ ಬಿಟ್ಟಿದ್ದು ಎಂದು ತೋರುತ್ತದೆ. "ನೀನು ದೀರ್ಘ ಸುಮಂಗಲಿಯಾಗು", "ನಿನಗೆ ಮಕ್ಕಳಾಗಲಿ", "ನಿನಗೆ ಸಂಪತ್ತು ದೊರೆಯಲಿ", "ನೀನು ಆರೋಗ್ಯವಂತಳಾಗಿರು" ಎಂದೆಲ್ಲಾ ಹರಸಬಹುದು. ಆದರೆ ಮಂತ್ರದಲ್ಲಿ ಅಂತಹ ಯಾವ ಹಾರೈಕೆಯೂ ಇಲ್ಲ. ಆ ಮಂತ್ರ ಹೇಳುವವನು ಏನೂ ಹರಸುತ್ತಿಲ್ಲ, ಬೇರೆಯವರಿಗೆ 'ದಯಮಾಡಿ ಬಂದು ಹರಸಿ' ಎಂದು ವಿನಂತಿಸಿ ಕೊಳ್ಳುತ್ತಿದ್ದಾನೆ. ಇಂದಿನ ಪ್ರಯೋಗ ಹೇಗಿದೆಯೆಂದರೆ ವಿವಾಹಿತ ಮಹಿಳೆಯೊಬ್ಬಳು ಹಿರಿಯರಿಗೋ, ಪುರೋಹಿತರಿಗೋ, ನಮಸ್ಕರಿಸಿದರೆ ಆಕೆಯ ತಲೆಯ ಮೇಲೆ ಅಕ್ಷತೆ ಕಾಳು ಹಾಕಿ ತಕ್ಷಣ ಈ ಮಂತ್ರವನ್ನು ಹೇಳಿಬಿಡುತ್ತಾರೆ! ಇವರಿಗೆ ನಮಸ್ಕರಿಸಿದಾಗ ಇವರೇ ಹರಸುವ ಬದಲು ಬೇರೆಯವರನ್ನು 'ನೀವು ಬಂದು ಹರಸಿ' ಎಂದು ಹೇಳಿದಂತಾಯಿತು. ಇದು ಹರಸುವ ಮಂತ್ರವಲ್ಲ, ಹರಸಲು ಇತರರಿಗೆ ಆಹ್ವಾನ ನೀಡುವ ಮಂತ್ರ, ಎಂಬುದು ಅದೇಕೆ ತಿಳಿಯದಾಗಿದೆಯೋ ಗೊತ್ತಿಲ್ಲ. ಮಂತ್ರದಲ್ಲಿ





'ಸುಮಂಗಲೀ' ಮತ್ತು 'ಸೌಭಾಗ್ಯ' ಎನ್ನುವ ಪದಗಳಿರುವುದು ಎಲ್ಲ ಸಂದರ್ಭಗಳಲ್ಲೂ ಅದನ್ನು ಬಳಸುವುದಕ್ಕೆ ಪ್ರೇರಣೆ ನೀಡಿರಬಹುದು. ನಮಸ್ಕರಿಸುವಾಕೆ ಆ ಸಂದರ್ಭದಲ್ಲಿ 'ವಧು' ಅಲ್ಲದಿದ್ದರೂ ಈ ಮಂತ್ರವನ್ನು ಆಕೆಯ ಬಗ್ಗೆ ಬಳಸುವುದೊಂದು ಸೋಜಿಗ! "ಬೇರೆಯವರು ಬಂದು ಹರಸುತ್ತಾರೆ, ಅದಿರಲಿ; ನೀವೇನು ಹರಸುತ್ತೀರಿ?" ಎಂದು ನಮಸ್ಕರಿಸಿದ ಮಹಿಳೆ ಕೇಳಬೇಕೋ ಏನೋ! ಋಗ್ವೇದದ ಅನೇಕ ಮಂತ್ರಗಳನ್ನು ದೇಶದ ಉದ್ದಗಲಕ್ಕೂ ಸಂದರ್ಭದ ಔಚಿತ್ಯವನ್ನು ಅಲ್ಲಗಳೆದು ನಿರಂತರವಾಗಿ ಬಳಸುತ್ತಾ ಬರಲಾಗಿದೆ ಎಂಬುದಂತೂ ನಿಜ. ಋಗ್ವೇದದ ಮಟ್ಟಿಗೆ ಹೇಳುವುದಾದರೆ, ಅದು ವಿವಾಹದ ಸಂಭ್ರಮದಲ್ಲಿ ಸಾರ್ವಜನಿಕರಿಗೆ ಭಾಗಿಗಳಾಗಲು ನೀಡಲಾದ ಕರೆ. ಸಮುದಾಯ ಜೀವನವು ಅನನ್ಯವಾಗಿದ್ದ ಕಾಲದ ಪದ್ಧತಿಯ ಒಂದು ಅವಿಭಾಜ್ಯ ಅಂಗ ಇದು.

## ಬೇಡ



ಬೇಡನ ಹೆಂಡತಿ
ಬಸಿರಾದದ್ದು ಕಂಡು
ಬೇಡಿಕೊಂಡವು
ಹಕ್ಕಿಗಳು;
ಬೇಡ ಈ ಜಗಕೆ
ಮತ್ತೊಬ್ಬ ಬೇಡ!

ಕುವರಯಲ್ಲಪ್ಪ
ಬಸವೇಶ್ವರನಗರ, ಬೆಂಗಳೂರು – ೫೬೦ ೦೭೯

ಯಸ್ಯಾಂ ಬೀಜಂ ಮನುಷ್ಯಾ ವಪಂತಿ। ಯಾ ನಃ ಊರೂ ಉಶತೀ ವಿಶ್ರಯಾತೇ ಯಸ್ಯಾಂ ಉಶಂತಃ ಪ್ರಹರಾಮ ಶೇಪಂ॥) ಪೂಷನ್ ದೇವತೆಗೆ ಒಂದು ಪ್ರಾರ್ಥನೆ ಸಲ್ಲಿಸಲಾಗಿದೆ: "ಹೇ ಪೂಷನ್, ಮಂಗಲಕಾರಕಳಾದ ಈಕೆಯನ್ನು ನನ್ನ ಬಳಿಗೆ ಬರುವಂತೆ ಪ್ರೇರೇಪಿಸು. ನನ್ನ ಸುಖ–ಸಂತೋಷಗಳಲ್ಲಿ ಭಾಗಿಯಾಗುವವಳು ಅವಳು; ತನ್ನೆರಡು ಕೈಗಳಿಂದಲೂ ನನ್ನನ್ನು ಆಲಂಗಿಸಿ ಪ್ರೇಮಕ್ಕೆ ಆಹ್ವಾನಿಸುವವಳು ಅವಳು." ಮಂತ್ರವನ್ನು ಪದಶಃ ಅರ್ಥೈಸುವುದರ ಬದಲು ಈ ಸಂಕ್ಷಿಪ್ತ ಅನುವಾದವನ್ನು ನೀಡಲಾಗಿದೆ. ಅದು ಆರ್. ಟಿ. ಎಚ್. ಗ್ರಿಫಿತ್‌ನ ಅನುವಾದವನ್ನು ಅನುಸರಿಸಿರುವಂಥದು. ಪದಶಃ ಅರ್ಥವು ಇನ್ನೂ ಹೆಚ್ಚು ವಾಚ್ಯವಾಗಿದೆ ಮತ್ತು ಸಾಯಣನು ಸಂಕೋಚವನ್ನು ಬದಿಗಿಟ್ಟು ಅದನ್ನು ಇರುವ ಹಾಗೆಯೇ ವ್ಯಾಖ್ಯಾನಿಸಿದ್ದಾನೆ: ಮಂಗಲಕಾರಕರಾದ ಸ್ತ್ರೀಯರಲ್ಲಿ ಮನುಷ್ಯರು ಬೀಜವನ್ನು ಬಿತ್ತುತ್ತಾರೆ; ಇತ್ಯಾದಿ.

ಮುಂದಿನ ಮಂತ್ರವು ಮತ್ತೆ ವಧು ಸೂರ್ಯಾಳ ವಸ್ತ್ರಗಳತ್ತ ಗಮನ ಹರಿಸುತ್ತದೆ. ಬಹುಶಃ ಅದು ಆ ಕ್ಷಣದ ವಸ್ತ್ರಗಳಿಗೆ ಅನ್ವಯಿಸಲಾಗದಂಥದು. ನಂತರದ ಯಾವುದೋ ಕ್ರಿಯೆಯ ನಂತರ ವಸ್ತ್ರಗಳು, ಈ ಮಂತ್ರದಲ್ಲಿ ವಿವರಿಸಲಾಗಿರುವಂತೆ, ಬದಲಾವಣೆ ಹೊಂದುವುದು ಸಾಧ್ಯ. ಅಂತಹ ಬದಲಾದ ವಸ್ತ್ರದ ಬಗೆಗಿನ ಮಾತು ಈ ಮಂತ್ರದಲ್ಲಿದೆ (೩೪: ತೃಷ್ಟಮೇತತ್ ಕಟುಕಮೇತತ್ ಅಪಾಷ್ಠವತ್ ವಿಷವತ್ ನ ಏತತ್ ಅತ್ತವೇ। ಸೂರ್ಯಾಂ ಯೋ ಬ್ರಹ್ಮಾ ವಿದ್ಯಾತ್ ಸ ಇತ್ ವಾಧೂ ಅಯಂ ಅರ್ಹತಿ॥). ಸೂರ್ಯಾಳ ಪ್ರಯಾಣವು ಮುಗಿಯುವ ವೇಳೆಗೆ ಅವಳ ವಸ್ತ್ರಗಳು ಈ ಲಕ್ಷಣಗಳನ್ನು ಹೊಂದಿರುತ್ತವೆಂದು ಭಾವಿಸಬಹುದೇನೋ. ವಿವಾಹ ಸಮಾರಂಭದ ಬೇರೆಬೇರೆ ಕ್ರಿಯೆಗಳ ಸಂದರ್ಭದಲ್ಲಿ ಈ ಮಂತ್ರಗಳನ್ನು ಪ್ರಯೋಗಿಸುತ್ತಾರೆಂಬುದನ್ನು ನೆನಪಿನಲ್ಲಿಡಬೇಕು. ವಧುವು ಧರಿಸಿರುವ ವಸ್ತ್ರಗಳನ್ನು ಒಂದೊಂದನ್ನಾಗಿ ಶುದ್ಧೀಕರಿಸುತ್ತಾ ಹೋಗುವಾಗ ಮುಂದಿನ ಮಂತ್ರವನ್ನು ಪಠಿಸಬಹುದು: ಸೂರ್ಯಾ ಧರಿಸಿರುವ ಉಡುಪಿನ ವಿವಿಧ ಬಣ್ಣಗಳನ್ನು ಹೆಸರಿಸಲಾಗಿಲ್ಲ; ಆದರೆ ಉಡುಪುಗಳನ್ನು ಹೆಸರಿಸಲಾಗಿದೆ. ಒಂದು, ಉಡುಪಿನ ಅಂಚು; ಇನ್ನೊಂದು ತಲೆಗೆ ಆಭರಣದಂತಿರುವುದು; ಮತ್ತೊಂದು ಮೂರು ಭಾಗಗಳನ್ನುಳ್ಳದ್ದು. ಇವನ್ನೆಲ್ಲಾ ಬ್ರಾಹ್ಮಣನು ಶುದ್ಧ ಮಾಡುತ್ತಾನೆ (೩೫: ಆಶಸನಂ ವಿಶಸನಂ ಅಥೋ ಅಧಿವಿಕರ್ತನಂ। ಸೂರ್ಯಾಯಾಃ ಪಶ್ಯ ರೂಪಾಣಿ ತಾನಿ ಬ್ರಹ್ಮಾ ತು ಶುಂಧತಿ॥). ಈ ಮಂತ್ರದ ಮೊದಲ ಮೂರು ಪದಗಳನ್ನು (ಆಶಸನ, ವಿಶಸನ, ಅಧಿವಿಕರ್ತನ) ಕೆಲವು ವಿದ್ವಾಂಸರು ತೀರಾ ಬೇರೆ ರೀತಿಯಲ್ಲಿ ಅರ್ಥೈಸಿದ್ದಾರೆ. ಅವರ ಪ್ರಕಾರ ಈ ಪದಗಳು ವಿವಾಹದ ಸಂದರ್ಭದಲ್ಲಿ ಔತಣಕ್ಕೆಂದು ಕೊಲ್ಲಲ್ಪಟ್ಟಿರುವ ಪ್ರಾಣಿಯ ತೊಗಲಿನ ಮೂರು ಭಾಗಗಳು. ಇದು ಅಸಂಗತವಾದ ಅರ್ಥ, ಏಕೆಂದರೆ ಹಿಂದೆ ಮತ್ತು ಮುಂದೆ ಔತಣದ ಮಾತೇ ಬಂದಿಲ್ಲ.

ಇಲ್ಲಿಂದ ಮುಂದಿನ ಭಾಗದ ಮಂತ್ರಗಳು ಮದುವೆಯಲ್ಲಿ ಪಾಣಿಗ್ರಹಣದ ಸಂದರ್ಭದಲ್ಲಿ ಹೇಳುವಂಥವು. ವಧುವನ್ನುದ್ದೇಶಿಸಿ ಪತಿಯಾಗಲಿರುವವನು ಹೇಳುತ್ತಾನೆ: "ವಧುವೇ, ನಿನ್ನ ಪತಿಯಾಗುವ ನನ್ನೊಡನೆ ವೃದ್ಧಾಪ್ಯದವರೆಗೆ ಇರುತ್ತಾ, ಸೌಭಾಗ್ಯವನ್ನು ಪಡೆಯುವಂತಾಗಲೆಂದು ನಾನು ನಿನ್ನ ಕೈ ಹಿಡಿಯುತ್ತೇನೆ. ದೇವತೆಗಳಾದ ಅರ್ಯಮನ್, ಭಗ, ಸವಿತೃ ಮತ್ತು ಪುರಂಧಿ (ಪೂಷನ್) ನಾನು ಗೃಹಪತಿಯಾಗಲೆಂದು ನಿನ್ನನ್ನು ನನಗೆ ಕೊಟ್ಟಿದ್ದಾರೆ" (೩೬: ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ ಮಯಾ ಪತ್ಯಾ ಜರದಷ್ಟಿಃ ಯಥಾಸಃ। ಭಗೋ ಅರ್ಯಮಾ ಸವಿತಾ ಪುರಂಧಿಃ ಮಹ್ಯಂ ತ್ವಾ ಅದುಃ ಗಾರ್ಹಪತ್ಯಾಯ ದೇವಾಃ॥). – ಹೀಗೆ ಕೈ ಹಿಡಿಯುವಾಗ ವಧುವಿನ ಹೆಬ್ಬೆರಳನ್ನು ಹಿಡಿಯಬೇಕೆಂದು ಆಶ್ವಲಾಯನನು ತನ್ನ ಗೃಹ್ಯಸೂತ್ರದಲ್ಲಿ ಸೂಚಿಸಿದ್ದಾನೆ.

ಮುಂದಿನ ಮಂತ್ರದಲ್ಲಿ (೩೭: ತಾಂ ಪೂಷನ್ ಶಿವತಮಾಂ ಆ ಈರಯಸ್ವ

ಅಂದರೆ, ಸಂಭೋಗಕ್ರಿಯೆಯ ಪ್ರಸ್ತಾಪವನ್ನಿಲ್ಲಿ ಮಾಡಲಾಗಿದೆ. ಸಂತತಿಯ ಛೇದನ ಮಾಡಕೂಡದೆಂದು ಆಚಾರ್ಯನು ಶಿಷ್ಯನಿಗೆ ಉಪದೇಶಿಸಿರುವುದನ್ನು ನಾವು ನಂತರದ ಕಾಲದ ತೈತ್ತಿರೀಯ ಉಪನಿಷತ್ತಿನಲ್ಲಿ ಕಾಣುತ್ತೇವೆ (ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ). ಅದೇ ಇಂಗಿತವು ಇಲ್ಲಿಯೂ ಇದೆಯೆನ್ನಬಹುದು. ವಿವಾಹ ಸಂಸ್ಥೆಯ ಉದ್ದೇಶಗಳಲ್ಲಿ ಅದು ಪ್ರಮುಖವಾದುದು. ಇದನ್ನು ಮುಂದಿನ ಮಂತ್ರದಲ್ಲಿ ವ್ಯಂಜಿಸಲಾಗಿದೆ. ಗಂಧರ್ವರು ಸೂರ್ಯಾಳನ್ನು ತನ್ನ ಪರಿಕರ–ಪರಿವಾರ ಸಮೇತ ಮೊದಲಿಗೆ ಅಗ್ನಿಗಾಗಿ ಅವಳ ಮನೆಗೆ, ಅಂದರೆ ಪತಿಗೃಹಕ್ಕೆ ಕಳಿಸಿದರು. ಅದು ಕಾಮಾಗ್ನಿಯೋ ಪ್ರೇಮಾಗ್ನಿಯೋ ಆಗಿರುತ್ತದೆ. ಹೀಗೆ ತಾನು ಪಡೆದ ವಧುವನ್ನು ಅಗ್ನಿಯು ಈಗ ವಂಶದ ಕುಡಿಯೊಂದಿಗೆ ಅವಳ ಪತಿಗೆ ಹಿಂದಿರುಗಿಸುತ್ತಾನೆ (೩೮: ತುಭ್ಯಂ ಅಗ್ರೇ ಪರ್ಯವಹನ್ ಸೂರ್ಯಾಂ ವಹತುನಾ ಸಹ। ಪುನಃ ಪತಿಭ್ಯೋ ಜಾಯಾಂ ದಾಃ ಅಗ್ನೇ ಪ್ರಜಯಾ ಸಹ॥). ಸೂಕ್ತದ ಆರಂಭದಲ್ಲಿ ತಿಳಿಸಿರುವಂತೆ ಸೂರ್ಯಾಳನ್ನು ಸೋಮನಿಗೆ ಪತ್ನಿಯನ್ನಾಗಿ ಕೊಡಲಾಗಿತ್ತು. ಆ ದೃಷ್ಟಿಯಿಂದ ಎಲ್ಲ ಸ್ತ್ರೀಯರಿಗೂ ಸೋಮನೇ ಮೊದಲ ಪತಿ. ಅವನು ಅವಳನ್ನು ಗಂಧರ್ವನಿಗೆ ನೀಡುತ್ತಾನೆ, ಅವಳ ಕನ್ಯಾತ್ವವನ್ನು ರಕ್ಷಿಸಲು. ಹೀಗಾಗಿ ಗಂಧರ್ವನು ಸ್ತ್ರೀಯ ಎರಡನೆಯ ಪತಿ. ವಿವಾಹದ ಸಂದರ್ಭದಲ್ಲಿ ಆಕೆ ಪತಿಯಾಗುವವನ ಜೊತೆ ಅಗ್ನಿಯ ಪ್ರದಕ್ಷಿಣೆ ಮಾಡುತ್ತಾಳೆ. ಕನ್ಯಾತ್ವದಿಂದ ಕಾಮಾಗ್ನಿಯತ್ತ ಬೆಳವಣಿಗೆಯ ಸೂಚನೆಯೂ ಇದಾಗಬಹುದು. ಈ ನಿಟ್ಟಿನಲ್ಲಿ ಅಗ್ನಿಯು ಸ್ತ್ರೀಯ ಮೂರನೆಯ ಪತಿ. ಅಗ್ನಿಯು ಅವಳನ್ನು ಪುರುಷನಿಗೆ ಪತ್ನಿಯನ್ನಾಗಿ ನೀಡುತ್ತಾನೆ. ಹಾಗೆ ನೀಡುವಾಗ ಅವಳಿಗೆ ಆಯುಷ್ಯ ಮತ್ತು ವರ್ಚಸ್ಸನ್ನು ತುಂಬಿಸಿಕೊಟ್ಟಿದ್ದಾನೆ. ಜೊತೆಗೆ, ಸಂತಾನವನ್ನೂ ಸಾಧ್ಯವಾಗಿಸಿದ್ದಾನೆ (೩೯: ಪುನಃ ಪತ್ನೀಂ ಅಗ್ನಿಃ ಅದಾತ್ ಆಯುಷಾ ಸಹ ವರ್ಚಸಾ। ದೀರ್ಘಾಯುರಸ್ಯಾಃ ಯಃ ಪತಿರ್ಜೀವತಿ ಶರದಃ ಶತಂ॥). ಅಂತಹವಳ ಪತಿಯು ನೂರ್ಕಾಲ ಬಾಳುತ್ತಾನೆ. ಅವಳ ನಾಲ್ಕು ಪತಿಗಳ ಬಗೆಗಿನ ಸಂಬಂಧವನ್ನು ಮುಂದಿನ ಮಂತ್ರದಲ್ಲಿ ಹೇಳಲಾಗಿದೆ (೪೦: ಸೋಮಃ ಪ್ರಥಮಃ ವಿವಿದೇ ಗಂಧರ್ವೋ ವಿವಿದ ಉತ್ತರಃ। ತೃತೀಯೋ ಅಗ್ನಿಃ ತೇ ಪತಿಃ ತುರೀಯಃ ತೇ ಮನುಷ್ಯಜಾಃ॥). ಪತಿಯು ಈ ಕ್ರಮವನ್ನು ಅಂಗೀಕರಿಸಿ ತನಗೆ ಪತ್ನಿಯು ಲಭ್ಯವಾದುದಕ್ಕೆ ಹರ್ಷಿಸುತ್ತಾನೆ (೪೧: ಸೋಮೋ ದದತ್ ಗಂಧರ್ವಾಯ ಗಂಧರ್ವೋ ದದತ್ ಅಗ್ನಯೇ। ರಯಿಂ ಚ ಪುತ್ರಾನ್ ಚ ಅದಾತ್ ಅಗ್ನಿಃ ಮಹ್ಯಂ ಅಥೋ ಇಮಾಂ॥). ಸಂಪತ್ತು ಮತ್ತು ಸಂತಾನಗಳೆರಡನ್ನೂ ನೀಡುವ ಅಗ್ನಿಯು ಸಹಜವಾಗಿಯೇ ಆರಾಧ್ಯನಾಗುತ್ತಾನೆ.

ಸೂಕ್ತದಲ್ಲಿ ಇನ್ನುಳಿದ ಆರು ಮಂತ್ರಗಳು ಶುಭವನ್ನು ಕೋರಿಕೊಳ್ಳುವಂಥವು, ಆಕಾಂಕ್ಷೆಗಳನ್ನು ಬಿಂಬಿಸುವಂಥವು ಮತ್ತು ಆಶೀರ್ವಚನವನ್ನು ಬೇಡುವಂಥವು. ಇಂದಿಗೂ ವಿವಾಹ ಸಂದರ್ಭದಲ್ಲಿ ಅವನ್ನು ತಪ್ಪದೆ ಬಳಸಲಾಗುತ್ತದೆ. ಈ



ಮಂತ್ರಗಳನ್ನು ಹೇಳುವ ವೇಳೆಗೆ ಪತ್ನೀಸಮೇತನಾಗಿ ಗೃಹಪತಿಯು ಸ್ವಗೃಹವನ್ನು ಸೇರಿಕೊಂಡಿದ್ದಾನೆ, ಗೃಹಸ್ಥನ ಆಚರಣೆಗಳಲ್ಲಿ ತೊಡಗಿದ್ದಾನೆ. ಪತಿ-ಪತ್ನಿಯರನ್ನುದ್ದೇಶಿಸಿ ಹೇಳುವ ಮಂತ್ರಗಳು ಮೊದಲ ಐದು; ಕಡೆಯದು ಪತಿ-ಪತ್ನಿಯರು ಜೊತೆಯಾಗಿ ಆಶಯಗಳನ್ನು ಪ್ರಕಟಿಸುವಂಥದು. ಮೊದಲು ಆಶೀರ್ವಚನ, ನಂತರ ಪತಿ-ಪತ್ನಿಯರ ಆಕಾಂಕ್ಷೆಗಳ ಅಭಿವ್ಯಕ್ತಿ: "ನೀವು ಇಲ್ಲೇ, ಪ್ರತ್ಯೇಕಗೊಳ್ಳದೆ, ಬಾಳಿ; ನಿಮ್ಮ ಜೀವಿತಾವಧಿಯು ದೀರ್ಘವಾಗಿರಲಿ. ಮಕ್ಕಳು ಮತ್ತು ಮೊಮ್ಮಕ್ಕಳ ಜೊತೆ ಆಟ-ಪಾಟಗಳಲ್ಲಿ ಭಾಗಿಗಳಾಗುತ್ತಾ ಸ್ವಗೃಹದಲ್ಲಿ ಆನಂದದಿಂದಿರಿ" (೪೨: ಇಹೈವ ಸ್ತಂ ಮಾ ವಿ ಯೌಷ್ಟಂ ವಿಶ್ವಂ ಆಯುಃ ವಿ ಅಶ್ನುತಂ। ಕ್ರೀಳಂತೌ ಪುತ್ರೈಃ ನಪ್ತೃಭಿಃ ಮೋದಮಾನೌ ಸ್ವೇ ಗೃಹೇ॥). ನಂತರ ಆಕಾಂಕ್ಷೆಗಳನ್ನು ಪತಿ-ಪತ್ನಿಯರು ಒಟ್ಟಾಗಿ ಪ್ರಕಟಿಸುತ್ತಾರೆ: "ಪ್ರಜಾಪತಿಯು ನಮಗೆ ಸಂತತಿಯನ್ನು ಕರುಣಿಸಲಿ; ವೃದ್ಧಾಪ್ಯಕ್ಕೆ ಕಾಲಿರಿಸುವವರೆಗೂ ಅರ್ಯಮನ್ ನಮ್ಮನ್ನು ಒಟ್ಟಾಗಿ ಇರಿಸಲಿ. ಪತಿಗೃಹವನ್ನು ಪ್ರವೇಶಿಸುತ್ತಿರುವ ಪತ್ನಿಯು ಅಮಂಗಲವನ್ನು ತಾರದಿರಲಿ. ನಮ್ಮ ಕುಟುಂಬದವರು ಮತ್ತು ನಮ್ಮ ಗೋವು, ಇತ್ಯಾದಿ ಚತುಷ್ಪಾದಿ ಸಂಪತ್ತು ಕ್ಷೇಮದಿಂದಿರಲಿ" (೪೩: ಆ ನಃ ಪ್ರಜಾಂ ಜನಯತು ಪ್ರಜಾಪತಿಃ ಆಽಜರಸಾಯ ಸಂ ಅನಕ್ತು ಅರ್ಯಮಾ। ಅದುಃಽಮಂಗಲೀಃ ಪತಿಲೋಕಂ ಆ ವಿಶ ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ॥). ಪತಿಯ ಭಾವದಲ್ಲಿರುವ ವಿಶೇಷವನ್ನು ಗಮನಿಸಿ: ತಾನು ಹೇಗಿದ್ದರೂ ಆದೀತು, ತಾನೆಂದೂ ಅಮಂಗಲವನ್ನು ಉಂಟು ಮಾಡುವವನಲ್ಲ! ಆದರೆ ಮನೆಗೆ ಕಾಲಿಡುತ್ತಿರುವ ಪತ್ನಿಯು ಅಮಂಗಲವನ್ನು ತರಬಾರದು, ಅಷ್ಟೆ. ಅದಕ್ಕಾಗಿ ಮುಂದಿನ ಮಂತ್ರದಲ್ಲಿ ವಧುವಿಗೆ ಹೇಳಲಾಗುತ್ತಿದೆ: "ಕೆಟ್ಟದೃಷ್ಟಿ ಬೀರುವವಳಾಗಿರಬೇಡ, ನಿನ್ನ ಪತಿಯ ಸಾವಿಗೆ ಕಾರಣಳಾಗಬೇಡ; ಒಳ್ಳೆಯ ಮನಸ್ಸಿನಿಂದ ಮತ್ತು ವರ್ಚಸ್ಸಿನಿಂದ ನಮ್ಮ ಗೋವುಗಳಿಗೆ ಶುಭವನ್ನು ತಾ. ದೇವತೆಗಳಿಗೆ ಪ್ರಿಯಳಾಗಿದ್ದು, ಕುಟುಂಬಕ್ಕೆ ಸುಖಕರಳಾಗುವಂತಿರು; ನಮ್ಮ ಕುಟುಂಬ ಮತ್ತು ಗೋವುಗಳಿಗೆ ಶುಭವನ್ನುಂಟುಮಾಡು" (೪೪: ಅಘೋರಚಕ್ಷುಃ ಅಪತಿಘ್ನೀ ಏಧಿ ಶಿವಾ ಪಶುಭ್ಯಃ ಸುಮನಾಃ ಸುವರ್ಚಾಃ। ವೀರಸೂಃ ದೇವಕಾಮಾ ಸ್ಯೋನಾ ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ॥).

ಸೂರ್ಯಾಸೂಕ್ತವು ಋಗ್ವೇದದ ಕಡೆಯ ಕಾಲಕ್ಕೆ ಸೇರಿದ್ದು. ಆಗ್ಗೆ ಬುಡಕಟ್ಟು ಜೀವನವು ಒಂದರ್ಥದಲ್ಲಿ ಕೇವಲ ಸ್ಮೃತಿಯಲ್ಲಷ್ಟೇ ಉಳಿದಿದೆ. ಪುರುಷ ಮತ್ತು ಸ್ತ್ರೀ ಸಮಾನಸ್ಕಂಧರಾಗಿರುವುದಕ್ಕೆ ಭಿನ್ನವಾಗಿ ಪುರುಷನು ಆದ್ಯನಾಗಿಬಿಟ್ಟಿದ್ದಾನೆ. ಅವನ ದೃಷ್ಟಿ ಹೇಗಿದ್ದರೂ ಪರವಾಗಿಲ್ಲ, ಅವಳ ದೃಷ್ಟಿ ಮಾತ್ರ ಕೆಟ್ಟದ್ದಾಗಿರಬಾರದು. ಕುಟುಂಬಕ್ಕೆ ಅನಿರೀಕ್ಷಿತ ಆಘಾತವೇನಾದರೂ ಉಂಟಾದರೆ ಅದಕ್ಕೆ ಅವಳ ಕೆಟ್ಟದೃಷ್ಟಿಯೇ ಕಾರಣವೆನ್ನುವ ಮೌಢ್ಯವು ಆಗಲೇ ಆವರಿಸಿಬಿಟ್ಟಿದೆ; ದೋಷವೇನಿದ್ದರೂ ಅದಕ್ಕೆ ಅವಳೇ ಕಾರಣಳು! ಇಂದಿಗೂ ಅನಿಷ್ಟ ಹೊರೆಯಾಗಿರುವ "ಹೆಣ್ಣಿನ ಕಾಲುಗುಣ" ಎಂಬುದು ಋಗ್ವೇದದಷ್ಟು ಹಳೆಯ "ಶಕುನ"ವೆಂಬುದು ಇದರಿಂದ ವೇದ್ಯವಾಗುತ್ತದೆ. ಇದರ ಒಂದು ಪರಿಣಾಮವೆಂದರೆ ಎಲ್ಲ ಅನಿಷ್ಟಗಳಿಗೂ ಹೆಣ್ಣನ್ನು ದೂಷಿಸುವುದು, ಆಮೇಲೆ ಕಿರುಕುಳ ಕೊಡುವುದು, ಎಂದು ತೋರುತ್ತದೆ. ಇನ್ನೂ ಒಂದಂಶವನ್ನು ಗಮನಿಸಬೇಕು: ಪತಿಗೃಹದಲ್ಲಿ ಅವಳು "ವೀರಸೂಃ" ಆಗಬೇಕು; ಅಂದರೆ, ಗಂಡು ಮಕ್ಕಳನ್ನು ಹಡೆದುಕೊಡಬೇಕು. ಹಾಗೆ ಮಾಡದಿದ್ದರೆ ಅವಳು ಪತಿತಳು! "ವೀರಸೂಃ" ಎಂದರೆ "ಗಂಡು ಮಕ್ಕಳನ್ನು ಮಾತ್ರವೇ ಹೆರುವವಳು" ಎಂದು ಸಾಯಣ ಸಹ ವ್ಯಾಖ್ಯಾನಿಸಿದ್ದಾನೆ. ಮುಂದಿನ ಮಂತ್ರವು ಮತ್ತೆ ಇದಕ್ಕೆ ಒತ್ತು ಕೊಡುತ್ತದೆ: "ಆಶಯಗಳನ್ನು ಪೂರೈಸುವ (ಮೀಢ್ವಃ) ಇಂದ್ರನೆ, ಈಕೆಗೆ ಸುಪುತ್ರರನ್ನು ಕೊಡು, ಈಕೆಯನ್ನು ಅದೃಷ್ಟವಂತಳನ್ನಾಗಿಸು. ಅವಳಿಗೆ ಹತ್ತು ಗಂಡುಮಕ್ಕಳಾಗಲಿ ಮತ್ತು ಅವಳ ಪತಿಯು ಹನ್ನೊಂದನೆಯ ಮಗನಂತಿರಲಿ" (೪೫: ಇಮಾಂ ತ್ವಮಿಂದ್ರ ಮೀಢ್ವಃ ಸುಪುತ್ರಾಂ ಸುಭಗಾಂ ಕೃಣು। ದಶ ಅಸ್ಯಾಂ ಪುತ್ರಾನ್ ಆ ಧೇಹಿ ಪತಿಂ ಏಕಾದಶಂ ಕುರು॥). ಸ್ವಾರಸ್ಯವೆಂದರೆ ಈಗಲೂ ಈ ಮಂತ್ರವನ್ನು ಹಾಗೆಯೇ ಹೇಳಿ ವಧುವನ್ನು ಆಶೀರ್ವದಿಸುತ್ತಾರೆ. ಹತ್ತು ಮಕ್ಕಳನ್ನು ಹೆರುವ ಆಶಯವನ್ನು ಪೂರೈಸಲು ಇಂದಿನ ವಧುವು ಕಾತುರಳಾಗಿರುವುದಿಲ್ಲವೆಂಬುದು ಸಮಾಧಾನದ ವಿಷಯ. ಮನೆಯಾಕೆಯ ಜವಾಬ್ದಾರಿ ಮತ್ತು ವಾತ್ಸಲ್ಯ ಎಷ್ಟು ಉಚ್ಚಮಟ್ಟದ್ದು ಎಂಬುದರ ಗ್ರಹಿಕೆ ಇಲ್ಲಿ ಸಾಧ್ಯವಾಗುತ್ತದೆ. ಆದರೆ, ಸಂತತಿಯ ವೃದ್ಧಿಯನ್ನು ಅಷ್ಟೊಂದು ತೀವ್ರವಾಗಿ ಆಶಿಸಿದವರು, 'ಪ್ರಜಾತಂತು'ವಿನ ವಿಚ್ಛೇದನೆ ಕೂಡದೆಂದವರು, ಮಗಳಿಗಾಗಿಯೂ ಆಶಿಸದಿದ್ದುದು ಒಂದು ಸೋಜಿಗ ಎನಿಸುತ್ತದೆ. ಜೊತೆಗೆ, ಒಂದೊಂದು ಮಗು ಹುಟ್ಟಿದಾಗಲೂ ಗಂಡನನ್ನು ಒಬ್ಬ ಮಗನಂತೆ ನೋಡಿಕೊಳ್ಳುವ ಪತ್ನಿಗೆ ಕಡೆಗೆ ಅವನು ಹನ್ನೊಂದನೆಯ ಮಗ!

ಶಕುಂತಲೆಯನ್ನು ಪತಿಗೃಹಕ್ಕೆ ಕಳಿಸಿಕೊಡುವಾಗ ಕಾಳಿದಾಸನ 'ಶಾಕುಂತಲ' ನಾಟಕದಲ್ಲಿ ಹಿರಿಯರ ಸೇವೆ ಮಾಡು, ಎಲ್ಲರಿಗೂ ಪ್ರಿಯಳಾಗಿರು, ನಿನ್ನ ಕುಲಕ್ಕೆ ಕೆಟ್ಟ ಹೆಸರು ತರಬೇಡ, ಎಂದೆಲ್ಲಾ ಕಣ್ವರು ಕಿವಿಮಾತು ಹೇಳುತ್ತಾರೆ. ಋಗ್ವೇದದ ಕವಿಯು ವಧುವಿಗೆ ಹೇಳುವುದೇ ಬೇರೆ: "ನಿನ್ನ ಅತ್ತೆ-ಮಾವಂದಿರಿಗೆ ಸಾಮ್ರಾಜ್ಞಿಯಾಗು; ನಿನ್ನ ನಾದಿನಿ ಮತ್ತು ಮೈದುನರಿಗೆ ಸಾಮ್ರಾಜ್ಞಿಯಾಗು" (೪೬: ಸಮ್ರಾಜ್ಞೀ ಶ್ವಶುರೇ ಭವ ಸಮ್ರಾಜ್ಞೀ ಶ್ವಶ್ವಾಂ ಭವ। ನನಾಂದರಿ ಸಮ್ರಾಜ್ಞೀ ಭವ ಸಮ್ರಾಜ್ಞೀ ಅಧಿ ದೇವೃಷು॥). ಅಷ್ಟೊಂದು ಜವಾಬ್ದಾರಿಗಳನ್ನು ಹೊಂದಿರುವವಳಿಗೆ ಇಷ್ಟು ಅಧಿಕಾರಸ್ಥಾನ ದೊರಕಲೆಂಬ ಆಶಯವು ತಂಗಾಳಿ ಬೀಸಿದಂತಿದೆ. ಸೂಕ್ತದ ಕಡೆಯ ಮಂತ್ರವು ಎಲ್ಲ ದೇವತೆಗಳೂ ನಮ್ಮ ಮನಸ್ಸಿನಲ್ಲಿ ಸ್ಥಿರವಾಗಿ ನೆಲೆಸಲೆಂಬ ಇಚ್ಛೆಯನ್ನು ದಾಖಲಿಸಿದೆ: "ವಿಶ್ವೇದೇವತೆಗಳು, ನೀರಿನ ದೇವತೆ, ಮಾತರಿಶ್ವನ್, ಧಾತೃ ಮತ್ತು ದೇಷ್ಟ್ರೀ, ಹೀಗೆ ಎಲ್ಲರೂ ನಮ್ಮ ಮನಸ್ಸಿನಲ್ಲಿ ನೆಲೆಸಲಿ ಮತ್ತು ನಮ್ಮನ್ನು ಒಟ್ಟಿಗಿಟ್ಟಿರಲಿ" (೪೭: ಸಮಂಜಂತು ವಿಶ್ವೇ ದೇವಾಃ ಸಂ ಆಪಃ ಹೃದಯಾನಿ ನೌ। ಸಂ ಮಾತರಿಶ್ವಾ ಸಂ ಧಾತಾ ಸಮು ದೇಷ್ಟ್ರೀ ದಧಾತು ನೌ॥). "ದೇಷ್ಟ್ರೀ" ಎಂಬ ದೇವತೆಯ ಹೆಸರು ಇಲ್ಲೊಂದು ಕಡೆ ಬಿಟ್ಟು ಋಗ್ವೇದದಲ್ಲಿ ಬೇರೆಲ್ಲೂ ಬಂದಿಲ್ಲ. ಅದು ಸರಸ್ವತಿಯ ಅಭಿಧಾನವೆಂದು ಸಾಯಣನು ಹೇಳಿದ್ದಾನೆ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ
೩ನೇ ಹಂತ ಬೆಂಗಳೂರು - ೫೬೦ ೦೮೫

## ಅಭಿನಂದನೆ

ಕರ್ನಾಟಕ ಸಂಘ, ಶಿವಮೊಗ್ಗ,
ಇವರು ಹಸೂಡಿ ವೆಂಕಟಶಾಸ್ತ್ರಿ
ಹೆಸರಿನಲ್ಲಿ ನೀಡುವ ೨೦೧೩ನೇ
ಸಾಲಿನ ಪ್ರಶಸ್ತಿಯನ್ನು
ಡಾ॥ ಬಿ. ಎಸ್. ಶೈಲಜಾ ಅವರ
'ಬಾಲಂಕೃತ ಚುಕ್ಕಿ - ಧೂಮಕೇತು'
(ನವಕರ್ನಾಟಕ ಪ್ರಕಾಶನ)
ಕೃತಿಗೆ ನೀಡಿದ್ದಾರೆ.
ಪ್ರಶಸ್ತಿಯು ₹ ೫,೦೦೦/- ನಗದು
ಹಾಗೂ ಪ್ರಶಸ್ತಿ ಪತ್ರಗಳನ್ನೊಳ
ಗೊಂಡಿದೆ. ಶೈಲಜಾ ಅವರಿಗೆ
ನವಕರ್ನಾಟಕ ಹಾಗೂ 'ಹೊಸತು'
ಬಳಗದ ಅಭಿನಂದನೆಗಳು

# ಕ್ಷ - ಕಿರಣ

- ಪ್ರಕಾಶ್ ಎಸ್.

## ಅನಂತ ಮೂತ್ರಿ ಪ್ರಸಂಗ










## ಮಂಡೂರು ಕಸದ ವಿವಾದ





ಸಿ. ಆರ್. ಕೃಷ್ಣರಾವ್

### ಸ್ವಾತಂತ್ರ್ಯಾನಂತರದ ಭಾರತ – ೭

# ಇಂದಿರಾ ಗಾಂಧಿ ಯುಗದ ಪ್ರಾರಂಭ

**ತಂ**ದೆ ಜವಹರಲಾಲ್ ನೆಹರೂರಂತೆಯೇ ದೀರ್ಘಕಾಲ (೧೬ ವರ್ಷಗಳು) ಆಡಳಿತ ನಡೆಸಿದ್ದು ಪ್ರಧಾನ ಮಂತ್ರಿ ಇಂದಿರಾ ಗಾಂಧಿ. ಅವರ ಆಡಳಿತದ ಕಾಲವನ್ನು ಒಂದು ಬಗೆಯ ಪ್ರಕ್ಷುಬ್ಧ ಕಾಲ ಎಂದು ಬಣ್ಣಿಸಬಹುದು. ಒಡೆದ ಮನೆಯಾದ ಕಾಂಗ್ರೆಸ್ ಪಕ್ಷ, ಪಾಕಿಸ್ತಾನದೊಂದಿಗೆ ಯುದ್ಧದಲ್ಲಿ ಜಯ, ಬಂಗ್ಲಾ ದೇಶದ ಉದಯ, ದೇಶದಲ್ಲಿ ಮೊದಲ ಬಾರಿಗೆ ತುರ್ತು ಪರಿಸ್ಥಿತಿ ಹೇರಿಕೆ, ಸರ್ವಾಧಿಕಾರ, ಸಿಖ್ಖರ ಸ್ವರ್ಣಮಂದಿರದ ಮೇಲೆ ದಾಳಿ, ಕೊನೆಗೆ ಸ್ವತಃ ಹತ್ಯೆಗೀಡಾದ್ದು – ಹೀಗೆ ಹಲವು ಬೆಳವಣಿಗೆಗಳಿಂದ ಕೂಡಿದ ಕಾಲವಾಗಿತ್ತು. ಅದು ಸ್ವತಂತ್ರ ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಯ ಪರೀಕ್ಷಾ ಕಾಲವೂ ಆಗಿತ್ತು. ಒಟ್ಟಿನಲ್ಲಿ ಅದು ಗುಣಾತ್ಮಕ ಹಾಗೂ ಋಣಾತ್ಮಕವಾದ ಬೆಳವಣಿಗೆಗಳಿಂದ ಕೂಡಿದ್ದಾಗಿತ್ತು.

ಲಾಲ್‌ಬಹದ್ದೂರ್ ಶಾಸ್ತ್ರಿ ಸಂಪುಟದಲ್ಲಿ ವಾರ್ತಾ ಸಚಿವೆಯಾಗಿದ್ದ ಇಂದಿರಾ ಗಾಂಧಿ ಅಂಥ ಹೆಸರು ಮಾಡಿದ ಸಚಿವೆ ಏನಾಗಿರಲಿಲ್ಲ. ಆಡಳಿತ ವೈಖರಿಯ ಪರಿಚಯವೂ ಕೂಡ ಅವರಿಗಿರಲಿಲ್ಲ. ಪ್ರಧಾನಿಯಾಗಿ ಆಕೆಯ ಆಯ್ಕೆ ಸರಳವಾಗೇನಿರಲಿಲ್ಲ. ಸಂಪುಟದಲ್ಲಿ ಹಿರಿಯರಾಗಿದ್ದ ಮೊರಾರ್ಜಿ ದೇಸಾಯಿ ಪ್ರಬಲ ಆಕಾಂಕ್ಷಿ. ಶಾಸ್ತ್ರಿಯವರನ್ನು ಅಧಿಕಾರಕ್ಕೇರಿಸುವಾಗಲೆ ಕಾಂಗ್ರೆಸ್ಸಿನಲ್ಲಿ ಪ್ರಭಾವಶಾಲಿಯಾಗಿದ್ದ ಸಿಂಡಿಕೇಟ್ ಈಗಲೂ ಪ್ರಮುಖ ಪಾತ್ರ ವಹಿಸಿತು. ಮೊರಾರ್ಜಿ ದೇಸಾಯಿಗೆ ಅಧಿಕಾರ ನೀಡಲು ಈ ಸಿಂಡಿಕೇಟ್ ತಯಾರಾಗಿರಲಿಲ್ಲ. ಚುನಾವಣೆಗಳನ್ನು ದೃಷ್ಟಿಯಲ್ಲಿ ಇರಿಸಿಕೊಂಡಿದ್ದ ಅವರಿಗೆ ಇಂದಿರಾ ಗಾಂಧಿ ಸರಿಯಾದ ಅಭ್ಯರ್ಥಿ ಎನಿಸಿತ್ತು. ಮೃದುಸ್ವಭಾವದ ಆಕೆ ತಮ್ಮ ಅಧೀನದಲ್ಲಿರಬಹುದೆಂದು ಅವರ ಅನಿಸಿಕೆಯಾಗಿತ್ತು. ಹಾಗಾಗಿ ಆಯ್ಕೆಗೆ ಅಭಿಪ್ರಾಯ ಸಂಗ್ರಹಣೆ, ಒಮ್ಮತ ಇವಾವ ಸೂತ್ರವೂ ಫಲಿಸಲಿಲ್ಲ. ಮೊರಾರ್ಜಿ ದೇಸಾಯಿ ಸ್ಪರ್ಧಿಸಲು ಪಟ್ಟು ಹಿಡಿದದ್ದರಿಂದ ಚುನಾವಣೆಯೇ ನಡೆಯಿತು. ಬಹುಮತದಿಂದ ಇಂದಿರಾ ಗಾಂಧಿ ನಾಯಕಿಯಾಗಿ ಆಯ್ಕೆಗೊಂಡರು. ಕಾಂಗ್ರೆಸ್ಸಿನ ಬಹುತೇಕ ಮುಖ್ಯಮಂತ್ರಿಗಳೂ ಆಕೆಯ ಪರವಾಗಿದ್ದರು.

ಇಂದಿರಾ ಗಾಂಧಿ ಪ್ರಧಾನಿಯಾಗಿ ಆಯ್ಕೆಗೊಂಡು ಅಧಿಕಾರ ವಹಿಸಿಕೊಂಡಾಗ ದೇಶ ಸಂಕೀರ್ಣವಾದ ಹಲವು ಸಮಸ್ಯೆಗಳನ್ನು ಎದುರಿಸುತ್ತಿತ್ತು. ಪಂಜಾಬಿನಲ್ಲಿ ಭಾಷಾ ಸಮಸ್ಯೆ ಉಲ್ಬಣಿಸಿತ್ತು, ನಾಗಾ ಮತ್ತು ಮಿಜೊರಂ ಪ್ರದೇಶದಲ್ಲಿ ಸ್ವಯಮಾಡಳಿತೆಗಾಗಿ ಆಂದೋಳನ ನಡೆಯುತ್ತಿತ್ತು. ಸ್ವಯಮಾಡಳಿತಕ್ಕೆ ಸಮ್ಮತಿಸಿ ಮಾತುಕತೆಯ ಮೂಲಕ ನಾಗಾ ಸಮಸ್ಯೆ ಬಗೆಹರಿಸಲಾಯಿತು. ಆದರೂ ಈ ಪ್ರದೇಶದಲ್ಲಿ ಸಂಪೂರ್ಣ ಶಾಂತಿ ನೆಲೆಯೂರಲಿಲ್ಲ. ಪಂಜಾಬ್ ವಿಭಜಿಸಿ ಹರ್ಯಾಣ ರಾಜ್ಯವನ್ನು ಸ್ಥಾಪಿಸಲಾಯಿತು. ದೇಶದಲ್ಲಿ ಆರ್ಥಿಕ ಪರಿಸ್ಥಿತಿ ಚಿಂತಾಜನಕವಾಗಿತ್ತು. ೧೯೬೫ ಹಾಗೂ ೧೯೬೬ ಎರಡು ವರ್ಷಗಳೂ ಮಳೆಯ ಕೊರತೆಯಿಂದಾಗಿ ದೇಶದ ಬಹುಭಾಗದಲ್ಲಿ ಅಭಾವ ಪರಿಸ್ಥಿತಿ ಉಂಟಾಗಿತ್ತು. ೧೯೬೨ ಮತ್ತು ೧೯೬೫ರ ಯುದ್ಧದ ಪರಿಣಾಮವಾಗಿ ಮಿಲಿಟರಿ ವೆಚ್ಚದಲ್ಲಿ ತೀವ್ರವಾದ ಏರಿಕೆಯಾಗಿ, ಬಜೆಟ್‌ನ ಕೊರತೆ ವಿಪರೀತವಾಗಿ ಏರಿತ್ತು. ಪಂಚವಾರ್ಷಿಕ ಯೋಜನೆ ಹಲವು ಪ್ರಾಜೆಕ್ಟ್‌ಗಳು ಇದರಿಂದಾಗಿ ಸ್ಥಗಿತಗೊಂಡಿದ್ದುವು. ಆಹಾರಧಾನ್ಯಗಳ ಕೊರತೆ ನೀಗಿಸಲು ಭಾರತ ಮತ್ತೆ ಪಿಎಲ್–೪೮೦ ಮೊರೆಹೋಗಬೇಕಾಯಿತು. ವಿದೇಶಿ ವಿನಿಮಯದ ಕೊರತೆ ತೀವ್ರವಾಗಿದ್ದುದರಿಂದ ಸರಕಾರ ವರ್ಲ್ಡ್ ಬ್ಯಾಂಕ್ ಮತ್ತು ಇಂಟರ್‌ನ್ಯಾಷನಲ್ ಮಾನಿಟರಿ

ಇಂದಿರಾ ಗಾಂಧಿ ಪ್ರಧಾನಿಯಾಗಿ ಆಯ್ಕೆಗೊಂಡು ಅಧಿಕಾರ ವಹಿಸಿಕೊಂಡಾಗ ದೇಶ ಸಂಕೀರ್ಣವಾದ ಹಲವು ಸಮಸ್ಯೆಗಳನ್ನು ಎದುರಿಸುತ್ತಿತ್ತು. ಪಂಜಾಬಿನಲ್ಲಿ ಭಾಷಾ ಸಮಸ್ಯೆ ಉಲ್ಬಣಿಸಿತ್ತು, ನಾಗಾ ಮತ್ತು ಮಿಜೊರಂ ಪ್ರದೇಶದಲ್ಲಿ ಸ್ವಯಮಾಡಳಿತೆಗಾಗಿ ಆಂದೋಳನ ನಡೆಯುತ್ತಿತ್ತು. ಸ್ವಯಮಾಡಳಿತಕ್ಕೆ ಸಮ್ಮತಿಸಿ ಮಾತುಕತೆಯ ಮೂಲಕ ನಾಗಾ ಸಮಸ್ಯೆ ಬಗೆಹರಿಸಲಾಯಿತು. ಆದರೂ ಈ ಪ್ರದೇಶದಲ್ಲಿ ಸಂಪೂರ್ಣ ಶಾಂತಿ ನೆಲೆಯೂರಲಿಲ್ಲ. ಪಂಜಾಬ್ ವಿಭಜಿಸಿ ಹರ್ಯಾಣ ರಾಜ್ಯವನ್ನು ಸ್ಥಾಪಿಸಲಾಯಿತು. ದೇಶದಲ್ಲಿ ಆರ್ಥಿಕ ಪರಿಸ್ಥಿತಿ ಚಿಂತಾಜನಕವಾಗಿತ್ತು. 1965 ಹಾಗೂ 1966 ಎರಡು ವರ್ಷಗಳೂ ಮಳೆಯ ಕೊರತೆಯಿಂದಾಗಿ ದೇಶದ ಬಹುಭಾಗದಲ್ಲಿ ಅಭಾವ ಪರಿಸ್ಥಿತಿ ಉಂಟಾಗಿತ್ತು. 1962 ಮತ್ತು 1965ರ ಯುದ್ಧದ ಪರಿಣಾಮವಾಗಿ ಮಿಲಿಟರಿ ವೆಚ್ಚದಲ್ಲಿ ತೀವ್ರವಾದ ಏರಿಕೆಯಾಗಿ, ಬಜೆಟ್‌ನ ಕೊರತೆ ವಿಪರೀತವಾಗಿ ಏರಿತ್ತು.



ಮೊರಾರ್ಜಿ ದೇಸಾಯಿ

ಫಂಡ್ (ಐಎಂಎಫ್) ಮೊರೆಹೊಕ್ಕಿತು. ಭಾರತ–ಪಾಕ್ ಯುದ್ಧ ಸಮಯದಲ್ಲಿ ಈ ಎರಡೂ ಸಂಸ್ಥೆಗಳು ಸಾಲ ನೀಡಿಕೆಯನ್ನು ನಿಲ್ಲಿಸಿದ್ದುವು. ಅಮೆರಿಕದ ನಿಯಂತ್ರಣದಲ್ಲಿರುವ ಇವು ಭಾರತ ಸರಕಾರದ ಮೇಲೆ ರೂಪಾಯಿ ಅಪಮೌಲ್ಯ ಮಾಡುವಂತೆ ಒತ್ತಡ ಹೇರಿದುವು. ಅಧಿಕಾರ ವಹಿಸಿಕೊಂಡ ನಾಲ್ಕು ತಿಂಗಳಲ್ಲೇ ಇಂದಿರಾ ಗಾಂಧಿ ಸರಕಾರ ಒತ್ತಡಕ್ಕೆ ಮಣಿದು ರೂಪಾಯಿಯನ್ನು ಮೂರನೇ ಒಂದು ಭಾಗಕ್ಕಿಂತಲೂ ಅಧಿಕವಾಗಿ ಅಪಮೌಲ್ಯಗೊಳಿಸಿತು. ಸರಕಾರದ ಈ ಕ್ರಮಕ್ಕೆ ಕಾಂಗ್ರೆಸ್ಸಿನ ವರಿಷ್ಠರ ವಿರೋಧವಿತ್ತು. ದೇಶಾದ್ಯಂತ ಸರಕಾರದ ಈ ತೀರ್ಮಾನಕ್ಕೆ ವಿರೋಧ ವ್ಯಕ್ತವಾಯಿತು. ಎಡಪಕ್ಷಗಳು, ಬುದ್ಧಿಜೀವಿಗಳು, ಆರ್ಥಿಕ ತಜ್ಞರು ಹಾಗೂ ವಿವಿಧ ಸ್ತರಗಳ ಜನರು ರೂಪಾಯಿ ಅಪಮೌಲ್ಯವನ್ನು ವಿರೋಧಿಸಿದರು. ರೂಪಾಯಿ ಅಪಮೌಲ್ಯದಿಂದ ಪ್ರಯೋಜನವೇನಾಗಲಿಲ್ಲ. ಅದರಿಂದ ರಫ್ತಿನ ಪ್ರಮಾಣ ಯಾವ ಬಗೆಯಲ್ಲೂ ಅಧಿಕಗೊಳ್ಳಲಿಲ್ಲ. ಆರ್ಥಿಕ ಪರಿಸ್ಥಿತಿ ಇನ್ನಷ್ಟು ಹದಗೆಟ್ಟು ಜನಸಾಮಾನ್ಯರ ದುಸ್ಥಿತಿ ಅಧಿಕಗೊಂಡಿತು. ಎಲ್ಲೆಲ್ಲೂ ಸರಕಾರದ ಆರ್ಥಿಕ ನೀತಿಗಳ ವಿರೋಧವಾಗಿ ಮುಷ್ಕರ, ಪ್ರತಿರೋಧ ಕಂಡುಬಂದವು.

ಅಧಿಕಾರ ವಹಿಸಿಕೊಂಡ ಕೆಲ ತಿಂಗಳಲ್ಲೇ ಪ್ರಧಾನಿ ಇಂದಿರಾ ಗಾಂಧಿ ಮೊದಲು ಭೇಟಿ ನೀಡಿದ್ದು ಅಮೆರಿಕಕ್ಕೆ. ಆಗ ಅಮೆರಿಕಾದ ಅಧ್ಯಕ್ಷರು ಜಾನ್ಸನ್. ಪಿಎಲ್–೪೮೦ರ ಅಡಿಯಲ್ಲಿ ೩.೫ ಮಿಲಿಯ ಟನ್ ಗೋಧಿ ಮತ್ತು ೯೦೦ ಮಿಲಿಯ ಡಾಲರು ನೆರವಿನ ಆಶ್ವಾಸನೆ ನೀಡಿದ ಅಧ್ಯಕ್ಷ ಜಾನ್ಸನ್ ಕೊಟ್ಟ ಮಾತನ್ನು ಉಳಿಸಿಕೊಳ್ಳಲಿಲ್ಲ. ಆಗ ಅಮೆರಿಕ ಉತ್ತರ ವಿಯೆಟ್ನಾಮ್‌ನ ಮೇಲೆ ಬಾಂಬು ದಾಳಿಯನ್ನು ನಡೆಸುತ್ತಿತ್ತು. ವಾಷಿಂಗ್ಟನ್ ಭೇಟಿಯ ಕಾಲದಲ್ಲಿ ಭಾರತದ ಪ್ರಧಾನಿ ಈ ಬಗ್ಗೆ ಮೌನ ತಳೆದಿದ್ದರು ಅಮೆರಿಕವನ್ನು ಓಲೈಸಲು. ನೆರವಿನ ಭರವಸೆಯ ಒತ್ತಡವೂ ಇತ್ತು. ಅಮೆರಿಕದ ಷರತ್ತುಗಳು, ಒತ್ತಡಗಳು ಹೆಚ್ಚುತ್ತಿದ್ದುದರಿಂದ ಅನಿವಾರ್ಯವಾಗಿ ಇಂದಿರಾ ಗಾಂಧಿ ಅಮೆರಿಕದಿಂದ ದೂರಸರಿಯಬೇಕಾಯಿತು. ಅಮೆರಿಕದಿಂದ ಹಿಂದಿರುಗಿದ ಕೆಲವೇ ತಿಂಗಳ ನಂತರ ವಿಯೆಟ್ನಾಮ್‌ನ ಮೇಲೆ ಅಮೆರಿಕದ ಬಾಂಬು ದಾಳಿಯನ್ನು ಖಂಡಿಸಿ ಹೇಳಿಕೆ ನೀಡಿದರು. ಅನಂತರ ಮಾಸ್ಕೋಗೆ ಭೇಟಿ ನೀಡಿದ ಇಂದಿರಾ ಗಾಂಧಿ ಹಲವು ದ್ವಿಪಕ್ಷೀಯ ಒಪ್ಪಂದಗಳಿಗೆ ಸಹಿ ಹಾಕಿದರು. ಈ ಭೇಟಿಯ ಸಂದರ್ಭದಲ್ಲಿ ನೀಡಲಾದ ಜಂಟಿ ಹೇಳಿಕೆಯಲ್ಲೂ ಅಮೆರಿಕ ವಿಯೆಟ್ನಾಮ್‌ನ ಮೇಲೆ ಬಾಂಬು ದಾಳಿಯನ್ನು ನಿಲ್ಲಿಸಬೇಕೆಂದು ಒತ್ತಾಯಿಸಲಾಗಿತ್ತು, ವಿಯೆಟ್ನಾಮ್ ಮೇಲೆ ಅಮೆರಿಕದ ದಾಳಿಯನ್ನು ದುರಾಕ್ರಮಣ ಎಂದೂ ಖಂಡಿಸಿತ್ತು. ಪಿಎಲ್–೪೮೦ ರೂಪಾಯಿ ಸಂಚಯನವನ್ನು ಅಮೆರಿಕ ಭಾರತದ ವಿದ್ಯಾಭ್ಯಾಸ ಕ್ಷೇತ್ರದಲ್ಲಿ ನುಸುಳಲು ಬಳಸುವುದಕ್ಕೆ ಸನ್ನಾಹ ಮಾಡಿತ್ತು. ಇದಕ್ಕೆ ಭಾರತದ ಪ್ರಧಾನಿಯ ಸಮ್ಮತಿಯೂ ಇತ್ತು. ವಿದ್ವತ್ ವಲಯ ಹಾಗೂ ಶಿಕ್ಷಣ ಕ್ಷೇತ್ರದಿಂದ ಪ್ರಬಲವಾದ ವಿರೋಧ ಬಂದದ್ದರಿಂದ ಪ್ರಧಾನಿ ಅದರಿಂದ ಹಿಂದೆ ಸರಿಯಬೇಕಾಯಿತು.

ಹಿಂದುತ್ವವಾದಿ ಶಕ್ತಿಗಳು ತಲೆ ಎತ್ತಿದ್ದು ಬೆಳೆದದ್ದು ಇಂದಿರಾ ಗಾಂಧಿ ಆಡಳಿತ ಕಾಲದಲ್ಲೇ. ಆರೆಸ್ಸೆಸ್ಸಿನ ರಾಜಕೀಯ ಅಂಗವಾಗಿದ್ದ ಭಾರತೀಯ ಜನಸಂಘ ೧೯೬೬ರಲ್ಲಿ ಗೋಹತ್ಯಾ ನಿಷೇಧ ಕಾನೂನಿಗೆ ಒತ್ತಾಯಿಸಿ ದೇಶಾದ್ಯಂತ ಜನಾಂದೋಳನ ಪ್ರಾರಂಭಿಸಿತು. ಈ ಸಂದರ್ಭದಲ್ಲಿ ದೆಹಲಿಯಲ್ಲಿ ಸಾಧುಗಳು ನಡೆಸಿದ ದಾಂಧಲೆ, ಪಾರ್ಲಿಮೆಂಟ್ ಮೇಲೆ ಹಲ್ಲೆ ನಡೆಸಲು ಮಾಡಿದ ಪ್ರಯತ್ನ, ಇವೆಲ್ಲ ಮತೀಯವಾದಿಗಳ ಹಿಂಸಾಚಾರವನ್ನು ಬಯಲಿಗೆಳೆಯಿತು. ಈ ಘಟನೆಯಿಂದ ಆಗ ಗೃಹಸಚಿವರಾಗಿದ್ದ ಗುಲ್ಜಾರಿಲಾಲ್ ನಂದಾ ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಬೇಕಾಗಿ ಬಂದಿತು. ದಕ್ಷಿಣ ಭಾರತದಲ್ಲಿ ರಾಷ್ಟ್ರೀಯ ಭಾಷೆಯಾಗಿ ಹಿಂದಿ ಹೇರಿಕೆ ವಿರುದ್ಧ ಆಂದೋಳನ ನಡೆದಿತ್ತು. ತಮಿಳುನಾಡಿನಲ್ಲಿ ದ್ರಾವಿಡ ಮುನ್ನೇತ್ರ ಕಳಗಂ ನೇತೃತ್ವದಲ್ಲಿ ನಡೆದ ಹಿಂದಿ ವಿರೋಧಿ ಚಳವಳಿ ಬಿರುಸಾಗಿತ್ತು. ಅದು ಈ ದ್ರಾವಿಡ ಪಕ್ಷಕ್ಕೆ ರಾಜಕೀಯ ಪ್ರಾಮುಖ್ಯತೆಯನ್ನು ನೀಡಿತು. ಕೇಂದ್ರ ಸರಕಾರ ಈ ಸಮಸ್ಯೆಯನ್ನು ಬಗೆಹರಿಸಲು ಹಿಂದಿಯ ಜೊತೆಗೆ ಇಂಗ್ಲಿಷನ್ನೂ ಅಧಿಕೃತ ಭಾಷೆಯಾಗಿ ಅಂಗೀಕರಿಸಿತು. ಒಟ್ಟಿನಲ್ಲಿ ದೇಶದಲ್ಲಿ ರಾಜಕೀಯ ಹಾಗೂ ಆರ್ಥಿಕ ಪರಿಸ್ಥಿತಿ ಉಲ್ಬಣಗೊಂಡಿತ್ತು. ಕಾಂಗ್ರೆಸ್ಸಿನ ರಾಜಕೀಯ ಪ್ರತಿಷ್ಠೆ ಇಳಿಮುಖವಾಗಿತ್ತು.

ಈ ಹಿನ್ನೆಲೆಯಲ್ಲಿ ೧೯೬೭ರಲ್ಲಿ ಪಾರ್ಲಿಮೆಂಟಿಗೆ, ರಾಜ್ಯ ವಿಧಾನಸಭೆಗಳಿಗೆ ಚುನಾವಣೆಗಳು ನಡೆದುವು. ಕಾಂಗ್ರೆಸ್ಸಿನಲ್ಲಿ ಭಿನ್ನಮತ ಜೋರಾಗಿತ್ತು, ರಾಜ್ಯಗಳಲ್ಲಿ ಒಳಜಗಳ ವಿಪರೀತವಾಗಿತ್ತು. ಪಕ್ಷದಲ್ಲಿ ಸಿಂಡಿಕೇಟ್‌ನ ಹಿಡಿತ ಪ್ರಬಲವಾಗಿತ್ತು. ಪಕ್ಷದ ಅಧ್ಯಕ್ಷ ಕಾಮರಾಜ ನಾಡಾರ್ ಮತ್ತು ಪ್ರಧಾನಿ ಇಂದಿರಾ ಗಾಂಧಿ ನೇತೃತ್ವದಲ್ಲಿ ಕಾಂಗ್ರೆಸ್ ಚುನಾವಣಾ ಕಣಕ್ಕೆ ಇಳಿಯಿತು. ಈ ಚುನಾವಣೆಗಳ ಶೇಕಡ ೬೧.೧೮ರಷ್ಟು ಮತದಾರರು ತಮ್ಮ ಹಕ್ಕು ಚಲಾಯಿಸಿದ್ದರು. ಹಿಂದಿನ ಚುನಾವಣೆಗಳಿಗೆ ಹೋಲಿಸಿದಲ್ಲಿ ಇದು ದಾಖಲೆಯ ಮತದಾನ. ಕಾಂಗ್ರೆಸ್ ಲೋಕಸಭೆಯಲ್ಲಿ ೫೨೦ ಒಟ್ಟು ಸ್ಥಾನಗಳಲ್ಲಿ ೨೮೩ ಸ್ಥಾನಗಳನ್ನು ಪಡೆದು ಬಹುಮತ ಸಾಧಿಸಿ ಅಧಿಕಾರಕ್ಕೆ ಬಂದರೂ ಹಿಂದಿನ ಚುನಾವಣೆಗಳಿಗೆ ಹೋಲಿಸಿದಲ್ಲಿ ಸಂಖ್ಯಾಬಲ ತೀವ್ರವಾಗಿ ಕುಸಿದಿತ್ತು. ರಾಜ್ಯ ವಿಧಾನಸಭೆಗಳಲ್ಲಿಯೂ ಕಾಂಗ್ರೆಸ್ ಎಂಟು ರಾಜ್ಯಗಳಲ್ಲಿ ಬಹುಮತ ಕಳೆದುಕೊಂಡಿತು. ಗಮನಾರ್ಹವಾದ ಸಂಗತಿ ಎಂದರೆ ಕಾಂಗ್ರೆಸ್ಸಿನ ವರ್ಚಸ್ಸಿನ ಕುಂದಿನಿಂದ ಹೆಚ್ಚು ಪ್ರಯೋಜನ ಪಡೆದುಕೊಂಡಿದ್ದು ಬಲಪಂಥೀಯ ಪಕ್ಷಗಳು. ಮತೀಯ ಹಾಗೂ ಪ್ರಾದೇಶಿಕ ಪಕ್ಷಗಳು. ಪಶ್ಚಿಮ ಬಂಗಾಳ ಮತ್ತು ಕೇರಳದಲ್ಲಿ ಮಾತ್ರ ಎಡಪಕ್ಷಗಳು ಪ್ರಗತಿ ಸಾಧಿಸಿದುವು. ಉತ್ತರಪ್ರದೇಶ, ಮಧ್ಯಪ್ರದೇಶ ಮತ್ತು ಹರ್‍ಯಾಣಗಳಲ್ಲಿ ಮತೀಯವಾದಿ ಜನಸಂಘ ಪ್ರತಿಪಕ್ಷವಾಗಿ ಹೊಮ್ಮಿತು. ಉತ್ತರ ಭಾರತದಲ್ಲಿ ಜನಸಂಘದ ಪ್ರಾಬಲ್ಯ ಅಧಿಕಗೊಂಡಿತ್ತು. ಕಾಂಗ್ರೆಸ್ ತಮಿಳುನಾಡು ಮತ್ತು ಒರಿಸ್ಸಾಗಳಲ್ಲಿ ಅಧಿಕಾರ ಕಳೆದುಕೊಂಡಿತು. ಒರಿಸ್ಸಾದಲ್ಲಿ ಸ್ವತಂತ್ರ ಪಕ್ಷ ಅಧಿಕಾರಕ್ಕೆ ಬಂದರೆ ತಮಿಳುನಾಡಿನಲ್ಲಿ ಡಿಎಂಕೆ ಆಳ್ವಿಕೆ ಪ್ರಾರಂಭವಾಯಿತು. ಎರಡೂ ರಾಜ್ಯಗಳಲ್ಲಿ ಕಾಂಗ್ರೆಸ್ಸಿಗೆ ಈ ಎರಡೂ ರಾಜ್ಯಗಳಲ್ಲಿ ಮತ್ತೆ ಅಧಿಕಾರಕ್ಕೇರಲು ಸಾಧ್ಯವಾಗಿಲ್ಲ ಇದುವರೆಗೆ. ಹಲವು ಕಡೆಗಳಲ್ಲಿ ಕಾಂಗ್ರೆಸ್ ಇತರ ಪಕ್ಷಗಳ ಬೆಂಬಲ ಪಡೆದು ಸರಕಾರ ರಚಿಸಬೇಕಾಯಿತು. ಭಾರತದಲ್ಲಿ ಸಮ್ಮಿಶ್ರ ಸರಕಾರದ ಯುಗದ ಪ್ರಾರಂಭ ಎಂದು ಹೇಳಬಹುದು. ಚುನಾವಣೆಗಳಲ್ಲಿ ಕಾಂಗ್ರೆಸ್ ಸಿಂಡಿಕೇಟಿನ ಹಲವು ಪ್ರಮುಖರು ಸೋಲನ್ನನುಭವಿಸಿ ಮಣ್ಣುಮುಕ್ಕಿದರು. ಮುಖ್ಯವಾಗಿ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಕಾಮರಾಜ್, ಪಶ್ಚಿಮ ಬಂಗಾಳದ ಅತುಲ್ಯ ಘೋಷ್ ಮತ್ತು ಮುಂಬಯಿಯ ಎಸ್. ಕೆ. ಪಾಟೀಲರ ಪರಾಜಯ ತೀವ್ರವಾದ ಮುಖಭಂಗವಾಗಿತ್ತು.

ಚುನಾವಣೆಗಳ ನಂತರ ಮತ್ತೆ ಪ್ರಧಾನಿಯಾಗಿ



ಎಸ್. ನಿಜಲಿಂಗಪ್ಪ

ಆಯ್ಕೆಗೊಂಡ ಇಂದಿರಾ ಗಾಂಧಿ ತಮ್ಮ ಸ್ಥಾನವನ್ನು ಭದ್ರಗೊಳಿಸಿಕೊಳ್ಳಲು ತೊಡಗಿದರು. ಕಾಂಗ್ರೆಸ್ ಪಾರ್ಲಿಮೆಂಟರಿ ಪಾರ್ಟಿಯ ಸಭೆಯಲ್ಲಿ ಅವಿರೋಧವಾಗಿ ಆಯ್ಕೆಗೊಂಡ ಅವರು, ಸಂಪುಟ ರಚನೆಯಲ್ಲೂ ಸ್ವತಂತ್ರ ನಿರ್ಧಾರಗಳನ್ನು ಕೈಗೊಂಡರು. ಮೊರಾರ್ಜಿ ದೇಸಾಯಿ ಪ್ರಧಾನಿ ಪಟ್ಟಕ್ಕೆ ಸ್ಪರ್ಧಿಸದೆ ಉಪ ಪ್ರಧಾನಿಯಾಗಿ ನೇಮಕಗೊಂಡರು. ಕಾಂಗ್ರೆಸ್ ಸಂಸ್ಥೆಯಲ್ಲಿ ಸಿಂಡಿಕೇಟಿನ ಪ್ರಾಬಲ್ಯ ಸಾಕಷ್ಟು ಕಡಿಮೆಯಾಗಿತ್ತು. ಪಕ್ಷದ ಅಧ್ಯಕ್ಷರಾಗಿದ್ದ ಕಾಮರಾಜ್ ಸ್ಥಾನಕ್ಕೆ ಕರ್ನಾಟಕದ ಕಾಂಗ್ರೆಸ್ ನಾಯಕ ಎಸ್. ನಿಜಲಿಂಗಪ್ಪ ಕಾಂಗ್ರೆಸ್ ಅಧ್ಯಕ್ಷರಾದರು. ಕಾಂಗ್ರೆಸ್ಸಿನಲ್ಲಿ ಮುಸುಕಿನ ಗುದ್ದಾಟ ಮುಂದುವರಿದಿತ್ತು. ಸಿಂಡಿಕೇಟ್ ಸದಸ್ಯರು ಇಂದಿರಾ ಗಾಂಧಿಯವರನ್ನು ಅಧಿಕಾರದಿಂದ ಪದಚ್ಯುತಗೊಳಿಸಲು ಸಂಚು ಹೂಡಿತ್ತು. ಎರಡು ವರ್ಷ ಜುಗ್ಗಾಟ ನಡೆದು ೧೯೬೯ರಲ್ಲಿ ಕಾಂಗ್ರೆಸ್ ಪಕ್ಷದ ಒಳಜಗಳ ಮುಗಿಲು ಮುಟ್ಟಿ ಪಕ್ಷದಲ್ಲಿ ಒಡಕುಂಟಾಯಿತು.

ರಾಷ್ಟ್ರಪತಿ ಡಾ॥ ಝಾಕಿರ್ ಹುಸೇನ ಮೇ ೧೯೬೯ರಲ್ಲಿ ನಿಧನರಾದರು. ಅವರ ಸ್ಥಾನಕ್ಕೆ ನಡೆದ ಪೈಪೋಟಿ ಕಾಂಗ್ರೆಸ್ ಪಕ್ಷವನ್ನು ಇಬ್ಭಾಗ ಮಾಡಿತು. ಸಂವಿಧಾನದಲ್ಲಿ ರಾಷ್ಟ್ರಪತಿಗೆ ಯಾವುದೇ ಅಧಿಕಾರ ಇಲ್ಲ. ಪಾರ್ಲಿಮೆಂಟಿನಲ್ಲಿ ಯಾವ ಪಕ್ಷವೂ ಬಹುಮತ ಪಡೆಯದೆ ಅತಂತ್ರ ಪರಿಸ್ಥಿತಿ ಉದ್ಭವಿಸಿದಾಗ ರಾಷ್ಟ್ರಪತಿಯವರ ಪಾತ್ರ ನಿರ್ಣಾಯಕವಾದ್ದಾಗಿರುತ್ತದೆ. ಇತರ ವಿಷಯಗಳಲ್ಲಿ ಅವರು ಹೆಸರಿಗೆ ಮಾತ್ರ ಸರಕಾರದ ಅಧಿಪತಿ. ಬೆಂಗಳೂರಿನಲ್ಲಿ ೧೯೬೯ರ ಜುಲೈ ತಿಂಗಳಲ್ಲಿ ಜರುಗಿದ ಎಐಸಿಸಿ ಅಧಿವೇಶನ ಕಾಂಗ್ರೆಸ್ ಹೋಳಾಗಲು ವೇದಿಕೆ ಸಜ್ಜುಗೊಳಿಸಿತು. ಪಕ್ಷದ ಸಂಘಟನೆಯ ಮೇಲೆ ಹಿಡಿತ ಇರಿಸಿಕೊಂಡಿದ್ದ ಸಿಂಡಿಕೇಟ್ ಸದಸ್ಯರು ತಮ್ಮಲ್ಲೇ ಒಬ್ಬರಾಗಿದ್ದ ಆಂಧ್ರಪ್ರದೇಶದ ನಾಯಕ ಎನ್. ಸಂಜೀವ ರೆಡ್ಡಿಯನ್ನು ರಾಷ್ಟ್ರಪತಿ ಸ್ಥಾನಕ್ಕೆ ಅಭ್ಯರ್ಥಿಯನ್ನಾಗಿಸಲು ನಿರ್ಧರಿಸಿತು. ರಾಷ್ಟ್ರಪತಿಯ ಆಯ್ಕೆ ಪರೋಕ್ಷವಾಗಿ ನಡೆಯುತ್ತದೆ. ರಾಜ್ಯ ವಿಧಾನ ಮಂಡಳಿಯ ಸದಸ್ಯರು, ಪಾರ್ಲಿಮೆಂಟಿನ ಉಭಯ ಸದನಗಳ ಸದಸ್ಯರು ಮತದಾರರು. ಸಂಜೀವ ರೆಡ್ಡಿ ನೇಮಕಾತಿ ಹಿಂದಿನ ಉದ್ದೇಶ ಇಂದಿರಾ ಗಾಂಧಿಯನ್ನು ಪದಚ್ಯುತಗೊಳಿಸುವುದಾಗಿತ್ತು. ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಲ್ಲಿ ಬೆಂಬಲವಿಲ್ಲದ್ದರಿಂದ ಇಂದಿರಾ ಗಾಂಧಿ ವಿರೋಧದ ನಡುವೆಯೂ ಪಕ್ಷ ಸಂಜೀವ ರೆಡ್ಡಿ ಅವರ ಪರವಾಗಿ ನಿರ್ಧರಿಸಿತು. ಈ ನಿರ್ಧಾರವನ್ನು ವಿರೋಧಿಸಲು ಇಂದಿರಾ ಗಾಂಧಿ ಒಡನೆಯೇ ಕ್ರಮ ಕೈಗೊಂಡರು. ಬೆಂಗಳೂರು ಎಐಸಿಸಿ ಅಧಿವೇಶನ ಮುಗಿದ ಮೇಲೆ ಕೆಲವೇ ದಿನಗಳ ನಂತರ ಪ್ರಧಾನಿ ಇಂದಿರಾ ಗಾಂಧಿ ಹಣಕಾಸಿನ ಸಚಿವರ ಖಾತೆಯನ್ನು ತಾವೇ ವಹಿಸಿಕೊಂಡು ಜುಲೈ ೨೧ರಂದು ದೇಶದ ೧೪ ಪ್ರಮುಖ ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಿದ್ದಲ್ಲದೆ, ಅಲ್ಲಿಯವರೆಗೆ ದೇಶದ ನಾಲ್ಕುನೂರು ಚಿಲ್ಲರೆ ರಾಜಮಹಾರಾಜರುಗಳು ಪಡೆಯುತ್ತಿದ್ದ ಪರಿಹಾರ ಧನ 'ಪ್ರೀವಿ ಪರ್ಸ್'ಅನ್ನು ರದ್ದುಗೊಳಿಸಿದರು.



**ಅಣ್ಣಾದೊರೈ – ಡಿಎಂಕೆಯ ಮೊದಲ ಮುಖ್ಯಮಂತ್ರಿ**

ರಾಷ್ಟ್ರಪತಿಯವರ ಸುಗ್ರೀವಾಜ್ಞೆ ಮೂಲಕ ತಂದ ಈ ಸುಧಾರಣಾ ಕ್ರಮಗಳನ್ನು ಎಡಪಂಥೀಯರಷ್ಟೇ ಅಲ್ಲದೆ ದೇಶದ ಬಹುತೇಕ ಜನ ಬೆಂಬಲಿಸಿದರು. ಆಗ ಹಂಗಾಮಿ ರಾಷ್ಟ್ರಪತಿಯಾಗಿದ್ದವರು ಉಪಾಧ್ಯಕ್ಷರಾಗಿದ್ದ ವಿ. ವಿ. ಗಿರಿಯವರು. ಇಂದಿರಾ ಗಾಂಧಿ ಅವರ ಜನಪ್ರಿಯತೆ ವಿರಾಜಿಸಿತು. ಹಣಕಾಸಿನ ಖಾತೆ ಕಳೆದುಕೊಂಡ ಮೊರಾರ್ಜಿ ದೇಸಾಯಿ ರಾಷ್ಟ್ರಪತಿ ಚುನಾವಣೆ ನಡೆಯಲಿದ್ದುದರಿಂದ ತಮಗಾದ ಅಪಮಾನವನ್ನು ಸಹಿಸಿಕೊಳ್ಳಬೇಕಾಯಿತು. ರಾಷ್ಟ್ರಪತಿ ಚುನಾವಣೆಯ ರಾಜಕೀಯ ಚದುರಂಗದಲ್ಲಿ ಇಂದಿರಾ ಗಾಂಧಿ ತಮ್ಮ ಅಸ್ತ್ರವನ್ನು ಪ್ರಯೋಗಿಸಲು ನಿರ್ಧರಿಸಿದರು.

ಸಿಂಡಿಕೇಟಿನ ಅಭ್ಯರ್ಥಿ ಸಂಜೀವ ರೆಡ್ಡಿಯವರನ್ನು ಪರಾಜಯಗೊಳಿಸಲು ನೇರವಾಗಿ ವಿರೋಧಿಸುವ ಬದಲು ಶಾಸಕರಿಗೆ ಮನಸಾಕ್ಷಿಯ ಮೇರೆಗೆ ಮತ ಚಲಾಯಿಸಲು ಹಕ್ಕು ನೀಡಬೇಕೆಂದು ಪ್ರತಿಪಾದಿಸಿದರು. ಇಂಥವರಿಗೇ ಮತ ನೀಡಬೇಕೆಂದು ವ್ಹಿಪ್ ಜಾರಿಗೊಳಿಸುವುದನ್ನು ವಿರೋಧಿಸಿದರು. ಚುನಾವಣಾ ಕಣದಲ್ಲಿ ಕೇಂದ್ರ ಸರಕಾರದಲ್ಲಿ ನೆಹರೂ ಸಂಪುಟದಲ್ಲಿ ಹಣಕಾಸಿನ ಸಚಿವರಾಗಿದ್ದ ಮಹಾರಾಷ್ಟ್ರದ ಹಿರಿಯ ರಾಜಕಾರಣಿ ಸಿ. ಡಿ. ದೇಶಮುಖ್ ಸ್ವತಂತ್ರ ಪಾರ್ಟಿ ಮತ್ತು ಜನಸಂಘದ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಕಮ್ಯುನಿಸ್ಟ್ ಪಕ್ಷಗಳು, ಡಿಎಂಕೆ, ಮುಸ್ಲಿಂಲೀಗ್, ಅಕಾಲಿದಳ ಮೊದಲಾದ ಪಕ್ಷಗಳ ಬೆಂಬಲದಿಂದ ವಿ. ವಿ. ಗಿರಿ ಸ್ವತಂತ್ರ ಅಭ್ಯರ್ಥಿಯಾಗಿ ಕಣಕ್ಕಿಳಿದಿದ್ದರು. ಟ್ರೇಡ್ ಯೂನಿಯನ್ ಚಳವಳಿಯಿಂದ ರಾಜಕೀಯ ಪ್ರವೇಶಿಸಿದ ವಿ. ವಿ. ಗಿರಿ ಸಾಕಷ್ಟು ಜನಪ್ರಿಯತೆಗಳಿಸಿದ್ದರು ಕಾರ್ಮಿಕ ಸಚಿವರಾಗಿ. ಕಾಂಗ್ರೆಸ್ ಪಾರ್ಲಿಮೆಂಟರಿ ಪಕ್ಷದ ನಾಯಕಿಯಾಗಿದ್ದ ಇಂದಿರಾ ಗಾಂಧಿ ಸಂಜೀವ ರೆಡ್ಡಿಯವರ ಪರ ಮತ ನೀಡುವಂತೆ ಸದಸ್ಯರಿಗೆ ಕಡ್ಡಾಯ ಆಣತಿ ನೀಡುವುದಕ್ಕೆ ಪ್ರತಿಯಾಗಿ, ಮನಸಾಕ್ಷಿಯಂತೆ ಮತ ನೀಡಲು ಅವಕಾಶ ಕಲ್ಪಿಸಿದರು. ಕುತೂಹಲ ಕೆರಳಿಸಿದ್ದ ಈ ಚುನಾವಣೆಯಲ್ಲಿ ವಿ. ವಿ. ಗಿರಿ ಆಗಸ್ಟ್ ೨೦ರಂದು ರಾಷ್ಟ್ರಪತಿಯಾಗಿ ಆಯ್ಕೆಗೊಂಡರು. ಪರಾಜಯದಿಂದ ರೊಚ್ಚಿಗೆದ್ದ ಸಿಂಡಿಕೇಟ್ ಇಂದಿರಾ ಗಾಂಧಿಯ ಮೇಲೆ ಶಿಸ್ತಿನ ಕ್ರಮ ಕೈಗೊಳ್ಳಲು ನಿರ್ಧರಿಸಿತು. ಕಾಂಗ್ರೆಸ್ ಅಧ್ಯಕ್ಷ ನಿಜಲಿಂಗಪ್ಪ ಮತ್ತು ಪ್ರಧಾನಿ ಇಂದಿರಾ ಗಾಂಧಿ ಮಧ್ಯೆ ಸಾಕಷ್ಟು ಪತ್ರ ವ್ಯವಹಾರ ನಡೆಯಿತು. ಕಡೆಗೆ ನವೆಂಬರ್ ೧೨ರಂದು ಕಾಂಗ್ರೆಸ್ ಇಂದಿರಾ ಗಾಂಧಿಯನ್ನು ಪಕ್ಷದಿಂದ ಹೊರಹಾಕಿತು. ಪಕ್ಷ ಒಡೆಯಿತು – ಸಂಸ್ಥಾ ಕಾಂಗ್ರೆಸ್ ಮತ್ತು ಇಂದಿರಾ ಕಾಂಗ್ರೆಸ್ ಉದಯಿಸಿತು. ಬಹುತೇಕ ಕಾಂಗ್ರೆಸ್ಸಿಗರು ಕಾಂಗ್ರೆಸ್ (ಇಂದಿರಾ) ಕಡೆ ಗುರ್ತಿಸಿಕೊಂಡರು, ಸಂಘಟನೆಗೆ ನಿಷ್ಠೆಯಿಂದ ಇದ್ದವರು ಕಾಂಗ್ರೆಸ್ (ಸಂಸ್ಥಾ) ಆದರು. ಪಾರ್ಲಿಮೆಂಟಿನಲ್ಲಿ ಕಾಂಗ್ರೆಸ್ಸಿನ ಬಹುಮತ ಕುಸಿಯಿತು. ಲೋಕಸಭೆಯಲ್ಲಿ ಇಂದಿರಾ ಗಾಂಧಿ ಕಡೆಗೆ ೨೨೦ ಮಂದಿ, ಸಿಂಡಿಕೇಟ್ ಕಡೆ ೬೮ ಮಂದಿ ಇದ್ದರು. ಇಂದಿರಾ ಗಾಂಧಿ ಎಡಪಂಥೀಯರೇನಾಗಿರಲಿಲ್ಲ. ಆದರೆ ಜನಪರ ನೀತಿ ಅನುಸರಿಸುವುದರಲ್ಲಿ ಆಸಕ್ತರಾಗಿದ್ದರು. ಇತರ ಪಕ್ಷಗಳ, ಮುಖ್ಯವಾಗಿ ಎಡಪಕ್ಷಗಳ ಬೆಂಬಲದಿಂದ ಅಧಿಕಾರದಲ್ಲಿ ಉಳಿದುಕೊಂಡರು. ಕೆಲ ಕಾಲಾನಂತರ ಸಂಸ್ಥಾ ಕಾಂಗ್ರೆಸ್ ಛಿದ್ರಗೊಂಡು ನಾನಾ ರೂಪ ಪಡೆದುಕೊಂಡು ನಿರ್ನಾಮಗೊಂಡಿತು. ಈಗ ಉಳಿದುಕೊಂಡಿರುವುದು ಕಾಂಗ್ರೆಸ್ (ಐ) ಒಂದೇ. ಸಾಕಷ್ಟು ದೀರ್ಘಕಾಲ ಆಡಳಿತ ನಡೆಸಿದ ಈ ಕಾಂಗ್ರೆಸ್ ಪಕ್ಷ ಈಗ ಅವನತಿಯ ಸ್ಥಿತಿಯಲ್ಲಿದೆ.

ಅರವತ್ತರ ದಶಕವನ್ನು ರಾಜಕೀಯ ಪಕ್ಷಗಳ ಒಡಕಿನ ಕಾಲ ಎಂದೂ ಕರೆಯಬಹುದು. ಉಗ್ರ ಬಲಪಂಥೀಯ ಪಕ್ಷ ಸ್ವತಂತ್ರ ಪಾರ್ಟಿ, ಪ್ರಜಾ ಸೋಷಲಿಸ್ಟ್ ಪಾರ್ಟಿ ಮೊದಲಾದುವು ಅದೃಶ್ಯಗೊಂಡುವು. ಪ್ರಾದೇಶಿಕ ಪಕ್ಷವಾದ ಡಿ. ಎಂ. ಕೆ. ಕೂಡ ಇಬ್ಭಾಗವಾಗಿ ಅಣ್ಣಾ ಡಿ. ಎಂ. ಕೆ. ಪಕ್ಷ ತಮಿಳುನಾಡಿನಲ್ಲಿ ಉದಯಿಸಿ ಅಧಿಕಾರ ಸರದಿಯ ಮೇಲೆ ಈ ಎರಡು ಪಕ್ಷಗಳ ಸ್ವತ್ತಾಯಿತು. ದೇಶದ ರಾಜಕೀಯದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದ ಎಡಪಕ್ಷ ಕಮ್ಯುನಿಸ್ಟ್ ಪಾರ್ಟಿ ಅರವತ್ತರ ದಶಕದ ಪ್ರಾರಂಭದಲ್ಲಿ, ೧೯೬೪ರಲ್ಲಿ ಇಬ್ಭಾಗವಾದರೆ, ೧೯೬೯ರಲ್ಲಿ ಆಡಳಿತ ಪಕ್ಷ ಕಾಂಗ್ರೆಸ್ ಬಿರುಕು ಬಿಟ್ಟಿತು. ೧೯೨೫ರಲ್ಲಿ ಅಸ್ತಿತ್ವಕ್ಕೆ ಬಂದ ಭಾರತ ಕಮ್ಯುನಿಸ್ಟ್ ಪಕ್ಷ ಹೋರಾಟಗಳ ಮೂಲಕ, ಮುಖ್ಯವಾಗಿ ಕಾರ್ಮಿಕರು ಮತ್ತು ರೈತಾಪಿ ಜನರ ಚಳವಳಿಗಳಿಂದ ಹೊಮ್ಮಿದ ರಾಜಕೀಯ ಮುಂಚೂಣಿ. ಸ್ವಾತಂತ್ರ್ಯಾನಂತರದಲ್ಲಿ ಉಗ್ರ ಕ್ರಾಂತಿಕಾರಿ ಧೋರಣೆ ಅನುಸರಿಸಿ ಸರಕಾರ ಅವಕೃಪೆಗೀಡಾಗಿ ದಬ್ಬಾಳಿಕೆಯನ್ನು ಅನುಭವಿಸಿತು. ಪಕ್ಷದ ನಾಯಕರು, ಕಾರ್ಯಕರ್ತರು ಕುಖ್ಯಾತವಾದ ಪ್ರಿವೆಂಟಿವ್ ಡಿಟೆನ್ಷನ್ ಕಾಯಿದೆ ಪ್ರಕಾರ ಬಂಧನಕ್ಕೀಡಾಗಿದ್ದರು. ಹೆಚ್ಚಿನ ನಾಯಕರು, ಕಾರ್ಯಕರ್ತರು ಭೂಗತರಾಗಿದ್ದರು. ಪಾರ್ಟಿ ಧೋರಣೆಯ ಕುರಿತು ಪಕ್ಷದೊಳಗೆ ತೀವ್ರವಾದ ಚರ್ಚೆ ನಡೆದು ಹೊಸ ನೀತಿ ಅಂಗೀಕಾರವಾಯಿತು ನಂತರ ಜರುಗಿದ ಪಾರ್ಟಿ




ಅಧಿವೇಶನದಲ್ಲಿ. ಆ ವೇಳೆಗಾಗಲೆ ಬಂಧಿತರೆಲ್ಲರೂ ಬಿಡುಗಡೆಯಾಗಿದ್ದು ಭೂಗತರಾಗಿದ್ದವರು ಹೊರಗೆ ಒಂದು ಪಕ್ಷ ಸಕ್ರಿಯವಾಗಿ ಕಾರ್ಯೋನ್ಮುಖವಾಯಿತು. ೧೯೫೨ರಲ್ಲಿ ಜರುಗಿದ ಮೊದಲ ಚುನಾವಣೆಗಳಲ್ಲಿ ಅಧಿಕ ಸ್ಥಾನ ಗಳಿಸಿದ ಕಮ್ಯುನಿಸ್ಟ್ ಪಾರ್ಟಿ ಪಾರ್ಲಿಮೆಂಟಿನಲ್ಲಿ ಪ್ರಮುಖ ಪ್ರತಿ ಪಕ್ಷವಾಗಿತ್ತು. ಅಧಿಕೃತವಾಗಿ ಮನ್ನಣೆ ಪಡೆಯದೇ ಇದ್ದರೂ ಪಾರ್ಟಿ ಸದಸ್ಯರು ಪಾರ್ಲಿಮೆಂಟರಿ ಕಲಾಪಗಳಲ್ಲಿ ಸಕ್ರಿಯ ಪಾತ್ರವಹಿಸಿದರು. ಪಶ್ಚಿಮ ಬಂಗಾಳ, ಕೇರಳ, ಆಂಧ್ರಪ್ರದೇಶ, ತಮಿಳುನಾಡು, ಬಿಹಾರ ಮೊದಲಾದ ಕಡೆಗಳಲ್ಲಿ ಪಕ್ಷ ಪ್ರಬಲವಾಗಿದ್ದು ಕೇರಳದಲ್ಲಿ ಮೊದಲ ಬಾರಿಗೆ ಚುನಾವಣೆಯ ಮೂಲಕ ಅಧಿಕಾರ ಗ್ರಹಣ ಮಾಡಿತ್ತು. ಆದರೂ ಪಾರ್ಟಿಯಲ್ಲಿ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಉದ್ಭವಿಸಿ, ಚರ್ಚೆಗಳು ನಿರಂತರವಾಗಿ ನಡೆಯುತ್ತಿದ್ದುವು. ಚೀಣೀ ಕಮ್ಯುನಿಸ್ಟ್ ಪಾರ್ಟಿ ಧೋರಣೆ ಮತ್ತು ಸೋವಿಯತ್ ಕಮ್ಯುನಿಸ್ಟ್ ಪಾರ್ಟಿ ನೀತಿಗಳ ಮಧ್ಯೆ ಉಂಟಾಗಿದ್ದ ಬಿರುಕು ಒಟ್ಟಾರೆ ಪ್ರಪಂಚದಾದ್ಯಂತ ಕಮ್ಯುನಿಸ್ಟ್ ಚಳವಳಿಯಲ್ಲಿ ಇರುಸುಮುರುಸು ಉಂಟುಮಾಡಿತ್ತು. ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಚಳವಳಿಯಲ್ಲಿನ ಬಿಕ್ಕಟ್ಟಿನಿಂದ ಭಾರತೀಯ ಕಮ್ಯುನಿಸ್ಟ್ ಪಾರ್ಟಿ ಹೊರತೇನಾಗಿರಲಿಲ್ಲ. ೧೯೬೨ರಲ್ಲಿ ನಡೆದ ಭಾರತ–ಚೀಣಾ ಗಡಿ ತಂಟೆಯ ಯುದ್ಧ ಭಾರತ ಕಮ್ಯುನಿಸ್ಟ್ ಪಾರ್ಟಿಯಲ್ಲಿ ಭಿನ್ನಾಭಿಪ್ರಾಯಗಳನ್ನು ಉಲ್ಬಣಗೊಳಿಸಿತು. ಪಾರ್ಟಿಯಲ್ಲಿ ಒಡಕುಂಟಾಗುವ ಸೂಚನೆಗಳು ಆಗಲೇ ಸ್ಪಷ್ಟವಾಗಿ ಕಾಣಿಸಿಕೊಳ್ಳತೊಡಗಿತು. ಅಂತಿಮವಾಗಿ ೧೯೬೪ರಲ್ಲಿ ಪಾರ್ಟಿ ಹೋಳಾಗಿ, ಹೊಸದಾಗಿ ಕಮ್ಯುನಿಸ್ಟ್ ಪಾರ್ಟಿ (ಮಾರ್ಕ್ಸ್‌ವಾದಿ) ಎಂಬ ಹೊಸ ಪಕ್ಷ ಉದ್ಭವಿಸಿತು. ಕಮ್ಯುನಿಸ್ಟ್ ಚಳವಳಿಯಲ್ಲಿ ತಲೆದೋರಿದ ಈ ಒಡಕು ಎಡಪಂಥೀಯ ಹೋರಾಟಕ್ಕೆ ಭಾರಿ ಹಿನ್ನಡೆಯಾಯಿತು. ಮುಂದೆ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಾರ್ಟಿಯಲ್ಲಿದ್ದ ಉಗ್ರಕ್ರಾಂತಿಕಾರಿಗಳು ಹೊರಬಂದು ನಾನಾ ತಂಡಗಳಾಗಿ ಹಲವೆಡೆ ಸಶಸ್ತ್ರ ಆಂದೋಳನ ಪ್ರಾರಂಭಿಸಿದ್ದು ಇತಿಹಾಸ.

**ಸಿ. ಆರ್. ಕೃಷ್ಣರಾವ್**
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ ಬೆಂಗಳೂರು–೮೫

ಕಾವ್ಯಲೋಕ



# ಮಣ್ಣಗೊಂಬೆಯ ಮನಸ್ಸು



ಮಣ್ಣಗೊಂಬೆಯ ಮನ
ಕೇದಿಗೆಯ ಬನ
ಮನದ ಬನದ
ಕಣ... ಕಣದಲ್ಲಿ
ಮುಟ್ಟಿನ ವಾಸನೆ
ಹುಟ್ಟಿನ ವಾಸನೆ

ಮಣ್ಣಗೊಂಬೆ ಸುಹಾಸಿನಿ
ಕೋಮಲ ಮಧುರ ಭಾಷಿಣಿ
ಜೀವಕ್ಕೆ ಜೀವ ತುಂಬುವ
ಮೊಲೆ ಹಾಲ ಅಮೃತವುಣಿಸುವ
ಕಾಮಧೇನು
ಅಳತೆಗೆ ಸಿಗದ ಬಾನು

ಮೋಡದ ಬಸಿರಿಗೆ ಬೇರಿಲ್ಲ
ಬಸಿದಂತೆ ನೋಡು ನೀರೆಲ್ಲ
ಹನಿ... ಹನಿ... ಜೀವ ಬಿಂದು
ಭೂಮಿಗೆ ಬಂದರೆ ಸಿಂಧೂ

ಭಗೀರಥನ ಬೆನ್ನಹಿಂದೆ ಬಂದವಳಲ್ಲ
ಅನ್ನದಾತನ ಮನೆಗೆ ಬಂದ ಬಂಧು
ಬಂದವಳು ಬಾಗಿನ ಬೇಡುವುದಿಲ್ಲ
ಬಾಗಿದವರಿಗೆ ಭಾಗ್ಯ ನೀಡುವಳು

ನೀರಿಗೂ ಅಗ್ನಿಪರೀಕ್ಷೆ
ನೀರೆಗೆ ಗೆದ್ದು ಬರುವ ನಿರೀಕ್ಷೆ

ನೀರೆ ನೀರಿಗಿಂತಲೂ ಶುದ್ಧ
ಕಲ್ಲು ಕರಗಿಸಲು ಸಿದ್ಧ

ಮಣ್ಣಿನ ಕಾಯಕದಲ್ಲಿ
ಕಾಯ ಸವೆಸಲು ಬದ್ಧ
ಮಣ್ಣಗೊಂಬೆಯ ಬಾಳು
ಸಾವಿಲ್ಲದ ಮನೆಯ ಸಾಸಿವೆ ಕಾಳು

ಮೀಸೆ ಹೊತ್ತವರು ಕಟ್ಟಿದ್ದಾರೆ
ಅವಳ ಮುಂಗಾಲು...
ಆದರೂ ಅವಳಾಗಿಲ್ಲ ಕಂಗಾಲು
ಗಂಡಸರಿಗೇ ಹಾಕಿರುವಳು ಸವಾಲು

ಭೂಮಿ ತೂಕದ ನನ್ನ ಪ್ರೀತಿಯ ಕಾಳಿಗೆ
ನಿಮ್ಮಲ್ಲಿದೆಯಾ ಜೋಳಿಗೆ...?
ಮೀಸೆ ಹುರಿ ಮಾಡಿಕೊಂಡವರು
ದಿಟ್ಟಿಸುತ್ತಿದ್ದಾರೆ ಮುಗಿಲು...!
ಕಾಣುತ್ತಿರುವರು ಹಗಲುಗನಸು

ಆ ಪ್ರೀತಿಯ ಕಾಳಿಗೆ
ತೆರೆದಿದೆ ಜೋಳಿಗೆ
ಮಣ್ಣಗೊಂಬೆಯ ಮನಸು !

**ಸುನೀಲಕುಮಾರ ಸುಧಾಕರ**, ಪಿ.ಡಬ್ಲ್ಯೂ.ಡಿ. ಆಫೀಸ್ ಕಂಪೌಂಡ್ ಹಿಂದೆ, ರಾಣಿಬಗೀಚ್, ವಿಜಾಪೂರ – ೫೮೬ ೧೦೪




ಸಮಾನತೆಯು ಸಾಮಾಜಿಕ ನ್ಯಾಯದ ಅಡಿಪಾಯವಾಗಿದೆ. ಅನ್ನಭಾಗ್ಯವು ಅಂತಹ ಸಮಾನತೆಯನ್ನು ಸಾಧಿಸುವಲ್ಲಿ ಇಟ್ಟ ಒಂದು ಪುಟ್ಟ ಹೆಜ್ಜೆಯಾಗಿದೆ. ನಮ್ಮ ರಾಜ್ಯದ ಒಟ್ಟು ಬಜೆಟ್ಟಿನಲ್ಲಿ ಅನ್ನಭಾಗ್ಯದ ವೆಚ್ಚದ ಪ್ರಮಾಣ ಕೇವಲ ಶೇಕಡ ಖಿರಷ್ಟಾಗುತ್ತದೆ. ಅದರ ಬಗ್ಗೆ ಅಸೂಯೆಪಡುವುದು, ಅಣಕವಾಡುವುದು ಬೇಡ. ಅದರ ಬಗ್ಗೆ ಹಗುರವಾಗಿ ಮಾತನಾಡುವುದು ಸಲ್ಲ. ಅನ್ನಭಾಗ್ಯ ಕಾರ್ಯಕ್ರಮದ ಅನುಷ್ಠಾನದಲ್ಲಿ, ಅದರ ನಿರ್ವಹಣೆಯಲ್ಲಿ ಲೋಪದೋಷ ಗಳಿದ್ದರೆ, ಅದನ್ನು ಸರಿಪಡಿಸುವುದರ ಬಗ್ಗೆ ನಾವು ಯೋಚಿಸೋಣ. ನಿಜ, ಅಲ್ಲಿ ಅನೇಕ ಇತಿಮಿತಿಗಳಿವೆ. ಉಳ್ಳವರೂ ಅದನ್ನು ಪಡೆಯುವ ಸಂಗತಿಯಿದೆ. ಅದನ್ನು ಸರಿಪಡಿಸುವ ಅಗತ್ಯವಿದೆ. ವಾಸ್ತವವಾಗಿ ಆಹಾರ ಅಭದ್ರತೆ ಅನ್ನುವುದು ಬಡತನದ ಲಕ್ಷಣವಾಗಿದೆ. ಅದೇ ಬಡತನವಲ್ಲ. ಬಡತನದ ಲಕ್ಷಣವನ್ನು ಗುರಿಯಾಗಿಟ್ಟುಕೊಂಡು ಕ್ರಮ ತೆಗೆದು ಕೊಂಡರೆ ಸಮಸ್ಯೆಯು ಬಗೆಹರಿಯುವುದಿಲ್ಲ. ಆಹಾರ ಅಭದ್ರತೆಯ ಮೂಲದಲ್ಲಿ ಬಡತನವಿದೆ, ಅಸಮಾನತೆಯಿದೆ, ಚಾರಿತ್ರಿಕ ತಾರತಮ್ಯವಿದೆ. ಆಹಾರ ಭದ್ರತೆಯ ಜೊತೆಗೆ ಅದರ ಮೂಲದಲ್ಲಿರುವ ಸಂಗತಿಗಳನ್ನು ಎದುರಿಸುವ ಕ್ರಮಗಳನ್ನು ಅನುಷ್ಠಾನಗೊಳಿಸುತ್ತಿರಬೇಕು. ಅದರ ನಿವಾರಣೆಯು ನಮ್ಮ ಮುಖ್ಯ ಅಜೆಂಡ ಆಗಬೇಕು.

***– ಕಳೆದ ಸಂಚಿಕೆಯಿಂದ ಮುಂದುವರಿದುದು***

**೪. ಅನ್ನಭಾಗ್ಯ ಮತ್ತು ಲಿಂಗ ಸಮಾನತೆ**

ಮಹಿಳೆಯರಿಗೆ ಅನ್ನಭಾಗ್ಯವು ಒಂದು ವರವಾಗಿ ಪರಿಣಮಿಸಿದೆ. ನಮ್ಮ ಸಮಾಜದ ಸಂದರ್ಭದಲ್ಲಿ ಅತ್ಯಂತ ಅಧಿಕ ಮಹಿಳೆಯರು ಮತ್ತು ಮಕ್ಕಳು ಅಪೌಷ್ಟಿಕತೆಯಿಂದ ನರಳುತ್ತಿದ್ದಾರೆ. ಅನ್ನಭಾಗ್ಯವು ನಮ್ಮಲ್ಲಿ ಜನರು ಎದುರಿಸುತ್ತಿರುವ, ಕಾಣಿಸಿದರೂ ಕಾಣಿಸದಂತಿರುವ ಹಸಿವಿನ ಸಮಸ್ಯೆಯನ್ನು ಪರಿಹರಿಸುವ ಕಾರ್ಯಕ್ರಮವಾಗಿದೆ. ಬಡವರಿಗೆ ಸಂಬಂಧಿಸಿದಂತೆ ಅನ್ನಭಾಗ್ಯವು ವರಮಾನವನ್ನು ಉಳಿಸುವ ಕ್ರಮವೆಂದು ಭಾವಿಸಬಹುದು. ಅಪೌಷ್ಟಿಕತೆಯನ್ನು 'ರಾಷ್ಟ್ರೀಯ ಅವಮಾನ' ಎಂದು ಕರೆಯಲಾಗಿದೆ. ಇದು ಮಹಿಳೆಯರು ಮತ್ತು ಮಕ್ಕಳ ದೃಷ್ಟಿಯಿಂದ ಗಂಭೀರ ಸಮಸ್ಯೆಯಾಗಿದೆ. ಅನ್ನಭಾಗ್ಯವು ಇಂತಹ ಅವರ ಸಮಸ್ಯೆಯನ್ನು ಸ್ವಲ್ಪಮಟ್ಟಿಗಾದರೂ ನಿವಾರಿಸಬಲ್ಲುದಾಗಿದೆ. ನಮ್ಮ ಸಮಾಜದಲ್ಲಿ ಲಿಂಗ ಅನುಪಾತ ಮಹಿಳೆಯರಿಗೆ ವಿರುದ್ಧವಾಗಿದೆ. ಅದಕ್ಕೆ ಹೆಣ್ಣು ಭ್ರೂಣ ಹತ್ಯೆಯು ಒಂದು ಕಾರಣ. ಲಿಂಗ ಅನುಪಾತ ಕಡಿಮೆಯಿರಲು ಮಹಿಳೆಯರಲ್ಲಿ ಮತ್ತು ಬಾಲಕಿಯರಲ್ಲಿ ಇರುವ ಅಪೌಷ್ಟಿಕತೆ, ಅನೀಮಿಯಾ, ಸಾಂಕ್ರಾಮಿಕ ರೋಗಗಳು ಕಾರಣವಾಗಿರಬಹುದು. ಅನ್ನಭಾಗ್ಯವು ಅಪೌಷ್ಟಿಕತೆಯ ಸಮಸ್ಯೆಯನ್ನು ನಿವಾರಿಸುವ ದಿಶೆಯಲ್ಲಿ ಒಂದು ಸರಿಯಾದ ಕ್ರಮವಾಗಿದೆ. ಸಮಾನತೆಗೆ ಬಹುಮುಖಗಳಿವೆ. ಅದರಲ್ಲಿ ಮುಖ್ಯವಾದುದು ಲಿಂಗ ಸಮಾನತೆ. ಅನ್ನಭಾಗ್ಯವು ಮಹಿಳೆಯರ ಸಶಕ್ತೀಕರಣಕ್ಕೆ ಕಾಣಿಕೆ ಸಲ್ಲಿಸುವ ಸಾಧ್ಯತೆಯಿದೆ. ನಮ್ಮ ರಾಜ್ಯದಲ್ಲಿನ ಒಟ್ಟು ಭೂರಹಿತ ಕೃಷಿ ದಿನಗೂಲಿ ದುಡಿಮೆಗಾರರಲ್ಲಿ ಮಹಿಳಾ ದುಡಿಮೆಗಾರರ ಪ್ರಮಾಣ ಪುರುಷ ದುಡಿಮೆಗಾರರ ಪ್ರಮಾಣಕ್ಕಿಂತ ಅಧಿಕವಾಗಿದೆ. ಆಹಾರ ಭದ್ರತೆಯು ಮಹಿಳೆಯರಿಗೆ ಅತ್ಯಂತ ಅಗತ್ಯವಾದ ಸಂಗತಿಯಾಗಿದೆ. ತೀವ್ರ ಬಡತನದಲ್ಲಿರುವ ಕುಟುಂಬಗಳಲ್ಲಿ ಅದರ ನಿರ್ವಹಣೆಯ ಜವಾಬುದಾರಿಯು ಹೆಚ್ಚಾಗಿ ಮಹಿಳೆಯರ ಮೇಲಿರುತ್ತದೆ. ಇದನ್ನು 'ಫೆಮಿನೈಸೇಶನ್ ಆಫ್ ಪಾವರ್ಟಿ' ಎಂದು ಕರೆಯಲಾಗಿದೆ. ಈ ಕಾರಣದಿಂದ ಆಹಾರ ಭದ್ರತೆಯು ಮಹಿಳೆಯರ ದೃಷ್ಟಿಯಿಂದ ಮುಖ್ಯವಾದುದು.

ವಿಶ್ವಸಂಸ್ಥೆಯು ೨೦೧೪ರ 'ಅಂತಾರಾಷ್ಟ್ರೀಯ ಮಹಿಳಾ ದಿನ'ದ ಸಂದರ್ಭದಲ್ಲಿ ನೀಡಿದ ಘೋಷಣೆ ಹೀಗಿದೆ: ಲಿಂಗ ಸಮಾನತೆ ಅನ್ನುವುದು ಕೇವಲ ಮಹಿಳೆಯರಿಗೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ. ಲಿಂಗ ಸಮಾನತೆಯನ್ನು, ಆ ಮೂಲಕ ಎಲ್ಲರ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವ ದಿಶೆಯಲ್ಲಿ ಆಹಾರ ಭದ್ರತೆ ಕಾರ್ಯಕ್ರಮ ಒಂದು ನಿರ್ಣಾಯಕ ಹೆಜ್ಜೆಯಾಗಿದೆ. ಯುಎನ್‌ಡಿಪಿಯು ೧೯೯೫ರಲ್ಲಿ ಎಚ್ಚರಿಸಿದಂತೆ ಅಭಿವೃದ್ಧಿಯ ಒಂದು ಪಾಲು ಮಹಿಳೆಯರಿಗೂ ತಲುಪುವಂತಾಗಬೇಕು. ಇಲ್ಲದಿದ್ದರೆ ಅಪಾಯ ತಪ್ಪಿದ್ದಲ್ಲ. ಆಹಾರ ಭದ್ರತೆ ಕಾರ್ಯಕ್ರಮವು ಒಂದು ರೀತಿಯಲ್ಲಿ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರನ್ನೂ ಒಳಗೊಳ್ಳುವ ದಿಶೆಯಲ್ಲಿನ ಒಂದು ಕ್ರಮವಾಗಿದೆ.

# ಆಹಾರ ಭದ್ರತೆ : ಜನರನ್ನು ಒಳಗೊಳ್ಳುವ ಯೋಜನೆ

**ಟಿ. ಆರ್. ಚಂದ್ರಶೇಖರ**

# ಹಚ್ಚೇವು ಇಂಗ್ಲೀಷ ದೀಪ

ಹಚ್ಚೇವು ಇಂಗ್ಲೀಷ ದೀಪ
ಸಿರಿ ತರುವ ದೀಪ, ಬಲವಿರುವ ದೀಪ
ಇಂಗ್ಲೀಷ ಸಂಸ್ಕೃತಿಯ ದೀಪ
ಹಚ್ಚೇವು ಇಂಗ್ಲೀಷ ದೀಪ

ಎಲ್ಲೆಲ್ಲಿ ಕನ್ನಡ ಅಲ್ಲಲ್ಲಿ ಇಂಗ್ಲೀಷ
ಶಾಲೆಗಳ ತೆರೆದಿರುವ ದೀಪ
ನಾಡಿನಾ ಮಕ್ಕಳಿಗೆ ಭಾಗ್ಯದ ಬಾಗಿಲು
ತೆರೆಯಿಸುವ ಲಕ್ಷ್ಮಿಯ ದೀಪ
ಮನೆ ಮನೆಗಳಲ್ಲಿ ಮನ ಮನಗಳಲ್ಲಿ
ಇಂಗ್ಲೀಷ ಪ್ರೆಸ್ಟೀಜಿನ ದೀಪ
ಫಾರೆನ್ ಕಾಣುವ ಐ. ಟಿ. ಬಿ. ಟಿ. ಕೆಲಸ
ಆಸೆಯಾಮಿಷದ ಕನಸಿದ ದೀಪ
ಹಚ್ಚೇವು ಇಂಗ್ಲೀಷ ದೀಪ

ಶಿಸ್ತು ಶಿಕ್ಷಣದಿ ಪಂಜರದ ಪಕ್ಷಿ
ಸ್ಪರ್ಧೆಯಲಿ ಮುಳುಗಿಸುವ ದೀಪ
ರ್‍ಯಾಂಕುಗಳ ದೀಪ ಪರ್ಸೆಂಟೇಜಿನ ದೀಪ
ಟೆನ್‌ಶನ್ ಟ್ಯೂಶನ್ ದೀಪ
ಬೆನ್ನು ಭಾರದ ಬ್ಯಾಗು ಸೊಂಟ ಮುರಿಯುವ
ಶಿಕ್ಷಣದ ಇಂಗ್ಲೀಷ ದೀಪ
ಬಡತನವ ಅರಿಯದ ಶ್ರೀಮಂತ
ರಾಗುವ ಕಾರು-ಬಾರಿನ ದೀಪ
ಹಚ್ಚೇವು ಇಂಗ್ಲೀಷ ದೀಪ

ಮರುಳಾದ ಜನರು ಸಾಲ ಸೋಲದಲಿ
ಮಕ್ಕಳನು ಓದಿಸುವ ದೀಪ
ಇಂಗ್ಲೀಷ ಹೆಸರಿನಲಿ ಹಣದ
ಸುಲಿಗೆಯಲಿ ನಿಂತಿರುವ ದೀಪ
ಮಮ್ಮಿ, ಡ್ಯಾಡಿ ಆಂಟಿ, ಅಂಕಲ್‌ರ
ಸಂಸ್ಕೃತಿಯ ಬೆಳೆಸುವ ದೀಪ
ತಂದೆ ತಾಯಿ ಬಂಧುಗಳಿಗೆ ಟಾಟಾ
ಬೈ ಬೈ ಎಂದು ಹೇಳಿ ಹೋಗುವ ದೀಪ
ಹಚ್ಚೇವು ಇಂಗ್ಲೀಷ ದೀಪ

(ಡಿ. ಎಸ್. ಕರ್ಕಿಯವರ ಕ್ಷಮೆ ಕೋರಿ)

**ಶಾಂತಾದೇವಿ ಹಿರೇಮಠ**
ವಿದ್ಯಾ ಶಕ್ತಿ, ಪ್ರಭುದೇವ ನಿಲಯ, ವಿಕಾಸ ನಗರ, ಕೊಪ್ಪಳ – ೫೮೩ ೨೩೧

**೫. ಆಹಾರ ಸಬ್ಸಿಡಿ, ಪವರ್ ಸಬ್ಸಿಡಿ ಮತ್ತು ತೆರಿಗೆಗಳಲ್ಲಿ ಸಬ್ಸಿಡಿ**

ಆಹಾರಕ್ಕೆ ಸಬ್ಸಿಡಿ ಇದೆ. ವಿದ್ಯುಚ್ಛಕ್ತಿಗೆ ಸಬ್ಸಿಡಿ ಇದೆ. ಉದ್ದಿಮೆಗಳಿಗೆ ಸಬ್ಸಿಡಿ ಇದೆ. ರಫ್ತು ವ್ಯಾಪಾರಕ್ಕೆ ಸಬ್ಸಿಡಿ ಇದೆ. ಅದೇ ರೀತಿಯಲ್ಲಿ ತೆರಿಗೆಗಳಿಗೂ ಸಬ್ಸಿಡಿ ಇದೆ. ಉದ್ದಿಮೆಗಳು ತಾವು ಎಷ್ಟು ತೆರಿಗೆ ಕಟ್ಟಬೇಕೋ ಅಷ್ಟನ್ನು ಕಟ್ಟುವುದಿಲ್ಲ. ಸಂಭಾವ್ಯ ತೆರಿಗೆ ಮೊತ್ತಕ್ಕೂ ಮತ್ತು ವಾಸ್ತವವಾಗಿ ಸಂಗ್ರಹವಾಗುವ ತೆರಿಗೆ ಮೊತ್ತಕ್ಕೂ ನಡುವೆ ಅಂತರವಿದೆ. ಆರ್ಥಿಕತೆಯಲ್ಲಿ ವರಮಾನ ಏರಿಕೆಯಾದಂತೆ ತೆರಿಗೆ ಸಾಮರ್ಥ್ಯವು ಏರಿಕೆಯಾಗುತ್ತಿಲ್ಲ. ಆದರೆ ವರಮಾನದಲ್ಲಿ ಏರಿಕೆಯು ಯಾವ ಗತಿಯಲ್ಲಿ ನಡೆಯುತ್ತದೆಯೋ ಅದೇ ಗತಿಯಲ್ಲಿ ತೆರಿಗೆ ಸಂಗ್ರಹದಲ್ಲಿ ಏರಿಕೆಯಾಗುವುದಿಲ್ಲ. ಅಲ್ಲಿ ಅನೇಕ ಬಗೆಯ ರಿಯಾಯಿತಿ, ವಿನಾಯಿತಿಗಳಿರುತ್ತವೆ. ಇದನ್ನು ತಾಂತ್ರಿಕವಾಗಿ 'ಬಿಟ್ಟುಕೊಟ್ಟ ತೆರಿಗೆ ಮೊತ್ತ' ಎಂದು ಕರೆಯಲಾಗುತ್ತದೆ (ಟ್ಯಾಕ್ಸ್ ರೆವಿನ್ಯೂ ಫೋರ್‌ಗಾನ್). ಇದನ್ನು ತೆರಿಗೆ ವೆಚ್ಚ ಎಂದೂ ಕರೆಯಲಾಗುತ್ತದೆ. ಸರ್ಕಾರದ ಬಜೆಟ್ಟಿನ ಸಾರ್ವಜನಿಕ ವೆಚ್ಚ ಖಾತೆಯಲ್ಲಿ ಇದನ್ನು ತೋರಿಸಬೇಕು ಎಂದು ಹೇಳಲಾಗುತ್ತಿದೆ. ಕೇಂದ್ರ ಸರ್ಕಾರವು ೨೦೧೧-೨೦೧೨ನೆಯ ಸಾಲಿನಲ್ಲಿ ಹೀಗೆ ಬಿಟ್ಟುಕೊಟ್ಟ ತೆರಿಗೆ ಮೊತ್ತ ರೂ. ೫.೩೩ ಲಕ್ಷ ಕೋಟಿ. ಮರು ವರ್ಷ ೨೦೧೨-೧೩ರಲ್ಲಿ ಬಿಟ್ಟುಕೊಟ್ಟ ತೆರಿಗೆ ಮೊತ್ತ ರೂ. ೫.೭೩ ಲಕ್ಷ ಕೋಟಿ. ಇದನ್ನು ಉದ್ದಿಮೆಗಳಿಗೆ ಉತ್ತೇಜನದ ಭಾಗವಾಗಿ ನೀಡಲಾಗುತ್ತದೆ. ಇದನ್ನು ನಾವು ಅಪ್ರತ್ಯಕ್ಷ ಅಥವಾ ಮುಚ್ಚಿಟ್ಟ ಸಬ್ಸಿಡಿ ಎಂದು ಕರೆಯಬಹುದು. ಇದರಲ್ಲಿ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ತೆರಿಗೆಗಳು ಸೇರುತ್ತವೆ. ಕೇಂದ್ರ ಸರ್ಕಾರದ ೨೦೧೪-೧೫ನೆಯ ಸಾಲಿನ ಒಟ್ಟು ವೆಚ್ಚ ರೂ. ೧೭.೯೩ ಲಕ್ಷ ಕೋಟಿ. ಆಹಾರ ಸಬ್ಸಿಡಿ ಮೊತ್ತ ರೂ. ೧.೧೫ ಲಕ್ಷ ಕೋಟಿ. ಅಂದರೆ ಕೇಂದ್ರದ ಒಟ್ಟು ಬಜೆಟ್ ವೆಚ್ಚದಲ್ಲಿ ಆಹಾರ ಸಬ್ಸಿಡಿಯ ಪಾಲು ಕೇವಲ ಶೇಕಡ ೬.೫೨. ಅದೇ ರೀತಿಯಲ್ಲಿ ಅದು ಪೆಟ್ರೋಲಿಯಮ್ ಮೇಲೆ ನೀಡುತ್ತಿರುವ ಸಬ್ಸಿಡಿಯು (ರೂ. ೬೩೪೨೭ ಕೋಟಿ) ಒಟ್ಟು ವೆಚ್ಚದ ಶೇಕಡ ೩.೬೮ರಷ್ಟಾಗುತ್ತದೆ. ಫರ್ಟಿಲೈಸರ್ ಮೇಲೆ ನೀಡುತ್ತಿರುವ ಸಬ್ಸಿಡಿ (ರೂ. ೬೭೯೭೧ ಕೋಟಿ) ಕೇಂದ್ರ ಸರ್ಕಾರದ ಒಟ್ಟು ವೆಚ್ಚದ ಶೇಕಡ ೩.೮೫ರಷ್ಟಾಗುತ್ತದೆ. ಫರ್ಟಿಲೈಸರ್ ಮತ್ತು ಪೆಟ್ರೋಲಿಯಮ್ - ಎರಡನ್ನೂ ಸೇರಿಸಿದರೆ ಅವುಗಳಿಗೆ ನೀಡುತ್ತಿರುವ ಸಬ್ಸಿಡಿಯು ರೂ. ೧.೩೧ ಲಕ್ಷ ಕೋಟಿಯಾಗುತ್ತದೆ. ಇದು ಕೇಂದ್ರ ಸರ್ಕಾರದ ಒಟ್ಟು ವೆಚ್ಚದ ಶೇಕಡ ೭.೪೫ರಷ್ಟಾಗುತ್ತದೆ. ಆಹಾರ ಸಬ್ಸಿಡಿಗಿಂತ ಇದು ಅಧಿಕ. ಫರ್ಟಿಲೈಸರ್ ಸಬ್ಸಿಡಿಯ ಬಗ್ಗೆಯಾಗಲಿ ಅಥವಾ ಪೆಟ್ರೋಲಿಯಮ್ ಸಬ್ಸಿಡಿಯ ಬಗ್ಗೆಯಾಗಲಿ ನಾವು ಮಾತನಾಡುವುದಿಲ್ಲ. ಇದಾವುದರ ಬಗ್ಗೆಯೂ ನಾವು ಟೀಕೆ ಮಾಡುತ್ತಿಲ್ಲ. ಏಕೆಂದರೆ ಅವೆರಡೂ ಉಳ್ಳವರಿಗೆ ಸಂಬಂಧಿಸಿದ ಸಂಗತಿಗಳು. ಆಹಾರಕ್ಕೆ ಸಬ್ಸಿಡಿಯನ್ನು ನೀಡಿದರೆ ಅದು ದುಂದುವೆಚ್ಚವಾಗಿಬಿಡುತ್ತದೆ. ಏಕೆಂದರೆ ಅದು ಉಳಿದವರಿಗೆ ಸಂಬಂಧಿಸಿದ ಸಂಗತಿ. ಅದನ್ನು ಪಡೆಯುವ ದುಡಿಮೆಗಾರರು ದುಡಿಯದೆ ಉಣ್ಣುವವರಾಗಿಬಿಡುತ್ತಾರೆ. ಕೇಂದ್ರ ಸರ್ಕಾರದ ಆಹಾರ ಸಬ್ಸಿಡಿಯು ಬಿಟ್ಟು ಕೊಟ್ಟ ತೆರಿಗೆ ಮೊತ್ತದ ಶೇಕಡ ೨೧.೦೫ರಷ್ಟಾಗುತ್ತದೆ. ಬಡವರಿಗೆ ಕೊಡುವ ಸಬ್ಸಿಡಿಯು ದುಂದುವೆಚ್ಚ! ಉದ್ದಿಮೆಗಳಿಗೆ ನೀಡುವ ಅಪ್ರತ್ಯಕ್ಷ-ಮುಚ್ಚಿಟ್ಟ ಸಬ್ಸಿಡಿಯು ಉತ್ಪನ್ನಕಾರಕ! ಇದನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗಲಾರದು. ಇದು ಮೂಲಭೂತವಾಗಿ ರಾಜಕೀಯ ಮತ್ತು ಆರ್ಥಿಕತೆಗೆ ಸಂಬಂಧಪಟ್ಟ ಪ್ರಶ್ನೆಯಾಗಿದೆ. ಇಲ್ಲಿ ರಾಜಕೀಯಾರ್ಥಿಕ ಸಂಗತಿಯು ಚಾಲಕ ಶಕ್ತಿಯಾಗಿ ಕೆಲಸ ಮಾಡುತ್ತಿದೆ. ವರ್ಗ ಸಂಬಂಧಗಳು, ಸಂಪನ್ಮೂಲದ ಮಾಲೀಕತ್ವ, ಜನರ ಧಾರಣಾ ಸಾಮರ್ಥ್ಯ, ವರಮಾನದ ಶ್ರೇಣೀಕರಣ ಮುಂತಾದವು ಕೆಲಸ ಮಾಡುತ್ತಿರುತ್ತವೆ. ಪೆಟ್ರೋಲಿಯಮ್ ಮತ್ತು ಫರ್ಟಿಲೈಸರ್ ಬಳಕೆಯು ಉಂಟುಮಾಡುತ್ತಿರುವ ದುಷ್ಪರಿಣಾಮಗಳನ್ನು ಆಹಾರ ಸಬ್ಸಿಡಿಯು ಉಂಟುಮಾಡುವುದಿಲ್ಲ. ಪರಿಸರದ ದೃಷ್ಟಿಯಿಂದ ಪೆಟ್ರೋಲಿಯಮ್ ಮತ್ತು ಫರ್ಟಿಲೈಸರ್ ಬಳಕೆಯು ಅಪಾಯಕಾರಿ ಮತ್ತು ಆತಂಕಕಾರಿ. ಅವುಗಳಿಗೆ ಸಬ್ಸಿಡಿಯನ್ನು ನೀಡಲಾಗುತ್ತಿದೆ. ಅದರ ಬಗ್ಗೆ ಉಳ್ಳವರು ತಮ್ಮ ತಿರಸ್ಕಾರವನ್ನು ವ್ಯಕ್ತಪಡಿಸುತ್ತಿಲ್ಲ. ಬಡವರ ಕಾರ್ಯಕ್ರಮ ಎಂದಮಾತ್ರಕ್ಕೆ ಆಹಾರ ಸಬ್ಸಿಡಿಯು ದುಂದುವೆಚ್ಚವಾಗಿಬಿಡುತ್ತದೆ.

ನಮ್ಮ ರಾಜ್ಯ ಸರ್ಕಾರದ ೨೦೧೪-೧೫ನೆಯ ಸಾಲಿನ ಆಹಾರ ಸಬ್ಸಿಡಿ ಮೊತ್ತ ರೂ. ೪೩೬೫ ಕೋಟಿ. ಇದು ಒಟ್ಟು ಯೋಜನಾ ವೆಚ್ಚದ ಶೇಕಡ ೬.೬೭ರಷ್ಟಾಗುತ್ತದೆ. ಆದರೆ ವಿದ್ಯುಚ್ಛಕ್ತಿಗೆ-ಇಂಧನಕ್ಕೆ ನಾವು ನೀಡುತ್ತಿರುವ ಸಬ್ಸಿಡಿ

ರೂ. ೬೨೦೦ ಕೋಟಿ. ಇದು ನಮ್ಮ ರಾಜ್ಯದ ಯೋಜನಾ ವೆಚ್ಚದ ರಾಜಕೀಯ ಮತ್ತು ಆರ್ಥಿಕತೆಗೆ ಸಂಬಂಧಪಟ್ಟ ೧೦.೨೨ರಷ್ಟಾಗುತ್ತದೆ. ವಿದ್ಯುಚ್ಛಕ್ತಿಗೆ ಸಬ್ಸಿಡಿಯನ್ನು ನೀಡಬಹುದು. ಅದರ ಬಗ್ಗೆ ನಾವು ಟೀಕೆ ಮಾಡುವುದಿಲ್ಲ. ಅದರ ಬಗ್ಗೆ ಪದ ಕಟ್ಟುವುದಿಲ್ಲ. ಅದನ್ನು ಪಡೆಯುವವರಲ್ಲಿ ಕುಳಿತುಣ್ಣುವವರಿದ್ದಾರೆ – ಉಳ್ಳವರಿದ್ದಾರೆ ಎಂಬುದು ನಮ್ಮ ಗಮನಕ್ಕೆ ಬರುವುದಿಲ್ಲ. ಬಡವರಿಗೆ ಆಹಾರ ಸಬ್ಸಿಡಿಯನ್ನು ನೀಡಿದರೆ ದುಡಿಮೆಗಾರರು ದುಡಿಯುವುದನ್ನೇ ಬಿಟ್ಟುಬಿಡುತ್ತಾರೆ ಎಂಬ ಆತಂಕವನ್ನು ವ್ಯಕ್ತಪಡಿಸ ಲಾಗುತ್ತಿದೆ. ಈ ವಾದ ತುಂಬ ವಿಚಿತ್ರವಾಗಿ ಕಾಣುತ್ತದೆ. ಅಂದರೆ 'ದಿನಗೂಲಿಗೆ ದುಡಿಯುವವರು ಸದಾ ದಿನಗೂಲಿ ದುಡಿಮೆಗಾರರಾಗಿಯೇ ಇರಬೇಕು ಎಂಬುದು ಸಮಾಜದ ನಿಲುವಾಗಿದೆಯೆ ? ಅವರು ವರಮಾನ ಶ್ರೇಣಿಯಲ್ಲಿ ಮೇಲೆ ಬರಬಾರದೇನು ? ಅವರ ಬದುಕು ಉತ್ತಮವಾಗಬಾರದೇನು ? ಕೂಲಿಕಾರರ ಬದುಕು ಉತ್ತಮವಾಗಿ ಅವರಿಗೆ ಕೂಲಿ ಮಾಡುವ ಪ್ರಮೇಯ ಬರದಿರಬಹುದು. ಇದನ್ನು ಸಕಾರಾತ್ಮಕವಾಗಿ ನೋಡಬೇಕಾದ ಅಗತ್ಯವಿದೆ. ಇದನ್ನು ಅಭಿವೃದ್ಧಿಯ ಸೂಚಿಯನ್ನಾಗಿಯೂ ಮತ್ತು ಸಾಮಾಜಿಕ ಪರಿವರ್ತನೆಯ ಸಂಗತಿಯಾಗಿಯೂ ನೋಡಬಹುದು. ಅದನ್ನು ಅಭಿವೃದ್ಧಿ ಎಂದು ಕರೆಯಬಹುದು. ಅಂತಹ ಸಾಮಾಜಿಕ ಸ್ಥಿತಿಯನ್ನು ಊಹಿಸಿಕೊಂಡು ನೋಡಿ ! ಕೃಷಿಯಲ್ಲಿ ಕೂಲಿಯವರು ದೊರೆಯುವುದಿಲ್ಲ ಎಂಬುದು ರಾಜ್ಯಾದ್ಯಂತ ಕೇಳಿ ಬರುತ್ತಿರುವ ಒಂದು ಕೂಗು. ಅದು ಯಾರಿಗೆ ಸಮಸ್ಯೆ ? ಅದು ಸಮಸ್ಯೆಯೇ ಅಲ್ಲ. ಅದು ಅಭಿವೃದ್ಧಿಯ ಸೂಚಿ. ನಿಜ, ಆಹಾರ ಭದ್ರತೆ ಯೋಜನೆಯಡಿ ನೀಡುವ ಅಕ್ಕಿಯನ್ನು ದುರುಪಯೋಗಪಡಿಸಿಕೊಳ್ಳುವ ವರಿದ್ದಾರೆ. ಅದರ ನಿರ್ವಹಣೆಯ ಸಮಸ್ಯೆ ನಮ್ಮ ಮುಂದಿದೆ. ಅದರ ನಿರ್ವಹಣೆಯು ಸಮರ್ಪಕವಾಗಿಲ್ಲ ಎಂದು ಕಾರ್ಯಕ್ರಮವನ್ನೇ ರದ್ದುಪಡಿಸುವುದು ಸರಿಯಲ್ಲ. ಆಹಾರ ಭದ್ರತೆ ಕಾರ್ಯಕ್ರಮದಲ್ಲಿ ನಿರ್ವಹಣೆಯ ಸಮಸ್ಯೆಗಳಿವೆ. ಅಲ್ಲಿ ಸೋರಿಕೆಯ ಸಮಸ್ಯೆಯಿದೆ. ಅನ್ನಭಾಗ್ಯಕ್ಕಾಗಿ ಸರಬರಾಜಾದ ಅಕ್ಕಿಯು ಮುಕ್ತ ಮಾರುಕಟ್ಟೆಯಲ್ಲಿ ಮಾರಾಟವಾಗು ತ್ತಿರುವುದು ಕಂಡುಬರುತ್ತಿದೆ. ಈ ಕಾರ್ಯಕ್ರಮಕ್ಕಾಗಿ ಸಂಗ್ರಹಿಸಿದ ಅಕ್ಕಿಯನ್ನು ಕೆಡದಂತೆ ದಾಸ್ತಾನು ಇಡುವ ವ್ಯವಸ್ಥೆ ಸಮರ್ಪಕವಾಗಿಲ್ಲ. ಇವೆಲ್ಲ ನಿರ್ವಹಣೆಯ ಸಮಸ್ಯೆಗಳು. ಈ ದಿಶೆಯಲ್ಲಿ ನಾವು ಕ್ರಿಯಾಶೀಲರಾಗಬೇಕಾದ ಅಗತ್ಯವಿದೆ.

**೬. ಸಾಮಾಜಿಕ ನ್ಯಾಯ ಮತ್ತು ಆಹಾರ ಸಬ್ಸಿಡಿ**

ಈಗಾಗಲೆ ಹೇಳಿರುವಂತೆ ಆಹಾರ ಭದ್ರತೆಯ ಕಾರ್ಯಕ್ರಮವು ಸಾಮಾಜಿಕ ನ್ಯಾಯದ ಸಂಗತಿ ಯಾಗಿದೆ. ನಮ್ಮ ಸಮಾಜದಲ್ಲಿ ಯಾರೊಬ್ಬರೂ ಹಸಿವಿನಿಂದ ಇರಬಾರದು. ಇವೆಲ್ಲ ಕೇವಲ ವೈಯಕ್ತಿಕ ಸಂಗತಿಗಳಲ್ಲ. ಬಡತನಕ್ಕೆ, ಹಸಿವಿಗೆ ಜನರು ಒಳಗಾಗದಂತೆ ಮಾಡುವುದು ಸಾಮಾಜಿಕ ಸಂಗತಿ. ಇದಕ್ಕೆ ಅಭಿವೃದ್ಧಿಯ ಫಲ ಎಲ್ಲರಿಗೂ ಸಮಾನವಾಗಿ ಅಲ್ಲದಿದ್ದರೂ ಸಮರ್ಪಕವಾಗಿ ಮತ್ತು ಸರಾಗವಾಗಿ ದೊರೆಯುವಂತೆ ಮಾಡಬೇಕು. ಬಡವರಿಗೂ ಮತ್ತು ಬಡವರಲ್ಲದವರಿಗೂ ಸಂಬಂಧವಿಲ್ಲವೆಂದು ಅನೇಕರು ಭಾವಿಸಿದ್ದಾರೆ. ಹತ್ತಾರು ಜನಕ್ಕೆ ಸಾಕಾಗುವಷ್ಟು ವರಮಾನ, ಆಹಾರ, ಸರಕು ಮುಂತಾದವುಗಳನ್ನು ಒಬ್ಬರೇ ಕೂಡಿಟ್ಟುಕೊಳ್ಳುವುದು ಸಮಾಜದಲ್ಲಿ ಬಡತನಕ್ಕೆ, ಹಸಿವಿಗೆ ಕಾರಣವಾಗಬಹುದು. ವರಮಾನದ ಕೇಂದ್ರೀಕರಣವು ಸಾಮಾಜಿಕ ನ್ಯಾಯಕ್ಕೆ ವಿರುದ್ಧವಾದ ಸಂಗತಿಯಾಗಿದೆ. ಸಮಾಜದಲ್ಲಿ ಇತರರು ನಮ್ಮನ್ನು ಹೇಗೆ ಕಾಣಬೇಕು ಎಂದು ಬಯಸುತ್ತೇವೆಯೋ ಅದೇ ರೀತಿಯಲ್ಲಿ ಇತರರನ್ನು ನಾವು ಕಾಣಬೇಕು. ನಮ್ಮ ಜೊತೆಯಲ್ಲಿ ಇತರರು ಹೇಗೆ ವರ್ತಿಸಬೇಕು ಎಂದು ಬಯಸುತ್ತೇವೆಯೋ ಅದೇ ರೀತಿಯಲ್ಲಿ ನಾವು ಇತರರ ಜೊತೆಯಲ್ಲಿ ವರ್ತಿಸಬೇಕು. ಸಮಾಜದಲ್ಲಿ ನಮಗೆ ಏನೆಲ್ಲ ಬೇಕು – ದೊರೆಯಬೇಕು ಎಂದು ಅಪೇಕ್ಷೆ ಪಡುತ್ತೇವೆಯೋ ಅವೆಲ್ಲ ಉಳಿದವರಿಗೂ ದೊರೆಯಬೇಕು ಎಂಬುದು ಸಾಮಾಜಿಕ ನ್ಯಾಯ. ಇದನ್ನೇ ಬಸವಣ್ಣ ತನ್ನ ಒಂದು ವಚನದಲ್ಲಿ ಹೀಗೆ ಹೇಳಿದ್ದಾನೆ :

*ಏನಿ ಬಂದಿರಿ, ಹದುಳಿದ್ದಿರೆ ಎಂದಡೆ*
*ನಿಮ್ಮೈಸಿರಿ ಹಾರಿ ಹೋಹುದೆ ?*
*ಕುಳ್ಳಿರೆಂದಡೆ ನೆಲ ಕುಳಿ ಹೋಹುದೆ ?*
*ಒಡನೆ ನುಡಿದಡೆ ಸಿರ ಹೊಟ್ಟೆ ಹೊಡೆವುದೆ ?*
*ಕೊಡಲಿಲ್ಲದಿದ್ದಡೊಂದು, ಗುಣವಿಲ್ಲದಿದ್ದೊಡೆ*
*ಮೂಗ ಕೊಯ್ವುದ ಮಾಣ್ಬನೆ*
*ಕೂಡಲಸಂಗಮದೇವಾ*

ಒಬ್ಬರು ಮತ್ತೊಬ್ಬರನ್ನು ಮಾತನಾಡಿಸುವುದಕ್ಕೆ ಪವಿತ್ರ–ಅಪವಿತ್ರ ಎಂಬ ಸಂಗತಿಗಳು ಮುಖ್ಯವಾಗ ಬೇಕೆ ? ಸಮಾಜದಲ್ಲಿ ಸ್ಥಾನ, ಅಂತಸ್ತು, ಜಾತಿ, ಧರ್ಮ, ಲಿಂಗ, ಪ್ರದೇಶ, ವರ್ಣ ಮುಂತಾದವುಗಳು ಸಾಮಾಜಿಕ ಸಂಬಂಧಗಳಲ್ಲಿ ಮುಖ್ಯವಾಗಬಾರದು. ಸಮಾನತೆಯು ನಮ್ಮ ಬದುಕಿಗೆ ಮಾರ್ಗದರ್ಶಿ ಸೂತ್ರವಾಗಬೇಕು.




ಇದು ಸಾಮಾಜಿಕ ನ್ಯಾಯ. ಸಮಾನತೆಯು ಸಾಮಾಜಿಕ ನ್ಯಾಯದ ಅಡಿಪಾಯವಾಗಿದೆ. ಅನ್ನಭಾಗ್ಯವು ಅಂತಹ ಸಮಾನತೆಯನ್ನು ಸಾಧಿಸುವಲ್ಲಿ ಇಟ್ಟ ಒಂದು ಪುಟ್ಟ ಹೆಜ್ಜೆಯಾಗಿದೆ. ನಮ್ಮ ರಾಜ್ಯದ ಒಟ್ಟು ಬಜೆಟ್ಟಿನಲ್ಲಿ ಅನ್ನಭಾಗ್ಯದ ವೆಚ್ಚದ ಪ್ರಮಾಣ ಕೇವಲ ಶೇಕಡ ೩ರಷ್ಟಾಗುತ್ತದೆ. ಅದರ ಬಗ್ಗೆ ಅಸೂಯೆಪಡುವುದು, ಅಣಕವಾಡುವುದು ಬೇಡ. ಅದರ ಬಗ್ಗೆ ಹಗುರವಾಗಿ ಮಾತನಾಡುವುದು ಸಲ್ಲ. ಅನ್ನಭಾಗ್ಯ ಕಾರ್ಯಕ್ರಮದ ಅನುಷ್ಠಾನದಲ್ಲಿ, ಅದರ ನಿರ್ವಹಣೆಯಲ್ಲಿ ಲೋಪದೋಷಗಳು ಇದ್ದರೆ, ಅದನ್ನು ಸರಿಪಡಿಸುವುದರ ಬಗ್ಗೆ ನಾವು ಯೋಚಿಸೋಣ. ನಿಜ, ಅಲ್ಲಿ ಅನೇಕ ಇತಿಮಿತಿಗಳಿವೆ. ಉಳ್ಳವರೂ ಅದನ್ನು ಪಡೆಯುವ ಸಂಗತಿಯಿದೆ. ಅದನ್ನು ಸರಿಪಡಿಸುವ ಅಗತ್ಯವಿದೆ. ವಾಸ್ತವವಾಗಿ ಆಹಾರ ಅಭದ್ರತೆ ಅನ್ನುವುದು ಬಡತನದ ಲಕ್ಷಣವಾಗಿದೆ. ಅದೇ ಬಡತನವಲ್ಲ. ಬಡತನದ ಲಕ್ಷಣವನ್ನು ಗುರಿಯಾಗಿ ಇಟ್ಟುಕೊಂಡು ಕ್ರಮ ತೆಗೆದುಕೊಂಡರೆ ಸಮಸ್ಯೆಯು ಬಗೆಹರಿಯುವುದಿಲ್ಲ. ಆಹಾರ ಅಭದ್ರತೆಯ ಮೂಲದಲ್ಲಿ ಬಡತನವಿದೆ, ಅಸಮಾನತೆಯಿದೆ, ಚಾರಿತ್ರಿಕ ತಾರತಮ್ಯವಿದೆ. ಆಹಾರ ಭದ್ರತೆಯ ಜೊತೆಗೆ ಅದರ ಮೂಲದಲ್ಲಿ ಇರುವ ಸಂಗತಿಗಳನ್ನು ಎದುರಿಸುವ ಕ್ರಮಗಳನ್ನು ಅನುಷ್ಠಾನಗೊಳಿಸುತ್ತಿರಬೇಕು. ಅದರ ನಿವಾರಣೆಯು ನಮ್ಮ ಮುಖ್ಯ ಅಜೆಂಡ ಆಗಬೇಕು. ಆಹಾರ ಅಭದ್ರತೆಯು ಮಾನವ ಹಕ್ಕಿನ ಉಲ್ಲಂಘನೆಯಾಗಿದೆ. ಆಹಾರ ಅಭದ್ರತೆಯು ಸ್ವಾತಂತ್ರ್ಯವನ್ನು ಸೀಮಿತ ಗೊಳಿಸುವ ಸಂಗತಿಯಾಗಿದೆ. ಸಾಮಾಜಿಕ ನ್ಯಾಯದ ದೃಷ್ಟಿಯಿಂದ, ಮಾನವ ಹಕ್ಕಿನ ದೃಷ್ಟಿಯಿಂದ ಮತ್ತು ಸಂವಿಧಾನಾತ್ಮಕ ನಿರ್ದೇಶನದ ದೃಷ್ಟಿಯಿಂದ ಆಹಾರ ಭದ್ರತೆಯು ನಮ್ಮ ಸರ್ಕಾರಗಳ ಅಭಿವೃದ್ಧಿ ನೀತಿಯ ಅವಿಭಾಜ್ಯ–ಅಂತರ್ಗತ ಭಾಗವಾಗಬೇಕು. ಆಹಾರ ಭದ್ರತೆಯು ಅಭಿವೃದ್ಧಿಯ ಸಂಗತಿಯಾಗಿದೆ. 'ಟ್ಯಾಕ್ಸ್ ರೆವಿನ್ಯೂ ಫೋರ್‌ಗಾನ್' ಮಾತ್ರ ಅಭಿವೃದ್ಧಿಯ ಸಂಗತಿಯಲ್ಲ. ಪೆಟ್ರೋಲಿಯಮ್ – ಫರ್ಟಿಲೈಸರ್ ಸಬ್ಸಿಡಿಯು ಮಾತ್ರ ಅಭಿವೃದ್ಧಿಯ ಸಂಗತಿಯಲ್ಲ. ಆಹಾರ ಭದ್ರತೆಯು ಅಭಿವೃದ್ಧಿಯಾಗಿದೆ. ಸಮಾಜದಲ್ಲಿ ಯಾರು ದುಸ್ಥಿತಿಯಲ್ಲಿರುತ್ತಾರೋ ಅವರಿಗೆ ಉಳಿದವರಿಗಿಂತ ಹೆಚ್ಚಿನ ನೆರವು ದೊರೆಯುವಂತೆ ಮಾಡುವ ಅಗತ್ಯವಿದೆ. ಇದುವೇ ಸಾಮಾಜಿಕ ನ್ಯಾಯ. ಆಹಾರ ಭದ್ರತೆ ಕಾರ್ಯಕ್ರಮದ ಮೂಲದಲ್ಲಿ ಆರ್ಥಿಕ ಸಿದ್ಧಾಂತವಿದೆ. ಅದು ಕೇವಲ ಭಾವನಾತ್ಮಕವಾದ ಕಾರ್ಯಕ್ರಮವಲ್ಲ. ಅಲ್ಲಿ ಒಂದು ತಾತ್ವಿಕ ತರ್ಕ ಇದೆ. ಅಲ್ಲಿ ಆರ್ಥಿಕ ಸಿದ್ಧಾಂತ ಕೆಲಸ ಮಾಡುತ್ತಿದೆ. ಸಾಮಾಜಿಕ ನ್ಯಾಯ ಅದಕ್ಕೆ ಆಧಾರವಾಗಿದೆ. ಅದು ಕೇವಲ ಜನಲೋಲುಪತೆಯ ಕಾರ್ಯಕ್ರಮವಲ್ಲ.


**ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕ, 'ವಚನ'
ಸೊಸೈಟಿ ರಸ್ತೆ, ಅಮರಾವತಿ
ಹೊಸಪೇಟೆ – ೫೮೩ ೨೦೧

# ಕುತೂಹಲಿಗಳು



ನಾನು ಬೆಂಗಳೂರಿನ ಪ್ರತಿಷ್ಠಿತ ಹೊರಬಡಾವಣೆಯಲ್ಲಿ ಸಣ್ಣ ನಿವೇಶನ ಖರೀದಿಸಿದೆ. ಅಲ್ಲಿ ಈಗಾಗಲೇ ಸಾಕಷ್ಟು ಮನೆಗಳು ಎದ್ದಿವೆ. ನನ್ನ ಭೂಮಿ ಯಾರಾದರೂ ಒತ್ತುವರಿ ಮಾಡಿಲ್ಲವೆಂದು ಖಾತರಿಪಡಿಸಿಕೊಳ್ಳಲಾದರೂ ನಾನು ತಿಂಗಳಿಗೊಮ್ಮೆ ಅತ್ತ ಹೋಗಿಬರಲೇಬೇಕಲ್ಲ. ಸರಿ, ಹಾಗೆ ಹೋಗಿ ನೆಲದ ದರ್ಶನ ಮಾಡುವುದೇ ತಡ ನನ್ನ ಬೆನ್ನ ಹಿಂದೆ ಬಗೆ ಬಗೆಯ ಪ್ರಶ್ನೆಗಳು ಆಸುಪಾಸಿನವರಿಂದ. ಏಕಾಗ್ರತೆ ಭಂಗಗೊಳಿಸುವ ವಿಚಾರಣೆಗಳು.

'ನಿಮ್ದೇನ ಸಾರ್ ಸೈಟು ?'

'ಯಾವಾಗ ಸಾರ್ ಪಾಯ ?'

'ಸುಮ್ನೆ ಹೂಡಿಕೆಗೊ, ಇಲ್ಲ ವಾಸಕ್ಕೊ ?'

'ಅಡಿ ರೇಟು ಹೇಳಿ ಸ್ವಾಮಿ, ಎಷ್ಟಾಯ್ತು ?'

'ಏನ್ ರೀ ಎಲ್ಲಾ ಬಿಟ್ಟು ಇಲ್ಲಿಗೆ ಬಂದ್ರೀ ?'

ವಿಪರೀತ ಸಿಟ್ಟೇರಿದರೂ ನುಂಗಿಕೊಳ್ಳುತ್ತಿದ್ದೆ. ಎಲ್ಲರ ಪ್ರಶ್ನೆಗಳಿಗೂ ಒಂದೇ ಉತ್ತರ ಎನ್ನುವಂತೆ ಕೃತಕ ನಗೆ ಸೂಸಿ ಮಾಯವಾಗುವುದನ್ನು ಬಿಟ್ಟರೆ ನನಗೆ ಅನ್ಯ ಉಪಾಯ ತೋಚುತ್ತಿರಲಿಲ್ಲ. ನನ್ನ ಕೋಬ್ರದರ್ ನಾಣಿ ಸಣ್ಣದಾಗಿ ಒಂದು ಮನೆ ಕಟ್ಟಿಸಿಯೇ ಬಿಡು. ಆಗ ಯಾರೂ ನಿನ್ನ ತಂಟೆಗೆ ಬರೊಲ್ಲ ಅಂತ ಪುಕ್ಕಟೆ ಸಲಹೆಯಿತ್ತ. ಹೇಗೂ ೨೦' x ೩೦' ಸೈಟು. ಐದೇ ತಿಂಗಳಿಗೆ ಕಿರಿಮನೆ ಕಟ್ಟಿಸಿದೆ. ಗೃಹಪ್ರವೇಶದ ದಿನವೇ ನನಗೊಬ್ಬ ಆಪ್ತ ಕಾರ್ಯದರ್ಶಿ ಅಗತ್ಯವೆನ್ನಿಸುವಷ್ಟು ಪ್ರಶ್ನೆಗಳ ಬಾಣ ! ಲೇಬರ್ ಗುತ್ತಿಗೇನಾ ಅಥವಾ ಮೆಟೀರಿಯಲ್ ಗುತ್ತಿಗೇನಾ ಎನ್ನುವುದರಿಂದ ಹಿಡಿದು ಉಯಿಲು ಯಾರಿಗೆ ಎನ್ನುವ ತನಕ ತರಾವರಿ ತಾಕೀತುಗಳು ಕುತೂಹಲಿಗಳಿಂದ. ಬಾಡಿಗೆಗೊ ಭೋಗ್ಯಕ್ಕೊ ಅಂತ ವಿಚಾರಿಸುವವರ ಪೈಕಿ ಹಲವರು ಬ್ರೋಕರ್‌ಗಳಿಗೆ ಹತ್ತಿರದವರು ಎಂದು ಬೇರೆ ಹೇಳಬೇಕಿಲ್ಲ. ನಡುನಡುವೆ ಹಾಲು, ಪೇಪರ್, ಕೆಲಸದಾಕೆಗೆ, ಸೊಪ್ಪಿನ ವರ್ತನೆ ವಗೈರೆಗೆ ನಮಗೇ ಹೇಳ್ತೀರ ತಾನೆ ಅಂತ ಕೆಲವರು ಕಿವಿಯಲ್ಲಿ ಊದಿದ್ದರು. ಸಂಡಿಗೆ ಮುರಿಯುತ್ತಿದ್ದ ನಾಣಿಯತ್ತ, "ಏನಾಯ್ತು ನೋಡು ನಿನ್ನ ಮಾರ್ಗದರ್ಶನ" ಎನ್ನುವಂತೆ ದಿಟ್ಟಿಸಿದೆ. ಭೂಪ ಗಪ್‌ಚಿಪ್ ಅನ್ನದೆ, "ಮನೇನ ಲಾಭಕ್ಕೆ ಮಾರು ಇಲ್ಲ ನೀನೇ ಬಂದು ಸೇರ್ಕೊ" ಅಂದ.

ನಾನಾ ವಿಮಾ ಯೋಜನೆಗಳಿವೆ. ಕುತೂಹಲಿಗಳಿಂದ ಪಾರಾಗುವ ವಿಮೆ ಯಾವುದಾದರೂ ಇದ್ದರೆ ದಯವಿಟ್ಟು ನನಗೆ ತಿಳಿಸಿ. ನನ್ನ ಅಣ್ಣನ ಮಗನ ಸಿ. ಇ. ಟಿ. ಕೌನ್ಸೆಲಿಂಗ್‌ಗೆ ಹೋಗಿದ್ದೆ. ನನ್ನನ್ನು ಅವರಿವರು ಕಾಡುತ್ತಾರೆ ಏನಾಯ್ತು, ಎತ್ತಾಯ್ತು ಅಂತ, ನೀನೇ ಹೋಗು ಅಂದಿದ್ದ ಅಣ್ಣ. ಅವನ ವಾಸ ಮಲ್ಲೇಶ್ವರದಲ್ಲಿ. ಕೌನ್ಸೆಲಿಂಗ್ ಆದ ದಿನ ಸಂಜೆ ಹನುಮಂತನಗರದಲ್ಲಿರುವ ನನ್ನ ಮನೆಯ ಮುಂದೆ ಮಲ್ಲೇಶ್ವರದ ನಿವಾಸಿಗಳು ! ಯಾವುದಕ್ಕೆ ಸಿಗ್ತು ? ಎಲ್ಲಿ ? ಪ್ರಶ್ನೆಗಳು. ಅಣ್ಣನ ಪುತ್ರನಿಗೆ ಅವನು ಬಯಸಿದ ಮೆಡಿಕಲ್ ಸಿಗಲಿಲ್ಲ ಅಂತ ಖಾತ್ರಿಪಡಿಸಿಕೊಂಡೇ ಮುತ್ತಿದವರು ಮಲ್ಲೇಶ್ವರಕ್ಕೆ ಮರಳಿದ್ದು ! ಹಾಗೆಂದಮಾತ್ರಕ್ಕೆ ಕುತೂಹಲಿಗಳು ಯಾವಾಗಲೂ ವಿಘ್ನ ಸಂತೋಷಿಗಳು, ಹಿತೈಷಿಗಳು ಎಂದು ತೀರ್ಮಾನಿಸುವಂತಿಲ್ಲ. ಒಂದು ಅನುಭವ ಹೇಳಿಕೊಳ್ಳುತ್ತೇನೆ. ಮೂರು ತಿಂಗಳ ಹಿಂದೆ ಮೈಸೂರು ಬ್ಯಾಂಕ್ ವೃತ್ತದ ಬಳಿ ನಾನು ಸವಾರಿ ಮಾಡುತ್ತಿದ್ದ ಬೈಕ್ ಸ್ಕಿಡ್ ಆಯಿತು. ಆಯ ತಪ್ಪಿ ಬಿದ್ದೆ. ಮೂರ್‍ನಾಲ್ಕು ಮಂದಿ ಬಹು ಕಾಳಜಿಯಿಂದ ನನ್ನತ್ತ ಓಡಿ ಬಂದು ನನ್ನನ್ನು, ಬೈಕನ್ನು ಮೇಲೆತ್ತಿದರು. ಆ ಪೈಕಿ ಒಬ್ಬ, "ನಿಮಗೆ ಸ್ವಲ್ಪ ಮೊಣಕೈ ಗಾಯ ಜಾಸ್ತೀನೆ ಆಗಿರೊ ಹಾಗಿದೆ ಸಾರ್. ಕೂತ್ಕೊಳ್ಳಿ ಸಾರ್ ಹಿಂದೆ. ನಾನೇ ಓಡಿಸ್ತೀನಿ ಗಾಡಿ. ಜೋಪಾನ ಸಾರ್" ಅಂದ. ಸದ್ಯ ಇಷ್ಟಾದರೂ ಉಪಕಾರವಾಯ್ತಲ್ಲ ಅಂತ ಕೂತೆ. ಮಾತಾಡ್ತಾ ಮಾತಾಡ್ತಾ ಅವನ ಮನೇನೂ ಹನುಮಂತನಗರದ ಹತ್ರಾನೇ ಇರುವ ಗಣೇಶ ಭವನ ಹೋಟೆಲ್ ಪಕ್ಕದಲ್ಲೇ ಅಂತ ತಿಳಿಯಿತು. ನಾನು ಎಲ್ಲಾದ್ರು ಕ್ಲಿನಿಕ್‌ಗೆ ಕರೆದುಕೊಂಡು ಹೋಗಿ ಬ್ಯಾಂಡೇಜು ಹಾಕಿಸ್ತಾನೆ ಅಂತಿದ್ದೆ. ಮಹಾನುಭಾವ ನನ್ನನ್ನು ಗಣೇಶ ಭವನದ ಬಳಿ ಇಳಿಸಿ, "ನಿಮ್ಗೇನೂ ಆಗಿಲ್ಲ. ಹೋಗ್ಬನ್ನಿ" ಅಂದವನೇ ಎಲ್ಲೋ ಸಂದಿಯಲ್ಲಿ ಮಾಯವಾಗುವುದೆ ?

ಅಸ್ವಸ್ಥರಾಗಿ ಆಸ್ಪತ್ರೆ ಸೇರಿದವರನ್ನು ಕಾಣಲು ಬರುವ ಆಪ್ತೇಷ್ಟರು ಕೈ ಕುಲುಕಿ, "ಬಹಳ ದಿನಗಳಾಯ್ತು ನಿಮ್ಮನ್ನು ಕಂಡು. ಇಲ್ಲಿ ನೋಡಿ ಬಹಳಾನೆ ಸಂತೋಷವಾಯ್ತು ಅಂತು" ಎನ್ನುವುದು ಅದೆಷ್ಟು ಬಾಲಿಶವಲ್ಲವೆ ?

ಈಚೆಗೆ ಕುಂಭದ್ರೋಣ ಮಳೆಯಿಂದ ಇಡೀ ರಾಜಧಾನಿಯೆ ತೊಯ್ದಿತ್ತು. ಆ ಮೂಲೆಮನೆ ಕನಕಜ್ಜಿ ಕೊಡೆ ಹಿಡಿದು ವಾರವಿಡೀ ಸಂಜೆಯಾಗುತ್ತಿದ್ದಂತೆ ನಮ್ಮನ್ನು ಬಂದು ವಿಚಾರಿಸುತ್ತಿತ್ತು ; "ಅಲ್ಲ, ಇಷ್ಟು ಜೋರಾಗಿ ಮಳೆ ಸುರೀತಾ ಇದೆ. ...ನಿಮ್ಮನೆ ಸೂರು ಇನ್ನೂ ಸೋರಿಲ್ವಲ್ಲ ? ಏನು ಕಥೆಯಪ್ಪ ! ...ಹೇಗೂ ಉಂಟೆ ?" ಅಂತ. ಅಂತೆಯೇ ನೂಕುನುಗ್ಗಲಿನ ಬಸ್ಸೇರಿ ಸಾಹಸದಿಂದ ಒಂದು ಸೀಟು ಗಿಟ್ಟಿಸಿಕೊಂಡ್ವಿ ಅನ್ನಿ. ಬಸ್ಸಿನಲ್ಲಿ ಆಗಲೇ ಪಟ್ಟಾಗಿ ಮೊದಲೇ ಕೂತ ಪರಿಚಿತರೊಬ್ಬರು ನಮ್ಮತ್ತ ಕುತೂಹಲದ ದೃಷ್ಟಿ ಹರಿಸಿ, "ಓಹೋ ನಿಮಗೂ ಸೀಟು ಸಿಕ್ಕಿತೆ ?" ಅಂತ ಹುಬ್ಬೇರಿಸಿರುತ್ತಾರೆ. ಅವರ ಆನಂದದ ಪಯಣಕ್ಕೆ ನಾವು ನಿಂತಿರಬೇಕು !

ನನ್ನ ಹಿರಿಯ ಮಿತ್ರರೊಬ್ಬರನ್ನು ಕುರಿತ ವೃತ್ತಾಂತ ಸ್ವಲ್ಪ ಭಿನ್ನವೆ. ಆತ ತಮ್ಮ ಎಂದಿನ ಶಿಕ್ಷಕ ವೃತ್ತಿಯ ಜೊತೆಗೆ ಹಲ್ಲುಬೇನೆಗೆ ನಾಟಿ ಔಷಧಿ ನೀಡುತ್ತಾರೆ. ಬೇವಿನ ಪುಡಿಗೆ ಮತ್ತ್ಯಾವುದೋ ಕಾಳಿನಪುಡಿ ಬೆರೆಸಿ ಹಲ್ಲುಪುಡಿ ತಯಾರಿಸುತ್ತಾರೆ. ಕೆಲವರಿಗೆ ಹಲ್ಲುನೋವು ಶಮನವಾಗಿದೆ ಅಂತ ಅವರು ಹೇಳುತ್ತಾರೆ. ಒಮ್ಮೆ ನನಗೆ ದವಡೆ ಹಲ್ಲೊಂದು ವಿಪರೀತ ತೊಂದರೆ ಕೊಟ್ಟಿತ್ತು. ಅವರ ಕೈಗುಣ ನೋಡಿಯೇ ಬಿಡೋಣ, ಹೇಗೂ ಫೀಸಿನ ಆತಂಕವಿಲ್ಲವಲ್ಲ. ಯಾವ ಹುತ್ತದಲ್ಲಿ ಯಾವ ಹಾವೋ ಅನ್ನಿಸಿ, "ಕೊಡಿ ಸಾರ್ ಏನಾದ್ರು ಪುಡೀನ" ಅಂದೆ. ಅವರು ಅಗತ್ಯವಾಗಿ ಕೊಡ್ತೀನಿ ಎಂದು ಉತ್ಸಾಹದಿಂದ ಮೂರ್‍ನಾಲ್ಕು ಪ್ಯಾಕೆಟ್‌ಗಳನ್ನು ಕೈಗಿತ್ತರು. ದಿನಾ ಒಂದೊಂದು ಪ್ಯಾಕೆಟ್ ಒಡೆದು ಬೆಳಗ್ಗೆ ಸಂಜೆ ಪುಡಿಯಿಂದ ಎಲ್ಲಾ ಹಲ್ಲುಗಳನ್ನು ತಿಕ್ಕಿ ಅಂತ ಸಲಹೆಯಿತ್ತರು. ಮೂರು ದಿನ ಆ ಶಿಕ್ಷಕ ದಂತ ಚಿಕಿತ್ಸಕರು ಹೇಳಿದಂತೆ ಮಾಡಿದೆ. ನಾಲ್ಕನೆಯ ದಿನ ಎಂದಿನಂತೆ ಬೆಳಗ್ಗೆ ಮನೆ ಹತ್ತಿರದ ಉದ್ಯಾನವನದಲ್ಲಿ ನಡಿಗೆನಿರತನಾಗಿದ್ದೆ. ನನ್ನನ್ನೇ ಹುಡುಕುತ್ತ ಆ ಮೇಷ್ಟ್ರು ಬಂದರು. "ಹೇಳಿ ಸಾರ್. ಚೆನ್ನಾಗಿದೀರಾ" ಅಂದೆ. "ಅದಿರ್ಲಿ ನಿಮ್ಮನ್ನು ನೋಡಿದ್ರೆ ಹಲ್ಲುಬೇನೆ ಗುಣವಾಗಿದೆ ಅನ್ನೋದು ಗ್ಯಾರೆಂಟಿ. ನಿಜ ಹೇಳಿ. ಯಾವ ಪ್ಯಾಕೆಟ್ ಪುಡಿಯಿಂದ ನಿಮಗೆ ಮೇಲಾಯ್ತು ? ಯಾಕಂದ್ರೆ ನಂಗೂನು ಶಾನೆ ಗುಮಾನಿಯಿತ್ತು ನನ್ನ ಫಾರ್ಮುಲ ಮೇಲೆ" ಎಂದರು. ಅವರು ಕೊಟ್ಟ ಪ್ಯಾಕೆಟ್‌ಗಳ ಜೊತೆಗೆ ಬೇರೆ ಗುಳಿಗೆಯನ್ನೂ ನುಂಗುತ್ತಿದ್ದೆ ಅಂತ ಅವರಿಗೆ ಹೇಗೆ ಹೇಳಲಿ ? ಆ ಮೇಷ್ಟ್ರರದು ಕುತೂಹಲವೋ ಕಾಳಜಿಯೋ ನನಗಿನ್ನೂ ಅರ್ಥವಾಗಿಲ್ಲ. ಬಹುತೇಕ ಕುತೂಹಲಿಗಳು ಏನಾದರೂ ಮಾತನಾಡಬೇಕು, ಯಾರು ಎದುರಾದರೂ ಸರಿಯೆ ಎಂಬ ಗೀಳಿನವರು. ಆ ಮೂಲಕ ಅವರು ತಮ್ಮ ಅಸ್ತಿತ್ವವನ್ನು ಇತರರಿಗೆ ಸಾಬೀತುಪಡಿಸುತ್ತಾರೆ. ಕ್ಯಾರೆ ಎನ್ನುವವರನ್ನು ಸೃಷ್ಟಿಸಿಕೊಳ್ಳುತ್ತಾರೆ. ಏನಂತೀರಿ ?

**ಬಿಂಡಿಗನವಿಲೆ ಭಗವಾನ್**

೩೬ 'ಬಿ', ೯ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ, ೨ನೇ ಬ್ಲಾಕ್, ಬೆಂಗಳೂರು – ೫೦

ಸಭಾಂಗಣ ಕಿಕ್ಕಿರಿದು ತುಂಬಿತ್ತು. ಅಂದು ಸಿಂಗೆ ಮಾಸ್ತರರಿಗೆ ಸನ್ಮಾನ. ಅವರಿಗೆ ಇಷ್ಟವಾಗುವ ಸಾಹಿತಿಯೊಬ್ಬರು ಆ ಸಮಾರಂಭಕ್ಕೆ ಅತಿಥಿಗಳಾಗಿ ಆಗಮಿಸುವವರಿದ್ದರು, ವಿದ್ಯಾರ್ಥಿಗಳೆಲ್ಲ ಸೇರಿ ತಮ್ಮ ಗುರುವಿಗಾಗಿ 'ಗುರುನಮನ' ಕಾರ್ಯಕ್ರಮವನ್ನು ಏರ್ಪಡಿಸಿದ್ದರು. ಅಪಾರ ಶಿಷ್ಯ ಬಳಗ. ಹಳೆಯ ವಿದ್ಯಾರ್ಥಿ ವಿದ್ಯಾರ್ಥಿನಿಯರು ಬಂದು ಬಂದು ಅವರ ಕಾಲು ಮುಟ್ಟಿ ನಮಸ್ಕರಿಸುತ್ತಿದ್ದರು. ಕೆಲವರು ತಮ್ಮ ಪರಿಚಯ ಹೇಳಿಕೊಳ್ಳುತ್ತಿದ್ದರೆ ಕೆಲವರನ್ನು ಇವರೇ ಗುರುತಿಸಿ ಹೆಸರು ಹೇಳುತ್ತಿದ್ದರು. ಆಗ ಆ ವಿದ್ಯಾರ್ಥಿಗಳ ಕಣ್ಣು ಧನ್ಯತೆಯಿಂದ ತುಂಬಿಕೊಳ್ಳುತ್ತಿದ್ದವು. ಫೇಸ್‌ಬುಕ್‌ನ ಒಡನಾಟ, ಅವರಿಗೆ ತಮ್ಮ ಶಿಷ್ಯರನ್ನು ಗುರುತಿಸಲು, ಸಂಪರ್ಕಿಸಲು ಇನ್ನಷ್ಟು ಸಹಾಯ ಮಾಡಿತ್ತು.

ತಿಂಗಳ ಕಥೆ

# ಮಾಸ್ತರರೂ ಬಸರೀ ಮರವೂ

**ಮಾರುತಿ ದಾಸಣ್ಣವರ**

ಸಿಂಗೆ ಮಾಸ್ತರರು ಹೆಜ್ಜೆ ಹಾಕುತ್ತಿದ್ದ ಗತಿಗೆ ಊರ ಮುಂದಿನ ಹಾದಿ ಮತ್ತು ಎರಡೂ ಬದಿ ಬೆಳೆದು ನಿಂತ ಕಬ್ಬು ಕುಪ್ಪಳಿಸುತ್ತಿದ್ದವು. ಕವಣಿಗಲ್ಲಿನಂತೆ ರಂಪ್ ರಂಪ್ ಎಂದು ಹೊರಟವರು "ಇವನವ್ವನ, ಲಗೂನ ಕತ್ತಲಾಗಬಾರ್ದ?" ಎಂದು ಸೂರ್ಯದೇವನನ್ನು ಮನದಲ್ಲೇ ಶಪಿಸುತ್ತ ಎಡಗೈಯೊಳಗಿನ ಚೀಲವನ್ನು ಮತ್ತೆ ಮತ್ತೆ ಮುಟ್ಟಿನೋಡಿಕೊಂಡು ಹಗ್ಗವಿರುವುದನ್ನು ಖಚಿತಪಡಿಸಿಕೊಳ್ಳುತ್ತಿದ್ದರು. ಜನರಿಗೆ ಗುರುತು ಸಿಗಬಾರದೆಂದು ಎಷ್ಟೇ ತಲೆ ತಗ್ಗಿಸಿ ನಡೆದರೂ "ಎನ್ರಿ ಮಾಸ್ತರs ಇಕಾಡಿ ಹೊಂಟ್ರೀ?" ಎಂದು ಓರಗೆಯವರೂ, ನಮಸ್ಕಾರ್ರಿ ಸರ್" ಎಂದು ಅವರಿಂದಲೇ ನಾಲ್ಕಕ್ಷರ ಕಲಿತ ಹಳೆಯ ಶಿಷ್ಯರೂ ಹೇಳುತ್ತಲೇ ಇದ್ದರು. ಅವರಿಗೆಲ್ಲ ಒಲ್ಲದ ಮನಸ್ಸಿನಿಂದ ಚುಟುಕಾಗಿಯೂ ಯಾಂತ್ರಿಕವಾಗಿಯೂ ಉತ್ತರಿಸುತ್ತ ತಮ್ಮ ನಡಿಗೆಯ ವೇಗವನ್ನು ಇನ್ನಷ್ಟು ಹೆಚ್ಚಿಸಿದರು.

"ಆತು ಇನ್ನೊಂದು ಕಿಲೋಮೀಟರು, ಅಷ್ಟೇ. ಅಷ್ಟಾದರ ಮುಗೀತು. ಆ ಗುರಿ ತಲುಪಿದಂಗನs. ಗುರಿ? ಇದ ಎಂಥಾ ಗುರಿ? ಇದಕ್ಕೂ ಗುರಿ ಅನಬೇಕೇನು? ಓಹ್! ಈಗ ಅದೆಲ್ಲಾ ಜಿಜ್ಞಾಸೆ ಯಾಕ? ಅಲ್ಲಿ ಹೋಗುದಷ್ಟs ಗಟ್ಟಿ ಜೀಂವಾ ಮಾಡಿ ಮುಗಿಸಿಬಿಟ್ಟರ ಆತು. ಒಂದೆರಡ ಎಣಸೂದರಾಗ „ „ ಮುಗದs ಹೋಗಿರ್ತೈತಿ. ಆಮ್ಯಾಲ? ... ಆಮ್ಯಾಲಿಂದ ಯಾಂವ ಬಲ್ಲ?? ಒಟ್ಟಿನ ಮ್ಯಾಲ ಎಲ್ಲಾದಕ್ಕೂ ಒಂದ ಪೂರ್ಣವಿರಾಮ ಬಿದ್ದಾಂಗಾಗ್ತೈತಿ. 'ಮೂರು ಹೊತ್ತೂ ಬಡದ ಹಾಕಾಕ ನನಗ ಆಗೂದಿಲ್ಲ' ಅಂತ ಸೊಸಿ ಹಂಗಸೂವಂಗಿಲ್ಲ, "ಅಪ್ಪಾ, ನಿನಗೇನ ತಿಳೀತೈತಿ ನಾಯಿ ಹಾಂಗ ಸುಮ್ಮನ ಒಂದ ಮೂಲ್ಯಾಗ ಕುಂದ್ರಾಕಾಗುದಿಲ್ಲ?" ಎಂದು ಮಗ... ಅಲ್ಲಾ ನನಗ ನಾಯಿ ಅಂತಾನಲ್ಲ ಈ ಮಗಾ? ಅದಕ್ಕ ಹುಟ್ಟಿಸಿ, ಬೆಳಿಸಿ, ಸಾಲಿ ಕಲಿಸಿ ಇಷ್ಟ ದೊಡ್ಡಾಂವ್ನ ಮಾಡಿದ್ನೇನ? ಇಂವಗ ಆರಾಮಿಲ್ಲದಾಗ ರಾತ್ರೋ ರಾತ್ರಿ ಚಳಿ ಮಳಿ ಅನ್ನದss ಕುಲಗೋಡಕ್ಕ ನಡಕೊಂಡ ಹೋಗಿ ಡಾಕ್ಟರ್‌ನ ಕರ್ಕೊಂಡ ಬರ್ತಿದ್ನಿ. ಒಮ್ಮೊಮ್ಮೆ ಗಂಡಾ ಹೇಂತಿ ಇಬ್ಬರೂ ಎರಡೆರಡ ರಾತ್ರಿ, ಹಗಲು ಕಣ್ಣಿಗೆ ಕಣ್ ಹಚ್ಚತಿರಲಿಲ್ಲ. ಆಕಿ ಲಗೂ ಹ್ವಾದಳು ಛಲೋ ಆತು. ಇಲ್ಲಂದರ ನಂದು ನಾಯಿ ಪಾಡು, ಅಕಿದು ಇನ್ಯಾವ ಪಾಡಾಗ್ತಿತ್ತೋ ಯಾರಿಗೆ ಗೊತ್ತು?" ಮಾಸ್ತರರ ಕಣ್ಣು ತೇವಗೊಂಡವು.

ಮಾಸ್ತರರು ನಿವೃತ್ತರಾಗಿದ್ದರು. ಜೇಬಿನಲ್ಲಿ ದುಡ್ಡಿರುತ್ತಿರಲಿಲ್ಲ. ಇದ್ದರೂ ಯಾರಾದರೂ ಕಷ್ಟವೆಂದು ಬಂದರೆ ಕೊಟ್ಟುಬಿಡುತ್ತಿದ್ದರು. ಅವರು ಕೇಂದ್ರ ಸರಕಾರದ ಶಾಲೆಯೊಂದರಲ್ಲಿ ಕೆಲಸ ಮಾಡಿದ್ದರಾದರೂ ಪೆನ್ಶನ್ ಇರಲಿಲ್ಲ. ನಿವೃತ್ತಿ ಸಮಯದಲ್ಲಿ ಕೈಗೆ ಬಂದ ಒಂದಿಷ್ಟು ಹಣ ಸಕ್ಕರೆ ಕಾಯಿಲೆಯಿಂದ ಬಳಲುತ್ತಿದ್ದ ಅವರ ಪತ್ನಿಯ ಔಷಧೋಪಚಾರಕ್ಕೆ ಮತ್ತು ಮಗನ ಮದುವೆಗೆ ಖರ್ಚಾಗಿ ಹೋಗಿತ್ತು. ಅವರಿಗೆ ಯಾವುದೇ ಚಟಗಳಿರಲಿಲ್ಲ. ಯಾವುದಾದರೂ ಒಳ್ಳೆಯ ಪುಸ್ತಕ ಕಂಡರೆ ತೆಗೆದುಕೊಳ್ಳುತ್ತಿದ್ದರು. ಬರೆಯಬೇಕೆನಿಸಿದಾಗ ಪೆನ್ನೋ ಪೇಪರೋ ತೆಗೆದುಕೊಳ್ಳುತ್ತಿದ್ದರಷ್ಟೆ. ಅವರೊಬ್ಬ ಒಳ್ಳೆಯ ಲೇಖಕರೂ ಆಗಿದ್ದರು.

ಮಾಸ್ತರರಿಗೆ ಆ ಊರಲ್ಲಿ ಒಳ್ಳೆಯ ಹೆಸರಿತ್ತು. ಅವರ ಮಾತೆಂದರೆ ಊರ ಜನಕ್ಕೆ ತುಂಬ ಗೌರವ. ಹಾಗೆಂದೇ ಅವರನ್ನು ಊರೊಳಗಿನ ಜಗಳ, ವಿವಾದಗಳನ್ನು ಬಗೆ ಹರಿಸಲು ಕರೆಯುತ್ತಿದ್ದರು. ಆದರೆ ಮನೆಯಲ್ಲಿ ಇವರ ಪಾಡು...?

"ಹೊರಗಡೆ ಅಂಥಾ ಒಂದು ಗೌರವಾನ್ವಿತ ಸ್ಥಾನ ಸಂಪಾದಿಸಿದವನಿಗೆ ಮನಿಯೊಳಗ್ಯಾಕ ಹಿಂಗ ? ಮಗನ್ನ ಬೆಳೆಸೂದರಾಗ ತಪ್ಪ ಮಾಡಿದಿನೇನು ?" ... ಎಷ್ಟು ಯೋಚಿಸಿದರೂ ಮಾಸ್ತರರಿಗೆ ಏನೂ ತಿಳಿಯುತ್ತಿರಲಿಲ್ಲ. ಸುಮ್ಮನೇ ಯೋಚಿಸಿ ದಣಿಯುತ್ತಿದ್ದರು.

ಅವರು ಕಡುಬಡತನದಲ್ಲೂ ತುಂಬ ಶ್ರದ್ಧೆಯಿಂದ ಓದಿದ್ದರು. ಚಿಕ್ಕವರಿರುವಾಗಲೇ ತಂದೆಯನ್ನು ಕಳೆದುಕೊಂಡು ಅನಾಥನಾದರೂ ತಾಯಿಯ ವಾತ್ಸಲ್ಯ ಮತ್ತು ಧೈರ್ಯ ಅವರಿಗೆ ಬದುಕನ್ನೆದುರಿಸಲು ಬೇಕಾದ ಶಕ್ತಿ ಸಾಮರ್ಥ್ಯಗಳನ್ನು ಒದಗಿಸಿದ್ದವು. ಅಂಥ ತಾಯಿ ಎಲ್ಲರಿಗೂ ಇರಬೇಕು. ಮನದಲ್ಲೇ ಮಣಿದರು; ಯಾಕೋ ಆ ತಾಯಿಯ ಮುಂದೆ ತಮ್ಮ ಈ ನಿರ್ಧಾರ ಅತ್ಯಂತ ಹೇಡಿಯದೆನಿಸಿತು. ತುಂಬ ನಾಚಿಕೆಯಾಗಿ ತಲೆ ತಗ್ಗಿಸಿ, "ಕ್ಷಮಿಸಿಬಿಡವ್ವಾ, ಈ ನಿನ್ನ ಮಗನಲ್ಲಿ ನಿನ್ನಲ್ಲಿದ್ದಂಥಾ ಆ ಗಟ್ಟಿಗತನ ಈಗ ಉಳಿದಿಲ್ಲ" ಎಂದರು.

ಈ ಎಲ್ಲ ಯೋಚನೆಗಳ ಪ್ರವಾಹದೊಳಗೆ ಮಾಸ್ತರರ ನಡಿಗೆ ಎಂದಿಗಿಂತ ಜೋರಾಗಿ, ಅಂತೂ ತಾವಂದುಕೊಂಡ ಜಾಗಕ್ಕೆ ಬಂದು ತಲುಪಿದರು, "ಹ್ಞಾ ! ಇದೇ ಮರ; ನನ್ನ ಪ್ರೀತಿಯ ಬಸರೀ ಮರ", ನಿನ್ನೆಯೇ ಬಂದು ನೋಡಿಕೊಂಡು ಎಲ್ಲಾ ಸರ್ವೇ ಮಾಡಿಕೊಂಡು ಹೋಗಿದ್ದರು. "ಆ ಕೊಂಬೆಗೆ ಹಾಕಿದರ ಏನಾದರೂ ಸರಿ, ಏನೂ ಮಾಡಾಕಾಗೂದಿಲ್ಲ." ಯಾಕೋ ಒಂದು ಸಲ ಆ ಬಸರೀ ಮರಕ್ಕೊರಗಿ ಕೂರಬೇಕೆನಿಸಿತು, ಅದು ಅವರು ಮತ್ತವರ ಗೆಳೆಯರು ವಿದ್ಯಾರ್ಥಿಗಳಾಗಿದ್ದಾಗ ತಮ್ಮ ಗುರು ನಾವಿ ಮಾಸ್ತರರ ನೇತೃತ್ವದಲ್ಲಿ ನೆಟ್ಟಿದ್ದು; ಈಗದು ಬೆಳೆದು ಹೆಮ್ಮರವಾಗಿದೆ. ತನ್ನ ಮಡಿಲೊಳಗೆ ಹತ್ತಾರು ಹಕ್ಕಿ ಪಕ್ಷಿಗಳಿಗೆ ಆಶ್ರಯ ನೀಡಿದೆ, ದಣಿದು ಬಂದ ರೈತರಿಗೆ ನೆರಳು ನೀಡುತ್ತಿದೆ. ಈಗ ನಾನು ಇಂಥ ಕೆಲಸಕ್ಕೆ ಈ ಮರವನ್ನು ಆಯ್ದುಕೊಳ್ಳಬಾರದಿತ್ತು ಎನಿಸಿತು. ಆದರೂ ನಿರ್ಧಾರ ಮಾಡಿಯಾಗಿತ್ತು.

ಸಿಂಗೆ ಮಾಸ್ತರರೆಂದರೆ ಶಿಷ್ಯಬಳಗದ ಪಾಲಿಗೆ ದೇವರಿದ್ದಂತೆ. ಅವರಿಗೆ ಕರ್ನಾಟಕ ಮಾತ್ರವಲ್ಲ ದೇಶದ ತುಂಬೆಲ್ಲ ಶಿಷ್ಯರಿದ್ದರು. ಕೆಲವರು ವಿದೇಶದಲ್ಲೂ ಇದ್ದರು. ಎಲ್ಲರೂ ಒಂದಿಲ್ಲೊಂದು ರೀತಿಯಲ್ಲಿ ಇವರಿಂದ ಜೀವನ ಪಾಠ ಕಲಿತವರೇ. 'ಸಿಂಗೆ ಸರ್ರು' ಎಂದರೆ ಈಗಲೇ ಸಾಯಬೇಕೆನ್ನುವವನನ್ನೂ ಬದುಕಿಸಿಬಿಡಬಲ್ಲ ಜಾದೂಗಾರರೆಂದೇ ಪ್ರಸಿದ್ಧರು ತಮ್ಮ ಶಿಷ್ಯವರ್ಗದಲ್ಲಿ. ಹದಿಹರೆಯದ ಮಕ್ಕಳು ಎದುರಿಸುವ ಅನಾಥ ಪ್ರಜ್ಞೆ, ಗೊಂದಲ, ಖಿನ್ನತೆಯಂತಹ ಮಾನಸಿಕ ಸಮಸ್ಯೆಗಳಿಗೆ ಮಾಸ್ತರರು ಒಬ್ಬ ಮನೋವಿಜ್ಞಾನಿಯಂತೆ ಪರಿಹಾರ ಸೂಚಿಸುತ್ತಿದ್ದರು. ಎಷ್ಟೋ ಶಿಷ್ಯರಿಂದ ಅಂಥ ಸಮಸ್ಯೆಗಳನ್ನು ಹೊತ್ತು ಪತ್ರ ಬಂದಾಗ ಕೂತು ಸಾವಧಾನವಾಗಿ ಅವುಗಳನ್ನು ಓದಿ ತೂಕವಾದ ಉತ್ತರ ಬರೆಯುತ್ತಿದ್ದರು. ಕೆಲವೊಮ್ಮೆ ನಾಡಿನ ಹೆಸರಾಂತ ಪತ್ರಿಕೆಗಳಿಗೆ ಆ ಕುರಿತಂತೆ ಅಮೂಲ್ಯವಾದ ಲೇಖನಗಳನ್ನೂ ಬರೆಯುತ್ತಿದ್ದರು.

"ಛೇ... ಯಾಕೆ ಇವೆಲ್ಲ ಇವತ್ತೇ ನೆನಪಾಗಬೇಕು ? ನಾ ಹೊಂಟಿದ್ದನs ನನ್ನ ಬದುಕಿನ ಯಾತ್ರೆಯನ್ನ ಮುಗಿಸೂ ಸಲುವಾಗಿ, ಥೂ!..." ಮಾಸ್ತರರ ಸಾಮರ್ಥ್ಯ ಮೊಟ್ಟ ಮೊದಲ ಬಾರಿಗೆ ಅವರಲ್ಲಿ ಕಿರಿಕಿರಿಯನ್ನುಂಟುಮಾಡಿತ್ತು. "ಇಲ್ಲ, ಇಂದಿನ ನನ್ನ ನಿರ್ಧಾರ ಅಚಲವಾಗೇತಿ. ಸಾಕಾಗಿ ಹೋಗೇತಿ. ನನ್ನ ಮಗನನ್ನ ನಾವಿಬ್ಬರೂ ಎಷ್ಟು ಕಷ್ಟಾಪಟ್ಟು ಬೆಳೆಸಿದಿವಿ. ಇವಳು ಅವನ ಒಂದೊಂದು ಸಣ್ಣತನಗಳನ್ನೂ ನೆನೆದು ಅಳಕೋತ ಕೂತಬಿಡ್ತಿದ್ದಳು. ಊಟಾ ಸಹಿತ ಮಾಡ್ತಿರಲಿಲ್ಲ. ಮತ್ತ ಅದ ಏನ ಅನಿಸ್ತಿತ್ತೊ ಏನೋ. ತನ್ನೆಲ್ಲ ದುಃಖವನ್ನು ನುಂಗಿ ತಲಿ ಮ್ಯಾಗ ಕೈ ಹೊತ್ತ ನನ್ನನ್ನೇ ಸಮಾಧಾನ ಮಾಡ್ತಿದ್ದಳು. ಅಂಥಾ ಹೇಂತಿ ಸಿಗಬೇಕಾದರ ಪುಣ್ಯ ಮಾಡಿರಬೇಕು. ಅಂಥಾಕಿ ಮನಿಯೊಳಗಿದ್ದರ ಕೋಟಿ ಅಲ್ಲ ಶತಕೋಟಿ ರೂಪಾಯಿನೂ ಏನೇನೂ ಅಲ್ಲ. ನನ್ನ ಜೊತೆ ಎಂಥಾ ಕಲ್ಲು ಮುಳ್ಳು ತುಳ್ಯಾಕೂ ಸದಾ ನಗುಮೊಗದಿಂದ ಸಿದ್ಧವಾಗೇ ಇರ್ತಿದ್ದಳು. ಆದರ ನನ್ನನ್ನ ಹೀಂಗ ಒಂಟಿ ಮಾಡಿ ಹೋಗಿಬಿಟ್ಳು."

ಸೊಸಿ ಒಂದ ಊಟಾ ಹಾಕಾಕೂ ನೂರಾ ಎಂಟ ಮಾತಾಡ್ತಾಳ. ಮೊಮ್ಮಕ್ಕಳ್ನ ಮಾತಾಡ್ಸುವಂಗಿಲ್ಲ, ಅವರ ಜೊತೆ ಆಟಾ ಆಡುವಂಗಿಲ್ಲ, ಅವ್ರನ್ನ ಎಳಕೊಂಡ ಎಳಕೊಂಡ ಹೋಗ್ತಾಳ. ಯಾವಾಗ ನೋಡಿದರೂ ಹೋಂವರ್ಕ್, ಹೋಂವರ್ಕ್ ಅಂತ ಅವರ ತಲಿ ತಿಂತಿರ್ತಾಳ. ಯಾವ ಸೀಮಿ ಹೋಂವರ್ಕೋ ! "ನಾನೂ ಮಾಸ್ತರ ಆಗಿದ್ನೆವಾ ಹಂಗೆಲ್ಲ ಮಕ್ಕಳ ಜೀವಾ ಹಿಂಡಬ್ಯಾಡಾ" ಅಂದ್ರ, "ನಿಮಗೇನ ತಿಳಿತೈತಿ ನೀವು ಹಳೇ ಕಾಲದವರು. ಈಗಿನ ಎಜುಕೇಶನ್ ಬಗ್ಗೆ ನಿಮಗೇನ ಗೊತ್ತೈತಿ" ಅಂತಾಳ. ಮಾಸ್ತರರ ಯೋಚನಾ ಪ್ರವಾಹ ಪಡೆದುಕೊಂಡ ವೇಗಕ್ಕೆ ಅವರಿಗೇ ಅಚ್ಚರಿಯಾಯಿತು.

ಮಾಸ್ತರರ ಸೊಸೆ ಮತ್ತು ಮಗನ ಕೋಪಕ್ಕೆ ಮುಖ್ಯ ಕಾರಣ ಅವರು ತಮ್ಮ ಹೊಲ ಮತ್ತು ಮನೆಯನ್ನು ಮಾರುವುದಿಲ್ಲ ಎಂದದ್ದು. ಊರಲ್ಲಿ ಮಾಸ್ತರರ ಹೆಸರಲ್ಲಿ ಒಂದಿಷ್ಟು ಜಮೀನು ಮತ್ತು ಒಂದು ಮನೆಯಿತ್ತು. ಅವನ್ನು ಮಾರಿ ಆ ದುಡ್ಡಿನಿಂದ ಸಿಟಿಯಲ್ಲಿ ಒಂದು ದೊಡ್ಡ ಮನೆ ಕಟ್ಟಿಸಿ ಅದರಲ್ಲಿ ಅರ್ಧ ಭಾಗವನ್ನು ಬಾಡಿಗೆ ಕೊಟ್ಟು ಇನ್ನರ್ಧದಲ್ಲಿ ತಾವಿರಬೇಕು ಎಂಬುದು ಅವರ ಯೋಜನೆಯಾಗಿತ್ತು, ಆದರೆ ಮಾಸ್ತರರು ಅದಕ್ಕೆ ಒಪ್ಪಲಿಲ್ಲ. "ದಯವಿಟ್ಟು ಬೇಡ. ಅದನ್ನು ಮಾತ್ರ ಮಾರಬ್ಯಾಡ್ರಿ. ಈ ಹೊಲ ಬರೇ ಮಣ್ಣಲ್ಲ, ನಮಗ ಅನ್ನಾ ನೀಡಿದ ದೇವರು; ಅದನ್ನು ಮಾರೂದು ಬ್ಯಾಡ, ಇನ್ನ ಮನಿ, ಅದರೊಳಗ ನಿಮ್ಮವ್ವ, ನಾನು ಬದುಕಿ ಬಾಳೇವಿ, ನಮ್ಮ ಕಷ್ಟ ಸುಖ ಹಂಚಿಕೊಂಡೇವಿ, ಅದ ಮನಿಯೊಳಗ ನೀನೂ ಹುಟ್ಟೇದಿ, ಆಡೇದಿ, ನಮಗ ಈ ಮನಿ ಅಂದ್ರ ಕೇವಲ ಮನಿ ಅಲ್ಲ, ಇದರ ಕೂಡ ನನಗ ಭಾವನಾತ್ಮಕ ಸಂಬಂಧ ಐತಿ ಅರ್ಥಾ ಮಾ... ಈ ಮನಿಯೊಳಗ ನಿಮ್ಮವ್ವ ಜೀವಾ ಬಿಟ್ಟಾಳ." ಮಾಸ್ತರರು ಭಾವುಕರಾಗಿದ್ದರು. "ಹ್ಯಾಂಗೂ ನೀವಿಬ್ಬರೂ ನೌಕರಿ

## ಸುದ್ದಿಚಿತ್ರ

ಎಂ. ಎಸ್. ಕೃಷ್ಣನ್ ಸ್ಮರಣಸಂಸ್ಥೆ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಅಖಿಲ ಕರ್ನಾಟಕ ವಿಚಾರವಾದಿಗಳ ಸಂಘ ಮುಂತಾದ ವಿವಿಧ ಪುರೋಗಾಮಿ ಸಂಘಗಳು ಜಂಟಿಯಾಗಿ ''ಕರ್ನಾಟಕ ಮೂಢನಂಬಿಕೆ ಪ್ರತಿಬಂಧಕ ಕಾಯ್ದೆಯ ಅನುಷ್ಠಾನ – ಒಂದು ಚರ್ಚೆ'' ಕಾರ್ಯಕ್ರಮವನ್ನು ಇತ್ತೀಚೆಗೆ ಆಯೋಜಿಸಿದ್ದವು. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ವಿಜ್ಞಾನ ಭವನ, ಬೆಂಗಳೂರು – ಇಲ್ಲಿ ನಡೆದ ಈ ಚರ್ಚಾಗೋಷ್ಠಿಯನ್ನು ಪ್ರೊ|| ಎಂ. ಎಂ. ಕಲಬುರ್ಗಿ (ವಿಶ್ರಾಂತ ಕುಲಪತಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ) ಉದ್ಘಾಟಿಸಿದರು. ಗೋಷ್ಠಿಯ ಅಧ್ಯಕ್ಷತೆಯನ್ನು ಹಿರಿಯ ಸಾಹಿತಿ – ಚಿಂತಕರಾದ ಡಾ|| ಜಿ. ರಾಮಕೃಷ್ಣ ವಹಿಸಿದ್ದು, ಮುಖ್ಯ ಉಪನ್ಯಾಸಕಿಯಾಗಿ ಶ್ರೀಮತಿ ಮುಕ್ತಾ ದಾಭೋಲ್ಕರ್ (ಮಹಾರಾಷ್ಟ್ರದ ಅಂಧಶ್ರದ್ಧಾ ನಿರ್ಮೂಲನ ಸಮಿತಿ) ಭಾಗವಹಿಸಿ ಮಾತನಾಡಿದರು.





ಮಾಡ್ತೀರಿ. ಬೇಕಾದಷ್ಟ ಪಗಾರ ಐತಿ. ನಿಮಗ ಮನಿಸಿಗಿ ಬಂದಂಥಾದ್ದನ್ನ ನೀವ ಕಟ್ಟಿಸಿಕೊಳ್ರಿ" ಎಂದಿದ್ದರು. ಅದೇ ಈ ರೀತಿ ಇರಿಸು ಮುರುಸುಗಳಿಗೆ ಕಾರಣ ಆಯ್ತು. ಇದೇ ವಿಷಯಕ್ಕೆ ದಿನವೂ ರಂಪ ರಾಮಾಯಣಗಳು ನಡೆಯುತ್ತಲೂ ಇದ್ದವು. ಮಗ ಪಕ್ಕದ ಪಟ್ಟಣದೊಳಗ ಬ್ಯಾಂಕ್ ಮ್ಯಾನೇಜರ್. ಸೊಸೆ ಅದೇ ಊರಲ್ಲಿ ಶಿಕ್ಷಕಿ, ಹೀಗಿದ್ದೂ ಈ ಒಂದು ಸಣ್ಣ ಆಸ್ತಿಯೂ ತಮ್ಮ ಕರುಳ ಸಂಬಂಧದಲ್ಲಿ ಇಷ್ಟು ದೊಡ್ಡ ಕಂದಕವನ್ನು ನಿರ್ಮಿಸುತ್ತದೆಂದು ಮಾಸ್ತರರು ಕನಸುಮನಸಿನಲ್ಲಿಯೂ ಯೋಚಿಸಿರಲಿಲ್ಲ. ದಿನವೂ ಕೊಂಕು ಮಾತು, ಹಂಗಿಸುವುದು, "ಎಲ್ಲರಿಗೂ ಪೆನ್ಶನ್ ಬರತೈತಿ. ಇವರದೆಂಥ ನೌಕರಿ ? ಪೆನ್ಶನ್ ಬರುವುದಿಲ್ಲಂತ, ಎಲ್ಲಾ ಸುಳ್ಳು. ರಿಟೈರ್ಡ್ ಆದಾಗ ಬಂದದ್ದೆಲ್ಲ ಅತ್ತೆ ಔಷಧಕ್ಕೆ ದವಾಖಾನಿಗೆ ಖರ್ಚಾತಂತ. ಎಷ್ಟ ಖರೇನೋ ಎಷ್ಟ ಸುಳ್ಳೋ" ಎಂದು ಸದಾ ತನ್ನ ತಾಯಿಯೊಂದಿಗೆ ಫೋನಿನಲ್ಲಿ ಮಾತನಾಡುತ್ತಿದ್ದಳು. "ಯಾಕವಾ, ಎಲ್ಲಾನೂ ತವರಮನಿಗೆ ಹೇಳ್ತೀ ?" ಅಂದದ್ದಷ್ಟೆ. "ನನಗೇನಿಲ್ಲಿ ಬೆಲೆ ಐತಿ. ನಾನೊಂದು ಕೆಲಸಾ ಮಾಡು ಗೊಂಬಿ ಅಷ್ಟ" ಎಂದು ಅಳತೊಡಗಿದವಳನ್ನು ಕಂಡ ಮಗ ಮತ್ತಷ್ಟು ವ್ಯಗ್ರನಾಗಿ ತಂದೆಯ ಮೇಲೆ ಕೂಗಾಡಿದ್ದ, ಕೈ ಮಾಡಲೂ ಬಂದ !! ಹೀಗೆ ದಿನವೂ ಸಾಯುವುದಕ್ಕಿಂತ ಒಂದೇ ಸಲ ಸತ್ತುಬಿಡುವುದೆಂದಲ್ಲವೇ ಈ ಮರ ಹುಡುಕಿರುವುದು ?




ಮಾಸ್ತರರದು ತುಂಬ ಶಿಸ್ತಿನ ಜೀವನ. ದಿನವೂ ಬೆಳಿಗ್ಗೆ ಬೇಗ ಏಳುವರು, ಒಂದು ಗಂಟೆ ವಾಕಿಂಗ್. ಅದೂ ಅವರ ಪ್ರೀತಿಯ ಚಳಮಾರ ಹಾದಿಯ ಗುಂಟ. ಮತ್ತೆ ಇದೇ ಬಸರೀ ಮರದ ಕೆಳಗೆ ಕುಳಿತು ಒಂದಿಷ್ಟು ವಿಶ್ರಾಂತಿ. ತಂದೆ ತಾಯಿ ಕೂಲಿ ನಾಲಿ ಮಾಡಿ ತಮ್ಮನ್ನು ಸಾಕಿದ್ದರು. ಹೇಗೋ ಕಷ್ಟಪಟ್ಟು ಓದಿದ ಮೇಲೆ ಇವರಿಗೆ ನೌಕರಿ ಅಂತಾ ಸಿಕ್ಕಿದ್ದು ದೂರದ ರಾಜಸ್ಥಾನದಲ್ಲಿ. ಅದಾಗಲೇ ಕ್ಯಾನ್ಸರ್‌ಗೆ ತುತ್ತಾದ ಅಪ್ಪ. ದುಡಿದುಡಿದು ಹಣ್ಣಾದ ತಾಯಿ, ಮೂರು ಜನ ತಮ್ಮಂದಿರ ಓದಿನ ಭಾರವನ್ನೂ ಮನೆಯ ಖರ್ಚನ್ನೂ ಅಪ್ಪನ ಔಷಧೋಪಚಾರದ ವೆಚ್ಚವನ್ನೂ ತುಂಬ ಚಿಕ್ಕ ವಯಸ್ಸಿನಲ್ಲೇ ಹೊರಬೇಕಾಯಿತು. ಅದಕ್ಕೆಂದೇ ಎಷ್ಟು ದೂರವಾದರೂ ಪರವಾಗಿಲ್ಲ ಹೋಗೇ ಬಿಡಬೇಕೆಂದು ಹೋದವರು, ಎಷ್ಟೆಲ್ಲ ರಿಸ್ಕುಗಳ ಮಧ್ಯೆ ಬಾಳಿ ಬದುಕಿ ಅಲ್ಲಿಯೂ ಸೈ ಎನ್ನಿಸಿಕೊಂಡರು.

ಸರಿ ಕತ್ತಲಾಗುತ್ತ ಬಂತು. ಇನ್ನು ಹೆದರುವ ಕಾರಣವಿಲ್ಲ, ನೋಡಲು ಯಾರೂ ಇಲ್ಲ, ಆರಾಮಾಗಿ ಜೀವ ಬಿಡಬಹುದು ಎಂದುಕೊಂಡಂತೆ ಮಾಸ್ತರರಿಗೆ ಸ್ವಲ್ಪ ನಿರಾಳ ವಾಯಿತು. ಅವರು ಬಸರೀ ಮರವನ್ನು ನೋಡುತ್ತಿದ್ದಂತೆ ಯಾವುದೋ ಒಂದು ಕಾರು ಊರ ಕಡೆಗೇ ಹೋದಂತೆ ಕಂಡಿತು. ಈ ಹೊತ್ತಿನಲ್ಲಿ ಅದೂ ನಮ್ಮೂರಿಗೆ ಕಾರು ಬರುವುದೆಂದರೆ ಯಾರದಿರಬಹುದು ? ಎಂದು ಯೋಚಿಸತೊಡಗಿದರು. ಮತ್ತೆ "ಛೇ ! ಅದೆಲ್ಲ ಈಗ ನನಗ್ಯಾಕೆ ?" ಎಂದುಕೊಂಡು ತಾವು ಮೊದಲೇ ಗುರುತಿಟ್ಟುಕೊಂಡಿದ್ದ ಟೊಂಗೆಗೆ ಹಗ್ಗ ಹಾಕತೊಡಗಿದರು. ತಾನು ದಿನವೂ ಬಂದು ಕೂತು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ ಈ ಬಸರೀ ಮರ ಇಂದು ತನಗೆ ಶಾಶ್ವತವಾದ ವಿಶ್ರಾಂತಿಗೂ ಸಹಾಯ ಮಾಡುತ್ತಿದೆ ಎಂದುಕೊಂಡು ಒಂದು ಸಲ ನಕ್ಕರು. ಆದರದು ನಗೆಯಂತಿರಲಿಲ್ಲ. ಈ ಬಸರೀ ಮರದ ಕೆಳಗೆ ಕುಳಿತು ತಾನು ಮತ್ತು ತಮ್ಮ ಗೆಳೆಯ ಮಹೇಶಪ್ಪ ಕಷ್ಟ ಸುಖ ಹಂಚಿಕೊಳ್ಳುತ್ತಿದ್ದುದು ನೆನಪಾಯಿತು. ಮಹೇಶಪ್ಪ , ಮಾಸ್ತರರ ಏಕೈಕ ಆತ್ಮೀಯ ಲಂಗೋಟಿ ಗೆಳೆಯ. ಅವರಿಬ್ಬರ ದೋಸ್ತಿ ನೋಡಿದವರು ಹೊಟ್ಟೆಕಿಚ್ಚು ಪಡುವಂತಿತ್ತು. ಆದರೆ ಆತ ಕುಡಿತದ ಚಟಕ್ಕೆ ಅಂಟಿಕೊಂಡು ಕರುಳಿನ ಕ್ಯಾನ್ಸರ್‌ನಿಂದ ತೀರಿಕೊಂಡ. ಅವ ಹೋದ ನಂತರ ಮಾಸ್ತರರು ಒಂಟಿಯಾಗಿದ್ದರು, ಲೋಕಕ್ಕೇ ಪಾಠ ಹೇಳಿ, ಎಷ್ಟೋ ಶಿಷ್ಯರ ಸಮಸ್ಯೆಗಳಿಗೆ ಪರಿಹಾರ ಸೂಚಿಸಿ ಅವರ ಬದುಕು ರೂಪಿಸಿದ ತನಗೆ ತನ್ನ ಜೀವದ ಗೆಳೆಯನ ಒಂದೇ ಒಂದು ದೌರ್ಬಲ್ಯವನ್ನೂ ಬಿಡಿಸಲು ಸಾಧ್ಯವಾಗಲಿಲ್ಲವಲ್ಲ ಎಂಬ ಕೊರಗಿನಿಂದ ಮಾಸ್ತರರು ಇನ್ನಷ್ಟು ದುರ್ಬಲ ರಾದಂತಾಗಿದ್ದರು. ಪತ್ನಿ ಹೋದ ಮೇಲೆ ತನ್ನ ಕಷ್ಟ ಸುಖಗಳನ್ನು ಕೇಳುವ ಒಂದೇ ಒಂದು ಜೀವ ಎಂದರೆ ಅವನೇ ಆಗಿದ್ದ ಮಾಸ್ತರರಿಗೆ.

ಸರಿ ಟೊಂಗೆಗೆ ಹಗ್ಗ ಹಾಕಿದರು. ಕೆಳಗಿನ ಹಗ್ಗದ ತುದಿಗೆ ಗಂಟು ಹಾಕುವುದು ಹೇಗೆಂದು ಯೋಚಿಸುತ್ತಲೇ ಮತ್ತೆ ಅದೇ ಆ ಕಾರು ಅದರ ಢಾಳವಾದ ಲೈಟು ಗಳೊಂದಿಗೆ ಇತ್ತಲೇ ಬರುತ್ತಿರುವಂತೆ ಕಂಡಿತು. ಮಾಸ್ತರರಿಗೆ ದಿಗಿಲಾಯಿತು, ಅರೇ ಇದು ಅದೇ ಕಾರಲ್ಲವೇ? ಈಗ ಐದು ನಿಮಿಷಕ್ಕೆ ಮುಂಚೆ ಹೋದದ್ದು? ಈ ಕಡೆಯೇ ಬರುತ್ತಿದೆಯಲ್ಲ ? ಎಂದು ಕೊಳ್ಳುತ್ತಲೇ ಆ ಕಾರು ಇವರಿದ್ದ ಬಸರೀ ಗಿಡಕ್ಕೆ ಕೊಂಚವೇ ದೂರದಲ್ಲಿ ನಿಂತಿತು. ಯಾರೋ ಒಬ್ಬ ವ್ಯಕ್ತಿ ಕಾರಿನಿಂದಿಳಿದು ತಮ್ಮತ್ತಲೇ ಧಾವಿಸುತ್ತಿರುವಂತೆ ಕಂಡುಬಂತು. ಸಾವಿನ ಬಾಗಿಲನ್ನು ತಟ್ಟುವ ಆ ಭಯಂಕರ, ದಿಟ್ಟ ಸಂದರ್ಭದಲ್ಲೂ ಮಾಸ್ತರರಿಗೆ ಒಮ್ಮೆ ಎದೆ ಝಲ್ ಎಂದಿತು. "ಇದೇನಿದು ನಾನು ಸಾಯುವುದು ಯಾರಿಗಾದರೂ ಗೊತ್ತಾಗಿ ಹೋಯ್ತೋ ?!!" ಎಂದುಕೊಳ್ಳುವಷ್ಟರಲ್ಲಿ ಆ ವ್ಯಕ್ತಿ ಮತ್ತಷ್ಟು ಹತ್ತಿರ ಬರುತ್ತ "ನಮಸ್ಕಾರ ಸರ್" ಎಂದಿತು. ಈಗ ಮಾತ್ರ ಮಾಸ್ತರರಿಗೆ ಏನು ಮಾಡಬೇಕೆಂಬುದೇ ತಿಳಿಯದೆ ತುಂಬ ಗೊಂದಲಕ್ಕೊಳಗಾಗಿ ಮರದ ರೆಂಬೆಗೆ ಹಾಕಿದ ಹಗ್ಗವನ್ನು ಅವಸರವಸರವಾಗಿ ಎಳೆದು ಅತ್ತ ಬಿಸಾಕಿದರು. ಕೃತಕ ನಗೆಯನ್ನು ಬೀರುತ್ತ, "ನಮಸ್ಕಾರ. ಯಾರು ?" ಎಂದರು. ಬಂದವ ನೇರವಾಗಿ ಮಾಸ್ತರರ ಕಾಲು ಮುಟ್ಟಿ ನಮಸ್ಕರಿಸಿ ಅವರ ಪಕ್ಕದಲ್ಲಿ ಕುಳಿತುಕೊಂಡ. "ಸರ್, ನಾನು ನಿಮ್ಮ ಶಿಷ್ಯ ಮೋಹನ್, ಗುರುತು ಸಿಕ್ತಾ ?" ಅಂದ. ಮಾಸ್ತರರ ನೆನಪಿನ ಶಕ್ತಿಯೂ ಅದ್ಭುತವೇ. ನೆನಪಿಸಿಕೊಂಡರು. ಮೋಹನ್ ಒಂದು ವರ್ಷಕ್ಕಾಗಿ ಮೈಗ್ರೇಶನ್ ಸ್ಕೀಮಿ (ವಲಸೆ ಪದ್ಧತಿ)ನಲ್ಲಿ ಮಾಸ್ತರರಿದ್ದ ರಾಜಸ್ತಾನದ ಶಾಲೆಗೆ ಬಂದಿದ್ದ ತುಮಕೂರು ಕಡೆಯ ಹುಡುಗ. ಓದಿನಲ್ಲಿ ತುಂಬ ಬುದ್ಧಿವಂತ, ಬಾಲ್ಯದಲ್ಲೇ ತಂದೆಯನ್ನು ಕಳೆದುಕೊಂಡು ಅವನನ್ನು ಓದಿಸಲು ತಾಯಿ ಪಡುತ್ತಿದ್ದ ಕಷ್ಟಗಳನ್ನು ನೆನೆನೆನೆದು ಸದಾ ರೋದಿಸುತ್ತಿದ್ದ. ಹಾಗೆ ಅಳುವಾಗಲೆಲ್ಲ ಮಾಸ್ತರರೇ ಅವನಿಗೆ ಸಮಾಧಾನ ಮಾಡುತ್ತಿದ್ದರು. ಮಾಸ್ತರರ ಹೆಂಡತಿ ಅವನಿಗೆ ಊಟ, ತಿಂಡಿ ಎಲ್ಲ ಕೊಟ್ಟು ತಾಯ ಮಮತೆ ತೋರಿಸುತ್ತಿದ್ದರು. ಆ ಶಾಲೆಯಿಂದ ಹೆಚ್ಚಿನ ಶಿಕ್ಷಣಕ್ಕೆಂದು ಕರ್ನಾಟಕಕ್ಕೆ ಬಂದ ನಂತರದ ದಿನಗಳಲ್ಲಿ ಅವನು ಮಾನಸಿಕವಾಗಿ ತುಂಬ ತೊಳಲಾಟಕ್ಕೆ ಸಿಕ್ಕು, ಇವರಿಗೆ ಪತ್ರ ಬರೆದಿದ್ದ, ಆಗ ಇವರೇ ಅವನಿಗೆ ಧೈರ್ಯ ತುಂಬುವ ಮಾತುಗಳನ್ನು ಬರೆದಿದ್ದರು. ಅವನೊಮ್ಮೆ, "ಸರ್, ನಿಮ್ಮ ಪತ್ರ ನನ್ನ ಜೀವ ಉಳಿಸಿತು" ಎಂದೂ ಬರೆದಿದ್ದ.

"ನಾನು ಮೊದ್ಲು ನಿಮ್ಮ ಮನೆಗೆ ಹೋದೆ ಸರ್, ಅಲ್ಲಿ ನಿಮ್ಮ ಮಗ ಮತ್ತು ಸೊಸೆ ಹೇಳಿದರು ನೀವು ವಾಕಿಂಗ್ ಹೋಗಿದ್ದೀರಿ ಅಂತ. ಹಾಗೇ ಸೀದಾ ಕಾರು ತಿರುಗಿಸಿಕೊಂಡು ಇಲ್ಲಿಗೇ ಬಂದ್‌ಬಿಟ್ಟೆ. ದಾರೀಲಿ ಕೇಳಿದಾಗ ನೀವು ಇಲ್ಲೇ ಕೂತಿರ್ತೀರಿ ಈ ಮರದ ಕೆಳಗೆ ಅಂತಾ ಯಾರೋ ಈ ಮರ ತೋರ್ಸಿದ್ರು. ಸೀದಾ ಬಂದೆ. ಸರ್, ಇಷ್ಟು ದಿನಗಳಿಂದ ಪತ್ತೇ ಇಲ್ಲದವ ಈಗ ನೆನಪಿಸಿಕೊಂಡಿದ್ದಾನೆಂದು ಬಯ್ಕೋಬೇಡಿ. ನಿಮ್ಮ ಆಶೀರ್ವಾದದಿಂದ ನಾನೀಗ ಒಂದು ಸಾಫ್ಟ್‌ವೇರ್ ಕಂಪನಿಯಲ್ಲಿ ಎಂ. ಡಿ. ಆಗಿದ್ದೀನಿ. ನನಗೆ ಒಬ್ಬ ಮಗ ಇದ್ದಾನೆ. ಮೈಸೂರಲ್ಲಿದ್ದೇವೆ. ನಮ್ಮ ತಾಯಿ ಕಳೆದ ವರ್ಷ ಹೋಗ್ಬಿಟ್ರು. ನಾನು ಪದೇ ಪದೇ ನಿಮ್ಮ ಬಗ್ಗೆ ಹೇಳುವುದನ್ನು ಕೇಳಿ ನನ್ನ ಶ್ರೀಮತಿಗೂ ನಿಮ್ಮನ್ನು ನೋಡುವ ಆಸೆ. ನಿಮಗೆ ಗೊತ್ತಾ ಸರ್, ನಿಮ್ಮ ಆದರ್ಶಗಳ ಕಟ್ಟಾ ಪರಿಪಾಲಕ ನಾನು. ತಂದೆಯನ್ನು ಕಳಕೊಂಡು ಅನಾಥನಾಗಿ ಬೆಳೆದ ನಾನು ಅನಾಥಾಶ್ರಮವೊಂದರಲ್ಲಿ ಇದ್ದು ಓದುತ್ತಿರುವ ಹುಡುಗಿಯನ್ನೇ ಹುಡುಕಿ ಮದುವೆಯಾಗಿದ್ದೇನೆ. ಒಟ್ಟಾರೆ ನನ್ನ ಮಗ ಮತ್ತು ಪತ್ನಿಗೆ ನಿಮ್ಮನ್ನು ತೋರಿಸಬೇಕು. ಚಿಕ್ಕ ಮನೆ ಕಟ್ಟಿದ್ದೇನೆ. ತಾವು ದಯವಿಟ್ಟು ಬಂದು ಆಶೀರ್ವಾದ ಮಾಡಲೇಬೇಕು" ... ಆತ ಮಾತಾಡುತ್ತಲೇ ಇದ್ದ. ಮಾಸ್ತರರು ಬಾಯಿಂದ ಮಾತು ಬಾರದೇ ಸುಮ್ಮನೇ ಕೇಳುತ್ತಲೇ ಇದ್ದರು.

"ಮತ್ತೆ ಹೇಗಿದ್ದೀರಿ ? ಸರ್, ಆಂಟಿ ಹೋಗಿದ್ದು ತುಂಬ ತಡವಾಗಿ ಗೊತ್ತಾಯ್ತು. ಬರೋದಕ್ಕೆ ಆಗ್ಲಿಲ್ಲ. ಸಾರೀ ಸರ್. ಆಂಟಿ. ನಮ್ಮ ಪಾಲಿಗೆ ಸ್ವಂತ ತಾಯಿ ಇದ್ದ

ಹಾಗಿದ್ರು." ಆ ಹುಡುಗ ಕಣ್ಣೊರೆಸಿಕೊಂಡ. ಆತ ಟೈಟಾಗಿರೋ ಜೀನ್ಸ್ ಪ್ಯಾಂಟ್ ಹಾಕಿಕೊಂಡಿದ್ದರೂ ಒಳ್ಳೆ ಮಗುವಿನಂತೆ ಮಾಸ್ತರರೆದುರಿಗೆ ಕುಳಿತಿದ್ದ. "ನೀವೇ ಸರ್ ನನ್ನ ಉಳಿಸಿದವ್ರು. ಒಂದು ವೇಳೆ ನೀವು ಸಕಾಲದಲ್ಲಿ ಆ ಒಂದು ಪತ್ರವನ್ನು ಬರೀದೇ ಹೋಗಿದ್ರೆ ಬಹುಶಃ ನಾನು ಯಾವತ್ತೋ ಸತ್ತೇ ಹೋಗಿರ್ತಿದ್ದೆ." ಆತ ಕೃತಜ್ಞತೆಯಿಂದ ಕಣ್ತುಂಬಿಕೊಂಡು "ಈ ಬದುಕು, ಅದು ನಿಮ್ಮದೇ ಸರ್" ಎಂದು ಅವರ ಪಾದ ಮುಟ್ಟಿ ಮತ್ತೊಮ್ಮೆ ನಮಸ್ಕರಿಸಿದ. ಮಾಸ್ತರರು ಅವನನ್ನು ಬಲವಾಗಿ ತಬ್ಬಿಕೊಂಡರು, ಬೇಡ ಬೇಡವೆಂದರೂ ಅವರ ಕಣ್ಣುಗಳಲ್ಲಿ ನೀರು ತುಂಬಿ ಪ್ರವಹಿಸತೊಡಗಿದವು. ಶತಶತಮಾನಗಳಿಂದಲೂ ಕೂಡಿಟ್ಟ ಮಡುವು ಒಡ್ಡೊಡೆದು ಒತ್ತರಿಸಿ ಬರುವಂತೆ ಅವರು ಬಿಕ್ಕಿ ಬಿಕ್ಕಿ ಅಳತೊಡಗಿದರು. ಅದರಲ್ಲಿ ದುಃಖದ ಪಾಲೆಷ್ಟಿತ್ತೋ, ಸಂತೋಷದ್ದೆಷ್ಟೋ, ಪಶ್ಚಾತ್ತಾಪದ ಪಾಲೆಷ್ಟಿತ್ತೋ ವಿಂಗಡಿಸಲು ಸಾಧ್ಯವಿರಲಿಲ್ಲ.

✶ ✶ ✶

"ಬನ್ನಿ ಸರ್. ಇವನೇ ನನ್ನ ಮಗ, ಇವಳು ನನ್ನ ಮಿಸ್ಸೆಸ್". ಅವನ ಹೆಂಡತಿ ಮಾಸ್ತರರ ಕಾಲು ಮುಟ್ಟಿ ನಮಸ್ಕರಿಸಿದಳು. ತುಂಬ ಆಧುನಿಕವೆನ್ನಿಸಬಹುದಾದ ಐಷಾರಾಮಿ ಮನೆ. "ಒಂದು ಸಲವಾದ್ರೂ ನಿಮ್ಮನ್ನು ಈ ಮನೆಗೆ ಕರ್‍ಕೊಂಡ ಬರ್‍ಬೇಕು ಅಂತ ಕನಸು ಇತ್ತು ಸರ್; ಅದು ಈವತ್ತು ಕೈಗೂಡಿತು." ವೈಭವಪೂರಿತ ಶ್ರೀಕೃಷ್ಣನ ಮನೆಗೆ ಸುದಾಮ ಬಂದಂತಾಗಿತ್ತು ಮಾಸ್ತರರ ಸ್ಥಿತಿ. ಕಂಪ್ಯೂಟರ್ ಮುಂದೆ ಮೋಹನನ ಮಗು ಕುಳಿತಿತ್ತು, ಮೂರನೇ ಕ್ಲಾಸಿನಲ್ಲಿ ಓದುತ್ತಿರಬಹುದು. ಅದಾಗಲೇ ಕಂಪ್ಯೂಟರನ್ನು ಧಾರಾಳವಾಗಿ ಬಳಸುತ್ತಿದ್ದ. ಸ್ನಾನ ಮುಗಿಸಿ ಬಂದ ಮೇಲೆ ಮಾಸ್ತರರು ನೋಡಿದರು. ಅಂದು ಶಾಲೆಗೆ ರಜೆಯಿದ್ದದ್ದರಿಂದ ಹುಡುಗ ಇನ್ನೂ ಕಂಪ್ಯೂಟರ್ ಮುಂದೆಯೇ ಕುಳಿತಿದ್ದ. "ಮಗು ಏನ್ ಮಾಡಾಕತ್ತೀದಿ ?" ಎಂದು ಪ್ರಶ್ನಿಸಿದರು. ಹುಡುಗ ಉತ್ಸುಕನಾಗಿ, "ತಾತಾ, ಇದು ಕಂಪ್ಯೂಟರ್. ನಿಮಗ ಆಪರೇಟ್ ಮಾಡೋಕೆ ಬರುತ್ತಾ ?" ಎಂದ. 'ತಾತಾ' ಎಂದು ಆತ್ಮೀಯವಾಗಿ ಸಂಬೋಧಿಸಿದ್ದ ಆ ಮಗುವಿನ ಪ್ರೀತಿಗೆ ಮಾಸ್ತರರು ಕರಗಿಹೋದರು. ಮಾಸ್ತರರಿಗೆ ಕಂಪ್ಯೂಟರ್‌ನ ಬಳಕೆ ಅಲ್ಪಸ್ವಲ್ಪ ಗೊತ್ತಿತ್ತು. ಆದರೂ ಇಂಟರ್‌ನೆಟ್ ಅಷ್ಟಾಗಿ ತಿಳಿದಿರಲಿಲ್ಲ. "ಅಯ್ಯೋ, ಅದಕ್ಕೇನಂತೆ ನಿಮಗೆ ನಾನ್ ಹೇಳಿ ಕೊಡ್ತೀನಿ ಬನ್ನಿ" ಎಂದು ಪಾಠ ಶುರುಮಾಡೇ ಬಿಟ್ಟ ಹುಡುಗ. "ನೋಡಿ, ಇದು ಫೇಸ್‌ಬುಕ್ ಅಂತ. ಇದರಲ್ಲಿ ನಾವು ನಮ್ಮ ಫ್ರೆಂಡ್ಸ್‌ಗಳನ್ನ ನೋಡಬಹುದು, ಮಾಡ್ಕೋಬಹುದು..." ಹುಡುಗ ಹೇಳುತ್ತ ಹೋದಂತೆ ಮಾಸ್ತರರಿಗೆ ಯಾವುದೋ ಮಾಯಾಲೋಕವೊಂದನ್ನು ಹೊಕ್ಕ ಅನುಭವವಾಯಿತು.

✶ ✶ ✶

ಬೆಳಿಗ್ಗೆ ಲ್ಯಾಪ್‌ಟಾಪ್ ಆನ್ ಮಾಡಿದಾಗ ಸಿಂಗೆ ಮಾಸ್ತರರಿಗೆ ೯೮ ಫ್ರೆಂಡ್ಸ್ ರಿಕ್ವೆಸ್ಟ್‌ಗಳು ಬಂದಿದ್ದವು. ಮಾಸ್ತರರಿಗೆ ಆಶ್ಚರ್ಯ!! ಮತ್ತು ಎದೆ ಹಿಡಿಯಲಾಗದಷ್ಟು ಸಂತೋಷ. ಎಲ್ಲವನ್ನೂ ಅಕ್ಸೆಪ್ಟ್ ಮಾಡಿಕೊಂಡರು. ಮರುದಿನ ೧೧೫, ಅದರ ಮರುದಿನ ೯೫. ಹೀಗೇ ಅವರ ಫ್ರೆಂಡ್ಸ್ ಸಂಖ್ಯೆ ಬೆಳೆಯುತ್ತ ೫೦೦ಅನ್ನೂ ದಾಟಿತು. ಎಲ್ಲರೂ ಅವರ ಶಿಷ್ಯರೇ. ಕೆಲವರು ನೆನಪಿದ್ದಾರೆ. ಕೆಲವರು ಮರೆತುಹೋಗಿದ್ದಾರೆ. ಆದರೂ ಬಹಳಷ್ಟು ಶಿಷ್ಯರನ್ನು ಅವರ ಫೋಟೋ ಸಹಿತ ನೋಡಿದರು. ಅವರು ಕೆಲಸ ಮಾಡುವ ಸಂಸ್ಥೆ, ಅಲಂಕರಿಸಿದ ಹುದ್ದೆ, ಎಲ್ಲವೂ ಮಾಸ್ತರರ ಕೈಗೆಟುಕಿತು. ಮಾಸ್ತರರ ಆನಂದಕ್ಕೆ ಪಾರವೇ ಇಲ್ಲ, ಹಲವರು ವೈದ್ಯರಾಗಿದ್ದಾರೆ. ಹಲವರು ಇಂಜಿನಿಯರುಗಳಾಗಿದ್ದಾರೆ. ಕೆಲವರು ಕಾಲೇಜು ಉಪನ್ಯಾಸಕರು, ಕೆಲವರು ಹೆಸರಾಂತ ವಿಶ್ವವಿದ್ಯಾನಿಲಯಗಳಲ್ಲಿ ಪ್ರೊಫೆಸರ್‌ಗಳು. ಕೆಲವರು ಕಂಪನಿಗಳಲ್ಲಿ ದುಡಿಯುತ್ತಿದ್ದರೆ, ಕೆಲವರು ಕಂಪನಿಗಳನ್ನು ನಡೆಸುತ್ತಿದ್ದಾರೆ. ಕೆಲವರು ತಮ್ಮದೇ ಆದ ಶಾಲೆ ತೆರೆದಿದ್ದಾರೆ. ಎಲ್ಲರೂ "ಸರ್, ನಿಮ್ಮ ಆಶೀರ್ವಾದದಿಂದಲೇ ನಾವು ಈ ಎತ್ತರಕ್ಕೆ ಏರಿದ್ದೇವೆ" ಎಂಬಂತಹ ಮಾತುಗಳನ್ನು ಬರೆದಿದ್ದರು. ಮಾಸ್ತರರಿಗೆ "ಛೇ ! ನಾನೆಂಥ ತಪ್ಪು ಮಾಡುತ್ತಿದ್ದೆ ? ವೃಥಾ ಸತ್ತುಹೋಗುತ್ತಿದ್ದೆನಲ್ಲಾ ? ಸುಮ್ಮನೇ ಹೋಗಿಬಿಟ್ಟಿದ್ದರೆ ಶಿಷ್ಯರ ಈ ಉನ್ನತಿ, ಅವರುಗಳ ಪ್ರೀತಿವಿಶ್ವಾಸಗಳನ್ನು ನೋಡಲು ಸಾಧ್ಯವಾಗುತ್ತಿತ್ತೇ ?" ಎಂದಿತು ಅವರ ಒಳಮನಸ್ಸು .

ಕೆಲವು ಶಿಷ್ಯರು, "ನೀವು ನಮ್ಮ ಮನೆಯಲ್ಲೇ ಬಂದು ಇರಿ, ಎಂದರು. ಕೆಲವರು ಸರ್, ನಮ್ಮ ವಿದ್ಯಾಸಂಸ್ಥೆಗೆ ಸಹಾಯಕ ನಿರ್ದೇಶಕರಾಗಿ ಎಂದರು. ಕೆಲವರು, "ನಮ್ಮ ಸಂಸ್ಥೆಗೆ ಚೇರ್‌ಮನ್ ಆಗಿ" ಎಂದರು. ಗೌರವ ಸಲಹೆಗಾರರಾಗಿ ಎಂದರು. ಮನೆಯವರಿಂದ "ನಿಷ್ಪ್ರಯೋಜಕ, ನಾಯಿ," ಎಂದೆಲ್ಲ ಹಂಗಿಸಿಕೊಂಡಿದ್ದ ಮಾಸ್ತರರಿಗೆ ತಮಗೆ ಇಷ್ಟೊಂದು ಮಟ್ಟದ ಪ್ರೀತ್ಯಾದರಗಳು ಸಿಗುತ್ತವೆಂದು ಭಾವಿಸಿರಲೇ ಇಲ್ಲ. ಅವರು ತುಂಬ ಸ್ವಾಭಿಮಾನಿ, ಯಾರಿಗೂ ಹೊರೆಯಾಗಲು ಇಚ್ಛಿಸುವವರಲ್ಲ. ಅಂಥವರು 'ಬಾ' ಎಂದಾಕ್ಷಣ ಹೊರಟುಬಿಡುತ್ತಾರೆಯೇ ? ಹಲವಾರು ಷರತ್ತುಗಳನ್ನು ಹಾಕಿ ತಮಗೆ ದುಡಿಮೆಗೆ ತಕ್ಕಷ್ಟೇ ಸಂಬಳ ಕೊಡಬೇಕೆಂದೂ ಯಾವುದೇ ದಾಕ್ಷಿಣ್ಯವಿಲ್ಲದೆ ಕೆಲಸ ತೆಗೆದುಕೊಳ್ಳಬೇಕೆಂದೂ, ಷರತ್ತು ಹಾಕಿ ಒಬ್ಬ ಶಿಷ್ಯನ ಶಾಲೆಯಲ್ಲಿ ಗೌರವ ಸಲಹೆಗಾರರಾಗಿ ಸೇರಿಕೊಂಡರು. ಒಂದು ವೃದ್ಧಾಶ್ರಮದಲ್ಲಿ ಉಳಿಯಲು ವ್ಯವಸ್ಥೆ ಮಾಡಿಕೊಂಡರು. ಬರೆಯುವ ಹವ್ಯಾಸ ಅವರನ್ನು ಮತ್ತಷ್ಟು ಓದುವಂತೆ ಪ್ರೇರೇಪಿಸಿತು. ಅದು ಮತ್ತೊಂದು ಸೃಜನಶೀಲ ಲೋಕಕ್ಕೆ ಪ್ರವೇಶದ್ವಾರವಾಯಿತು. ಅದರಿಂದ ಮಾಸ್ತರರು ಮತ್ತಷ್ಟು ಗೆಲುವಾದರು. ಹಿಂದಿನ ಸಂಕಷ್ಟಗಳನ್ನೂ ಮಾನಸಿಕ ಹಿಂಸೆಗಳನ್ನು ಮರೆತು ಹೊಸ ಮನುಷ್ಯರಾದರು.

✶ ✶ ✶

ಸಭಾಂಗಣ ಕಿಕ್ಕಿರಿದು ತುಂಬಿತ್ತು. ಅಂದು ಸಿಂಗೆ ಮಾಸ್ತರರಿಗೆ ಸನ್ಮಾನ. ಅವರಿಗೆ ಇಷ್ಟವಾಗುವ ಸಾಹಿತಿಯೊಬ್ಬರು ಆ ಸಮಾರಂಭಕ್ಕೆ ಅತಿಥಿಗಳಾಗಿ ಆಗಮಿಸುವವರಿದ್ದರು, ವಿದ್ಯಾರ್ಥಿಗಳೆಲ್ಲ ಸೇರಿ ತಮ್ಮ ಗುರುವಿಗಾಗಿ 'ಗುರುನಮನ' ಕಾರ್ಯಕ್ರಮವನ್ನು ಏರ್ಪಡಿಸಿದ್ದರು. ಅಪಾರ ಶಿಷ್ಯ ಬಳಗ. ಹಳೆಯ ವಿದ್ಯಾರ್ಥಿ ವಿದ್ಯಾರ್ಥಿನಿಯರು ಬಂದು ಬಂದು ಅವರ ಕಾಲು ಮುಟ್ಟಿ ನಮಸ್ಕರಿಸುತ್ತಿದ್ದರು. ಕೆಲವರು ತಮ್ಮ ಪರಿಚಯ ಹೇಳಿಕೊಳ್ಳುತ್ತಿದ್ದರೆ ಕೆಲವರನ್ನು ಇವರೇ ಗುರುತಿಸಿ ಹೆಸರು ಹೇಳುತ್ತಿದ್ದರು. ಆಗ ಆ ವಿದ್ಯಾರ್ಥಿಗಳ ಕಣ್ಣು ಧನ್ಯತೆಯಿಂದ ತುಂಬಿಕೊಳ್ಳುತ್ತಿದ್ದವು. ಫೇಸ್‌ಬುಕ್‌ನ ಒಡನಾಟ, ಅವರಿಗೆ ತಮ್ಮ ಶಿಷ್ಯರನ್ನು ಗುರುತಿಸಲು, ಸಂಪರ್ಕಿಸಲು ಇನ್ನಷ್ಟು ಸಹಾಯ ಮಾಡಿತ್ತು. ಶಿಷ್ಯಂದಿರೆಲ್ಲ ಸಂಭ್ರಮದಿಂದ ಓಡಾಡುತ್ತಿದ್ದರು. ಪರಸ್ಪರ ಕಷ್ಟಸುಖಗಳನ್ನು ಹಂಚಿಕೊಳ್ಳುತ್ತಿದ್ದರು. ತಂತಮ್ಮ ಕುಟುಂಬದ ಸದಸ್ಯರನ್ನು ಪರಸ್ಪರ ಪರಿಚಯಿಸಿಕೊಳ್ಳುತ್ತಿದ್ದರು. 'ಗುರುನಮನ'ದ ನೆಪದಲ್ಲಿ ಬಹುದಿನಗಳ ನಂತರ ಒಂದೆಡೆ ಸೇರಿದ್ದು ಅವರಿಗೂ ಅತೀವ ಸಂತೋಷವನ್ನು ಕೊಟ್ಟಿತ್ತು. ಅತಿಥಿಗಳು ಬಂದರು. ಕಾರ್ಯಕ್ರಮ ಆರಂಭವಾಯ್ತು. ವಿದ್ಯಾರ್ಥಿಗಳು ತಮ್ಮ ಗುರುಗಳು ಎಂಥವರು, ಅವರಿಂದ ತಾವು ಹೇಗೆ ಬದುಕಲು ಕಲಿತರು, ಎಂಬಿತ್ಯಾದಿ ಮಾತುಗಳನ್ನು ಪ್ರೀತಿಯಿಂದ ಆಡಿದರು. ಅತಿಥಿಗಳೂ, "ಒಬ್ಬ ಶಿಕ್ಷಕನಿಗೆ ಇಷ್ಟೊಂದು ಪ್ರೀತಿಯ ಶಿಷ್ಯ ಬಳಗವಿರಬಹುದು ಎಂದು ಊಹಿಸಲೂ ಶಕ್ಯವಿಲ್ಲದಷ್ಟು ಸಿಂಗೆಯವರು ಸಂಪಾದಿಸಿದ್ದಾರೆ, ಇವರಿಗಿರುವ ಈ ಪ್ರೀತಿಯ ಮಹಾಪೂರ ನನಗಿಲ್ಲವಲ್ಲ ಎಂದು ಹೊಟ್ಟೆಕಿಚ್ಚಾಗುತ್ತಿದೆ" ಎಂದರು. ಸಭೆಯೆಲ್ಲ ಜೋರಾಗಿ ಕರತಾಡನ ಮಾಡಿತು. "ಎಂಥ ಕಷ್ಟ ಕೋಟಲೆಗಳಲ್ಲೂ ನಗು ನಗುತ್ತಲೇ ನನ್ನೊಂದಿಗೆ ಹೆಜ್ಜೆ ಹಾಕಿದ್ದ ನೀನು ಈ ಸಂತೋಷದ ಕ್ಷಣಗಳನ್ನು ನೋಡಲು ಇರಬೇಕಾಗಿತ್ತು ಕಣೆ" ಎಂದು ತಮ್ಮ ತೀರಿಹೋದ ಹೆಂಡತಿಯನ್ನು ನೆನೆದರು ಮಾಸ್ತರರು. ಎರಡೂ ಕಣ್ಣು ಸಂತೋಷದಿಂದಲೂ ದುಃಖದಿಂದಲೂ ತುಂಬಿ ತುಳುಕಿದವು. ಮುಂದೆ ಯಾಕೋ ಮಾಸ್ತರರ ಕಣ್ಣು ಮಂಜಾದಂತೆನಿಸಿ, ಮರುಕ್ಷಣ ಕತ್ತಲೆ ಕವಿದಂತಾಯಿತು. ಮಾಸ್ತರರು ಅಲ್ಲೇ ಕುಸಿದರು.

✶ ✶ ✶

ಮರುದಿನ ಪ್ರಮುಖ ಪತ್ರಿಕೆಗಳು "ಸನ್ಮಾನದಲ್ಲೇ ಪಯಣ ಮುಗಿಸಿದ ಅಧ್ಯಾಪಕ", "ಗುರುನಮನದಲ್ಲೇ ಅಸ್ತಂಗತವಾದ ಗುರು" ... ಮುಂತಾದ ಶೀರ್ಷಿಕೆಗಳಡಿ ಮಾಸ್ತರರು ತೀರಿಹೋದ ಸುದ್ದಿಯನ್ನು ಬರೆದವು. ಅವರ ಜೀವನದ ಮೈಲುಗಲ್ಲುಗಳನ್ನು ಪರಿಚಯಿಸುವ ಲೇಖನಗಳನ್ನು ಪ್ರಕಟಿಸಿದವು. ಇದಾದ ನಾಲ್ಕು ದಿನಗಳ ನಂತರ ಮಾಸ್ತರರ ಸೊಸೆಯ ಹೆಸರಿಗೆ ಒಂದು ಕವರ್ ಬಂದಿತು. ಅದು ಮಾಸ್ತರರು ಯಾವಾಗಲೋ ಬರೆದಿಟ್ಟಿದ್ದ ವಿಲ್. ಅದರಲ್ಲಿ ಅವರು ತಮ್ಮ ಹೊಲ ಮತ್ತು ಮನೆಗಳನ್ನು ತಮ್ಮ ಸೊಸೆಯ ಹೆಸರಿಗೆ ಬರೆದಿದ್ದರು.

**ಮಾರುತಿ ದಾಸಣ್ಣವರ**
ಜವಾಹರ ನವೋದಯ ವಿದ್ಯಾಲಯ, 'ತೇವಾ', ಮಂಜನಪುರ
ಕೌಶಾಂಬಿ ಜಿಲ್ಲೆ (ಅಲಹಾಬಾದ್), ಉತ್ತರ ಪ್ರದೇಶ – ೨೧೨ ೨೦೭

# ಕಲ್ಪನೆಗೂ ಮೀರಿದ ಒಂದು ಪ್ರೇಮ ಪ್ರಸಂಗ




ಮೂಲ : **ಕವಿತಾ ಆರ್ಯ**

ಕನ್ನಡಕ್ಕೆ
**ಕೆ. ಎಲ್. ಗೋಪಾಲಕೃಷ್ಣಯ್ಯ**

ಒಲಿದವರಿಗಾಗಿ ತಮ್ಮ ಸರ್ವಸ್ವವನ್ನೂ ತ್ಯಾಗ ಮಾಡಿದ ನೂರಾರು ಪ್ರೇಮಿಗಳ ಕಥೆಗಳನ್ನು ನಾವು ಕೇಳಿದ್ದೇವೆ. ಆದರೆ ಮದ್ಯೆ ದುಬೆ ಅಥವಾ ಮದ್ಯೆ ದಾಮ್ (ದುಬೆ – ಎಂಬುದಕ್ಕೆ ಭಟ್ಟ, ಆಚಾರ್ಯ, ಶಾಸ್ತ್ರಿ ಇಂಥ ಯಾವುದಾದರು ಬ್ರಾಹ್ಮಣ ಪಂಗಡದ ಅಂಕಿತ ವೆಂದಿಟ್ಟುಕೊಳ್ಳಬಹುದು.) ಎಂಬಾತನ ಪ್ರೇಮ ಕಥೆಗೆ ಯಾವುದೂ ಸರಿಸಾಟಿಯಾಗಲಾರದು. ಮದ್ಯೆ ದುಬೆ ಒಬ್ಬ ಬ್ರಾಹ್ಮಣ ಯುವಕ. ಸುಗಮೋನ ಡೋಮ್ (ಡೋಮ್ – ತೀರ ತಳಜಾತಿ, 'ಮಾದಿಗ' ಎಂದಿಟ್ಟು ಕೊಳ್ಳಬಹುದು.) ಎಂಬ ಜಾತಿಗೆ ಸೇರಿದ ಯುವತಿ, ಮದ್ಯೆ ತನ್ನ ಪ್ರಿಯತಮೆ ಸುಗಮೋನಳಿಗಾಗಿ, ಸ್ವ–ಇಚ್ಛೆಯಿಂದ ತನ್ನ ಮೇಲ್ಜಾತಿಯನ್ನು ಬಿಟ್ಟು ಡೋಮ್ ಜಾತಿಗೆ ಮತಾಂತರಗೊಂಡನು. ಶ್ರೇಣೀಕೃತ ಹಿಂದೂ ಮತಧಾರ್ಮಿಕ ವ್ಯವಸ್ಥೆಯಲ್ಲಿ ಪ್ರತಿಯೊಬ್ಬನೂ ಮೇಲುಮೇಲಿನ ಜಾತಿಗಳಿಗೆ ಸೇರಿಕೊಳ್ಳಲು ತವಕಿಸು ತ್ತಿರುವ ಸಂದರ್ಭದಲ್ಲಿ ಇದು ತೀರ ವಿಶಿಷ್ಟವಾದ ಘಟನೆಯೇ ಸರಿ !




ಮದ್ಯೆ ದುಬೆ ಹುಟ್ಟಿದ್ದು ಬಿಹಾರ ಪ್ರಾಂತ್ಯದ ಭೋಜಪುರ ಜಿಲ್ಲೆಯ ಸಲೆಂಪುರ ಎಂಬ ಒಂದು ಸಣ್ಣ ಹಳ್ಳಿಯಲ್ಲಿ, ಶ್ರೀಮಂತ ಮತ್ತು ಸಂಪ್ರದಾಯನಿಷ್ಠ ಬ್ರಾಹ್ಮಣ ಕುಟುಂಬದಲ್ಲಿ. ವಿಸ್ತಾರವಾದ ವ್ಯವಸಾಯ ಭೂಮಿಯು ಈ ಕುಟುಂಬದ ಪಿತ್ರಾರ್ಜಿತ ಆಸ್ತಿಯಾಗಿತ್ತು. ಜಮೀನಿನಲ್ಲಿ ಬೆಳೆದ ಬೆಳೆಯ ಉಸ್ತುವಾರಿ ನೋಡಿಕೊಳ್ಳುವ ಸಲುವಾಗಿ ಮದ್ಯೆ ದಿನದ ಹೆಚ್ಚು ಭಾಗವನ್ನು ಊರ ಹೊರಗಿನ ಜಮೀನಿ ನಲ್ಲಿಯೇ ಕಳೆಯುತ್ತಿದ್ದ. ಇವರ ಜಮೀನಿನಿಂದ ಸ್ವಲ್ಪ ದೂರದಲ್ಲಿದ್ದ ಸ್ಮಶಾನದಲ್ಲಿ ಸುಗಮೋನಳ ಅಪ್ಪ ಕಾವಲುಗಾರ. ಸ್ಮಶಾನಕ್ಕೆ ತಂದ ಹೆಣಗಳನ್ನು ಸುಡುವ ಸಲುವಾಗಿ ಕಟ್ಟಿಗೆಗಳನ್ನು ಜೋಡಿಸುವುದರಲ್ಲಿಯೂ ಅವನು ಸಹಾಯ ಮಾಡುತ್ತಿದ್ದ. ಅವನ ಕೆಲಸಕ್ಕಾಗಿ ಜನರು ಕೊಡುವ ಭಕ್ಷೀಸ್‌ನಿಂದಲೇ ಅವರ ಕುಟುಂಬದ ಜೀವನ ಸಾಗಬೇಕು.

ತನ್ನ ಅಪ್ಪನಿಗೆ ಮಧ್ಯಾಹ್ನದ ಊಟ ಕೊಡುವು ದಕ್ಕಾಗಿ ಸುಗಮೋನ ಪ್ರತಿದಿನವೂ ಮದ್ಯೆ ದುಬೆಯ ಜಮೀನಿನ ಮೂಲಕವೇ ಹಾದುಹೋಗುತ್ತಿದ್ದಳು. ಇಬ್ಬರೂ ಪರಸ್ಪರ ತೀರ ಭಿನ್ನ ಅಂತಸ್ತು ಮತ್ತು ಜಾತಿಗಳಿಗೆ ಸೇರಿದವರಾದ್ದರಿಂದ ಅವರು ಎಂದೂ ಒಬ್ಬರೊಡನೊಬ್ಬರು ಮಾತಾಡುತ್ತಿರಲಿಲ್ಲ. ಒಂದು ಮಧ್ಯಾಹ್ನ ಉರಿಬಿಸಿಲಿನಲ್ಲಿ ಅಪ್ಪನಿಗೆ ಊಟ ಕೊಡಲು ಹೋಗುತ್ತಿದ್ದ ಸುಗಮೋನ ಬಿಸಿಲ ಝಳಕ್ಕೆ ಬಸವಳಿದು, ಬವಳಿ ಬಂದು ಮದ್ಯೆನ ಗುಡಿಸಿಲಿನ ಹತ್ತಿರವೇ ಬಿದ್ದು, ಎಚ್ಚರ ತಪ್ಪಿಬಿಟ್ಟಳು. ಮಾದಿಗ ಜಾತಿಯ ಸುಗಮ ಅಸ್ಪೃಶ್ಯಳಾದುದರಿಂದ ದುಬೆ ಅವಳನ್ನು ಮುಟ್ಟುವಂತಿರಲಿಲ್ಲ. ಆದರೆ ಆ ಕ್ಷಣದಲ್ಲಿ ದುಬೆ ಮುಟ್ಟು ಚಟ್ಟುಗಳ ಬಗೆಗೆ ಯೋಚಿಸಲಿಲ್ಲ. ಅವನು ಅವಳನ್ನು ಹೊತ್ತು ತಂದು ಗುಡಿಸಿಲಿನಲ್ಲಿ ಮಲಗಿಸಿ ಗಾಳಿ ಹಾಕಿ, ನೀರು ಕುಡಿಸಿ ಉಪಚರಿಸಿದ್ದರಿಂದ ಅವಳು ಚೇತರಿಸಿಕೊಂಡಳು. ಹೀರಾ – ರಂಜ ಅಥವಾ ಸೋನಿಮಹಿವಾಲ್ ಕಥೆಗಳಿಗೆ ಹೋಲಿಸಬಹುದಾದ ಇವರ ಪ್ರೇಮದ ಕಥೆಯು ಆರಂಭವಾದುದು ಹೀಗೆ. ರೂಢಿಗತವಾಗಿದ್ದ ಜಾತಿಮತಗಳ ಕಟ್ಟುಪಾಡುಗಳನ್ನು ಮೀರಿ ಅಂದಿನಿಂದ ಅವರು ಪರಸ್ಪರ ಪ್ರೀತಿಸ ತೊಡಗಿದರು.

ಗ್ರಾಮದ ಇಡೀ ಸಮುದಾಯವೇ ಇವರ ವಿರುದ್ಧ ತಿರುಗಿಬಿದ್ದಿತು. ಅಂದಿನ ಸಮಾಜದ ಕಟ್ಟುಪಾಡುಗಳ ಪ್ರಕಾರ ಇವರದು ತೀರ ಅನುಚಿತವಾದ ವರ್ತನೆ; ಕ್ಷಮಿಸಲಾಗದ ಅಪರಾಧ. ಆ ಪುಟ್ಟ ಗ್ರಾಮದ ಬ್ರಾಹ್ಮಣರಂತೂ ಒಬ್ಬ ಬ್ರಾಹ್ಮಣನು ಮಾದಿಗರ ಹುಡುಗಿಯನ್ನ ಪ್ರೀತಿಸುವುದು ಎಲ್ಲಾದರೂ ಉಂಟೇ ! ಎಂದು ಕಿಡಿಕಿಡಿಯಾದರು. ಮದ್ಯೆ ದುಬೆ ಈ ಸಂಬಂಧದಿಂದ ಬಿಡಿಸಿಕೊಳ್ಳಬೇಕೆಂದೂ ಇಲ್ಲದಿದ್ದರೆ ಇಡೀ ಕುಟುಂಬವನ್ನು ತಮ್ಮ ಜಾತಿಯಿಂದ ಬಹಿಷ್ಕರಿಸುವುದಾಗಿಯೂ ಹುಡುಗನ ತಂದೆತಾಯಿ ಯರಿಗೆ ಬೆದರಿಕೆ ಹಾಕಿದರು. ಮದ್ಯೆಅನ್ನು ಮನೆಯಿಂದ ಹೊರಗೆ ಹಾಕುವುದಾಗಿಯೂ ಅವನಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಕಿಂಚಿತ್ತೂ ಪಾಲನ್ನಾಗಲಿ, ಬಿಡಿಗಾಸನ್ನಾಗಲಿ ಕೊಡುವುದಿಲ್ಲವೆಂದು ಕುಟುಂಬದ ಹಿರಿಯರು ಅವನನ್ನು ಎಚ್ಚರಿಸಿದರು. ಆದರೆ ಮದ್ಯೆ ದುಬೆ ಯಾರ ಮಾತಿಗೂ ಸೊಪ್ಪು ಹಾಕಲಿಲ್ಲ. ಯಾರು ಏನೇ ಮಾಡಿದರೂ ತಾನು ಅವಳನ್ನು ಕೈ ಬಿಡುವು ದಿಲ್ಲವೆಂದೂ ಸುಗಮೋನಳನ್ನೇ ಮದುವೆಯಾಗುವು ದಾಗಿಯೂ ಹಠ ಹಿಡಿದ. ಅಂದಿನ ದಿನಗಳಲ್ಲಿ ಮೇಲ್ಜಾತಿಗಳ ಗಂಡಸರು ಕೆಳಜಾತಿಗಳ ಹೆಂಗಸರನ್ನು ಕೇವಲ ಇಟ್ಟುಕೊಳ್ಳುವುದು ಸಾಮಾನ್ಯವಾಗಿತ್ತು. ಸುಗಮೋನಳನ್ನು ಅಷ್ಟೊಂದು ಇಷ್ಟಪಟ್ಟರೆ, ಮದ್ಯೆ

ಕೂಡ ಹಾಗೆ ಮಾಡಬಹುದೆಂದು (ಅಂದರೆ ಅವಳನ್ನು ಇಟ್ಟುಕೊಳ್ಳಬಹುದು) ಕೆಲವರು ಸಲಹೆ ಮಾಡಿದರು. ಆದರೆ ಮದ್ಯೆ ಅದಕ್ಕೆ ಒಪ್ಪಲಿಲ್ಲ. ತಾನು ಸುಗಮೋನಳನ್ನು ಮದುವೆಯಾಗಿ ತಾವು ಗಂಡ–ಹೆಂಡತಿಯಂತೆಯೇ ಬದುಕುವುದಾಗಿ ಹಠಹಿಡಿದ. ಮದ್ಯೆ ಕುಟುಂಬದವರು ಅವನನ್ನು ಮನೆಯಿಂದ ಹೊರಹಾಕಿದರು. ಏನೇ ಆದರೂ ಮದ್ಯೆ ತನ್ನ ಪ್ರೇಯಸಿ ಸುಗಮೋನಳಿಗೆ ಮೋಸಮಾಡಲು ಸಿದ್ಧನಿರಲಿಲ್ಲ. ಇದು ಈ ಕಥೆಯ ಒಂದು ಭಾಗ.

ಇದಕ್ಕಿಂತ ಕಠಿಣವಾದ ಪರಿಸ್ಥಿತಿ ಮುಂದೆ ಕಾದಿತ್ತು. ಸುಗಮಳೇನೋ ಮದ್ಯೆ ತನಗೆ ಮೋಸಮಾಡುವುದಿಲ್ಲ ಎಂದು ನಂಬಿದ್ದಳು. ಆದರೆ ಅವಳ ಅಪ್ಪ–ಅಮ್ಮ ಮತ್ತು ಕೇರಿಯ ಹಿರಿಯರ ವಿಚಾರ ಹಾಗಿರಲಿಲ್ಲ. ಮೇಲ್ಜಾತಿಯ ಗಂಡಸರು ಕೆಳಜಾತಿಯ ಹುಡುಗಿಯರೊಂದಿಗೆ ನಾಲ್ಕು ದಿನ ಚೆಲ್ಲಾಟವಾಡಿ, ಅವರನ್ನು ಕೆಡಿಸಿ ಕೈಬಿಡುವುದನ್ನು ಅವರು ಕಂಡಿದ್ದರು. ತಾನು ಅಂಥವನಲ್ಲವೆಂದೂ, ಸುಗಮೋಳನ್ನು ಮದುವೆಯಾಗುವುದಕ್ಕಾಗಿಯೇ ತನ್ನ ಕುಟುಂಬವನ್ನು ತೊರೆದು ಬಂದಿರುವುದಾಗಿಯೂ ಹೇಳಿದ. ಆದರೂ ಹುಡುಗಿಯ ಅಪ್ಪ ಅವನ ಮಾತನ್ನು ನಂಬಲಿಲ್ಲ. ತಮ್ಮ ಹುಡುಗಿ ಮಾದಿಗರ ಕೇರಿಯಲ್ಲಿ ಬೆಳೆದು ಅವರ ನಡೆನುಡಿಗಳನ್ನೇ ಮೈಗೂಡಿಸಿ ಕೊಂಡಿರುವುದಾಗಿಯೂ, ಮಾದಿಗರ ಜೀವನದ ರೀತಿನೀತಿಗಳು ಬ್ರಾಹ್ಮಣರ ರೀತಿನೀತಿಗಳಿಗಿಂತ ತೀರ ಭಿನ್ನವೆಂದೂ ವಾದಿಸಿದ. ತಮ್ಮ ಹುಡುಗಿ ಮಾಂಸ ತಿನ್ನುತ್ತಾಳೆ; ಹಂದಿಗಳೊಡನೆ ಗುಡಿಸಿಲಿನಲ್ಲಿ ವಾಸಿಸುತ್ತಾಳೆ, ಕೊಳಚೆ ನೀರು ಕುಡಿಯುತ್ತಾಳೆ, ಅವಳು ಬ್ರಾಹ್ಮಣ ಗಂಡನ ಜೊತೆಯಲ್ಲಿ ಬಾಳ್ವೆ ಮಾಡುವುದು ಹೇಗೆ ಸಾಧ್ಯ? ಎಂದು ಪ್ರಶ್ನಿಸಿದ. ನೀನು ನಿನ್ನ ಬ್ರಾಹ್ಮಣ ಜಾತಿಯನ್ನು ಬಿಟ್ಟು ಮಾದಿಗನಾಗಲು ಸಿದ್ಧನಿದ್ದೀಯಾ ? – ಎಂದು ಸವಾಲು ಹಾಕಿದ.

ಮದ್ಯೆ ಎಲ್ಲದಕ್ಕೂ ಸಿದ್ಧನಾಗಿಯೇ ಬಂದಿದ್ದ. ಆ ಸವಾಲನ್ನು ಸ್ವೀಕರಿಸಿದ. ಆದರೂ ಮಾದಿಗ ಸಮುದಾಯದವರು ಅವನ ಮಾತನ್ನು ಸುಲಭವಾಗಿ ಒಪ್ಪಲಿಲ್ಲ. ಸುಗಮೋನಳನ್ನು ಮದುವೆಯಾಗಬೇಕಾದರೆ ಅವನು 'ಡೋಮ್' ಆಗಿ ಮತಾಂತರಗೊಳ್ಳಬೇಕೆಂದು ಕುರಿಮಾಂಸ, ಹಂದಿಮಾಂಸಗಳೂ ಸೇರಿದಂತೆ ಎಲ್ಲ ಪ್ರಾಣಿಗಳ ಮಾಂಸವನ್ನೂ ತಿನ್ನಬೇಕು; ತಮ್ಮ ಜೊತೆಗೆ ಹೆಂಡ ಕುಡಿಯಬೇಕು; ಡೋಮ್‌ಗಳೂ ಮಾಡುವಂತೆ ಹೆಣಗಳನ್ನು ಹೂಳುವ/ಸುಡುವ ಕೆಲಸದಲ್ಲಿ ಸಹಾಯ ಮಾಡಬೇಕು; ಮೇಲ್ಜಾತಿಗಳವರು ಸ್ನಾನ ಮಾಡುವ ಕಡೆಯಿಂದ ಹರಿದು ಬರುವ ಕೊಳಚೆ ನೀರನ್ನು ಕುಡಿಯಬೇಕು; ಡೋಮ್ ಜಾತಿಯವರ ವೃತ್ತಿಯಾದ ಹಂದಿ ಸಾಕುವುದು ಮತ್ತು ಬಿದಿರು ಸೀಳಿ ಬುಟ್ಟಿ, ಚಾಪೆಗಳನ್ನು ಹೆಣೆಯಬೇಕು – ಇತ್ಯಾದಿ ಷರತ್ತುಗಳನ್ನು ಹಾಕಿದರು.

ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿ ಬೆಳೆದ ಮದ್ಯೆ ಎಂದೂ ಮಾಂಸ ತಿಂದಿರಲಿಲ್ಲ. ಹೆಂಡ ಕುಡಿದಿರಲಿಲ್ಲ. ಕೊಳಚೆ ನೀರು ಮುಟ್ಟುವುದು, ಹೆಣ ನೋಡುವುದು ಅವನಿಗೆ ಅಸಹ್ಯ. ಆದರೆ ಸುಗಮೋನಳಲ್ಲಿ ಅವನಿಗಿದ್ದ ಪ್ರೀತಿಯು ಈ ಎಲ್ಲ ಹಿಂಜರಿಕೆಗಳನ್ನು ಮೀರಿದುದಾಗಿತ್ತು. ಅವಳನ್ನು ಪಡೆಯುವುದಕ್ಕಾಗಿ ಡೋಮ್ ಜಾತಿಯವರು ಹಾಕಿದ ಎಲ್ಲ ಷರತ್ತುಗಳನ್ನು ಒಪ್ಪಿ, ಅದರಂತೆ ನಡೆದು ತೋರಿಸಿದ್ದ.

ಇಷ್ಟಾದ ಮೇಲೆ ಮಾದಿಗರ ರೂಢಿಯಂತೆ ಅವನನ್ನು ಬ್ರಾಹ್ಮಣ ಜಾತಿಯಿಂದ ಡೋಮ್ ಜಾತಿಗೆ ಮತಾಂತರಗೊಳಿಸಲಾಯಿತು. ಅಷ್ಟು ಮಾತ್ರವಲ್ಲದೆ ಅವನು ಮದ್ಯೆ ದುಬೆ ಎಂಬ ತನ್ನ ಮೊದಲಿನ ಹೆಸರನ್ನು ಮದ್ಯೆ ಡೋಮ್ ಎಂದು ಬದಲಾಯಿಸಿ ಕೊಂಡಿದ್ದ. ಸುಗಮೋನ್ ಮತ್ತು ಮದ್ಯೆ ಡೋಮ್ ಗಂಡ–ಹೆಂಡತಿಯರಾಗಿ ತಮ್ಮ ಶೇಷಾಯುಷ್ಯವನ್ನು ಮಾದಿಗರ ಕೇರಿಗಳಲ್ಲಿ ಮಾದಿಗರಾಗಿಯೇ ಬದುಕಿದರು. ತನ್ನ ನಿರ್ಧಾರಕ್ಕಾಗಿ ಮದ್ಯೆ ಎಂದೂ ಪಶ್ಚಾತ್ತಾಪ ಪಡಲಿಲ್ಲ. ಬೀದಿಯಲ್ಲಿ ಓಡಾಡುವಾಗ ಹಿಂದಿನ ಪರಿಚಯಸ್ಥರು ಯಾರಾದರೂ ಎದುರಿಗೆ ಸಿಕ್ಕಿ ನಮಸ್ಕಾರ ಹೇಳಿದರೆ, ಮದ್ಯೆ ತಲೆತಗ್ಗಿಸಿ, ಎರಡೂ ಕೈಗಳನ್ನು ಜೋಡಿಸಿ ವಿಧೇಯತೆಯಿಂದ ನಮಸ್ಕರಿಸುತ್ತಿದ್ದ ಮತ್ತು "ಸ್ವಾಮಿ, ಈಗ ನಾನು ಹಿಂದಿನ ಮದ್ಯೆ ದುಬೆ ಎಂಬ ಬ್ರಾಹ್ಮಣನಲ್ಲ; ಈಗ ನಾನು ಮದ್ಯೆ ಡೋಮ್ ಎಂಬ ಮಾದಿಗ. ತಾವು ನನಗೆ ನಮಸ್ಕಾರ ಮಾಡಬಾರದು" ಎಂದು ಹೇಳಿ ರಸ್ತೆಯ ಅಂಚಿಗೆ ಸರಿದು ಮುಂದೆ ಹೋಗುತ್ತಿದ್ದ.

ಸಲೆಂಪುರದ ಬ್ರಾಹ್ಮಣರು ತಮ್ಮ ಜಾತಿಗೆ ಕಳಂಕವನ್ನು ತಂದ ಮದ್ಯೆಅನ್ನು ಎಂದೂ ಕ್ಷಮಿಸಲಿಲ್ಲ. ಹಿಂದಿನ ಪರಿಚಿತರಿಗೆ ಆಗಾಗ ಕಾಣಿಸಿಕೊಳ್ಳುವ ಮುಜುಗರದಿಂದ ತಪ್ಪಿಸಿಕೊಳ್ಳುವ ಸಲುವಾಗಿ ಮದ್ಯೆ ಡೋಮ್ ಸಲೆಂಪುರವನ್ನು ಬಿಟ್ಟು ಅದೇ ಜಿಲ್ಲೆಯ ಗುಜ್ರಾನಿ ಎಂಬ ಮತ್ತೊಂದು ಹಳ್ಳಿಯಲ್ಲಿ ಸಂಸಾರ ಸಮೇತ ನೆಲೆಸಿದ.

ಒಬ್ಬಳು ಸಾಮಾನ್ಯ ಕುಟುಂಬದ ಹೆಣ್ಣನ್ನು ಮದುವೆ ಯಾಗುವುದಕ್ಕಾಗಿ, ಆನುವಂಶಿಕವಾದ ಚಕ್ರವರ್ತಿ ಪದವಿಯನ್ನು ತ್ಯಾಗ ಮಾಡಿದ ಇಂಗ್ಲೆಂಡಿನ ರಾಜಕುಮಾರನ ಬಗೆಗೆ ಕೇಳಿದ್ದೇವೆ. (ಇಂಗ್ಲೆಂಡಿನಲ್ಲಿ ಚಕ್ರವರ್ತಿ ಪದವಿಯನ್ನು ಪಡೆಯಬೇಕಾದರೆ ರಾಜಕುಮಾರನು ರಾಜವಂಶದ ಹೆಣ್ಣನ್ನೇ ಮದುವೆ ಯಾಗಬೇಕೆಂಬ ನಿಯಮ ಇಂದಿಗೂ ರೂಢಿಯಲ್ಲಿ ಇದೆ.) ತನ್ನ ಪ್ರೀತಿಯ ಮಡದಿಯ ನೆನಪಿಗಾಗಿ ತಾಜ್‌ಮಹಲ್‌ಅನ್ನು ಕಟ್ಟಿಸಿದ ಷಹಜಹಾನ್ ಚಕ್ರವರ್ತಿಯ ಬಗೆಗೆ ಓದಿದ್ದೇವೆ. ತಾವು ಒಲಿದ ಹೆಣ್ಣಿಗಾಗಿ ಹಾಡು ಕಟ್ಟಿ ಹಾಡಿದ, ಆಕೆಗಾಗಿ ತಮ್ಮ ಪ್ರಾಣವನ್ನೇ ಅರ್ಪಿಸಿದ ಹಲವರ ಬಗೆಗೆ ಕೇಳಿದ್ದೇವೆ. ಮದ್ಯೆ ದುಬೆ ತಾಜ್‌ಮಹಲ್ ಕಟ್ಟಿಸಬಲ್ಲ ಶ್ರೀಮಂತನಲ್ಲ; ಚಕ್ರವರ್ತಿ ಪದವಿಯನ್ನು ತ್ಯಾಗಮಾಡಲು ಅವನು ಇಂಗ್ಲೆಂಡಿನ ಯುವರಾಜನೂ ಅಲ್ಲ; ಅವಳಿಗಾಗಿ ಹಾಡುಕಟ್ಟಬಲ್ಲ ಕವಿಯಲ್ಲ. ಆದರೆ ತನ್ನ ಪ್ರೇಯಸಿ ಯೊಡನೆ ಸಮನ್ವಯವನ್ನು ಸಾಧಿಸುವುದಕ್ಕಾಗಿ ಮದ್ಯೆ ದುಬೆ ತಾನು ಹುಟ್ಟಿ ಬೆಳೆದ ಬ್ರಾಹ್ಮಣ ಕುಟುಂಬದ ಸಂಸ್ಕಾರ, ಸಂಸ್ಕೃತಿಗಳನ್ನು ಮತ್ತು ತಾನು ಶ್ರೇಷ್ಠ ಜಾತಿಯವನೆಂಬ ಅಹಂಕಾರವನ್ನು ತ್ಯಾಗಮಾಡಿದ.

ಮದ್ಯೆ ದುಬೆ ಮತ್ತು ಸುಗಮೋನಳ ಪ್ರೇಮ ಪ್ರಸಂಗವು ಕಲ್ಪನೆಗೂ ಮೀರಿದುದು; ಇದೊಂದು ಕಟ್ಟುಕತೆಯಲ್ಲ. ದಶಕಗಳ (ಸುಮಾರು ೧೦೦ ವರ್ಷಗಳ) ಹಿಂದೆ, ಜಾತಿ ಮತಗಳ ನಡುವಿನ ಕಟ್ಟುಪಾಡುಗಳು ಇಂದಿಗಿಂತಲೂ ಹೆಚ್ಚು ಕಠಿಣ ವಾಗಿದ್ದ ಪರಿಸ್ಥಿತಿಯಲ್ಲಿ, ಮದ್ಯೆ ದುಬೆ ಪರಂಪರಾಗತ ನಿರ್ಬಂಧಗಳನ್ನು ಕಳಚಿಕೊಳ್ಳುವ ಧೈರ್ಯ ತೋರಿದ ! ಇದೇನು ಸಾಮಾನ್ಯ ಸಂಗತಿಯಲ್ಲ.

ದಂಪತಿಗಳು ತಮ್ಮ ಜೀವನಪರ್ಯಂತ ಕೂಡಿ ಬದುಕಿ ೧೯೬೫ರ ಆಸುಪಾಸಿನಲ್ಲಿ ತೀರಿಕೊಂಡರು. ಇವರ ಮೊಮ್ಮಕ್ಕಳು ಭೊಟ್ಕಿ ಸಸಾರಾಮ್ ಎಂಬ ಗ್ರಾಮದಲ್ಲಿ ಇಂದಿಗೂ ವಾಸಿಸುತ್ತಿದ್ದಾರೆ. ಆದರೆ ಈ ಮೊಮ್ಮಕ್ಕಳಿಗೆ ತಮ್ಮ ಅಜ್ಜ ಅಜ್ಜಿಯರ ಬಗೆಗೆ ಯಾವುದೇ ವಿಶೇಷವಾದ ನೆನಪುಗಳಿಲ್ಲ.

ಮೂಲ : **ಕವಿತಾ ಆರ್ಯ**
ಕನ್ನಡಕ್ಕೆ : **ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ , ಬನಶಂಕರಿ ೨ನೇ ಹಂತ
ಬೆಂಗಳೂರು – ೫೬೦ ೦೭೦

# ಗ್ರಾಮೀಣ ಭಾರತ ಕುರಿತ ವರದಿ

### ಪಿ. ಸಾಯಿನಾಥ್

ನಿರೂಪಣೆ : ಡಿ. ಎ. ವಿಜಯಭಾಸ್ಕರ

ಇತ್ತೀಚೆಗೆ ಹಲವಾರು ಕಾರಣಗಳಿಗಾಗಿ ಗ್ರಾಮೀಣ ಭಾರತವು ಚರ್ಚೆಯಲ್ಲಿತ್ತು. ಅದಕ್ಕೆ ಗ್ರಾಸ ಒದಗಿಸಿದ ಸಂದರ್ಭವೆಂದರೆ, ಕೇಂದ್ರ ಸರ್ಕಾರವು ಸಂಸತ್ತಿನಲ್ಲಿ ಮಂಡಿಸಿದ ಆಹಾರ ಭದ್ರತಾ ಮಸೂದೆಯ ಬಗ್ಗೆ ಮಾಧ್ಯಮಗಳಲ್ಲಿ ವ್ಯಕ್ತವಾದ ಕೆಲವು ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಪ್ರಮುಖವಾಗಿ ಚರ್ಚೆ ನಡೆಯಿತು.

ಕೇಂದ್ರ ಸರ್ಕಾರದ ಈ ಕ್ರಮವು ಸಂಪನ್ಮೂಲದ ಬೃಹತ್ ವಿನಿಯೋಗಕ್ಕೆ ಕಾರಣವೆಂದೂ ಹಾಗೂ ಜಿ. ಡಿ. ಪಿ.ಯ ಎಷ್ಟು ಪ್ರತಿಶತ ಸಬ್ಸಿಡಿಗೆ ಕಾರಣ ವಾಗುತ್ತದೆ ಎಂಬ ಉತ್ಪ್ರೇಕ್ಷಿತ ವಾದಗಳೂ ಹಾಗೂ ಅದನ್ನು ಈಗಿನ ಸ್ವರೂಪದಲ್ಲಿಯೇ ಜಾರಿಗೊಳಿಸಿದರೆ ಬಹುತೇಕ ರಾಜ್ಯಗಳಲ್ಲಿ ಇಡೀ ಜನಸಂಖ್ಯೆಯ ಎಲ್ಲೋ ಒಂದು ಭಾಗಕ್ಕೆ ಮಾತ್ರ ಅನುಕೂಲ ವಾಗುತ್ತದೆಂಬ ವಿಷಯಗಳೂ ಚರ್ಚೆಯಾದವು.

ಅದರಂತೆ ಮಹಾರಾಷ್ಟ್ರದಲ್ಲಿ ಒಂದು ಕೋಟಿಗೂ ಕಡಿಮೆ ಜನರಿಗೆ ಅನುಕೂಲವಾಗುತ್ತದೆ. ಜಾರ್ಖಂಡ್, ಒಡಿಶಾ ಇತ್ಯಾದಿ ರಾಜ್ಯಗಳಲ್ಲಿ ಶೇಕಡ ೬೭ ಜನರಿಗೆ ಅನುಕೂಲ ಕಲ್ಪಿಸುವ ಗುರಿ ಹೊಂದಲಾಗಿದೆ. ಈ ಯೋಜನೆಯಡಿ ಪ್ರತೀ ಕುಟುಂಬಕ್ಕೆ ನೀಡಲಾಗುವ ಆಹಾರ ಧಾನ್ಯವನ್ನು ೩೫ ಕಿಲೋಗ್ರಾಂನಿಂದ ೨೫ ಕಿಲೋಗ್ರಾಂಗೆ ಇಳಿಸಲಾಗಿದೆ. ಅಂದರೆ ಪ್ರತೀ ವ್ಯಕ್ತಿಗೆ ಪ್ರತೀ ತಿಂಗಳಿಗೆ ೨ ಕಿಲೋಗ್ರಾಂ ಧಾನ್ಯವನ್ನು ಕಡಿಮೆ ಗೊಳಿಸಲಾಗಿದೆ. ಇದರ ಟೀಕಾಕಾರರು ಈ ಯೋಜನೆಗೆ ೧,೨೫,೦೦೦ ಕೋಟಿ ರೂಪಾಯಿಗಳಿಗೂ ಅಧಿಕ ಮೊತ್ತದ ಬೃಹತ್ ಸಂಪನ್ಮೂಲ ಬೇಕಾಗುತ್ತದೆ ಎಂದು ಸಹ ವಾದಿಸಿದರು. ಆದರೆ ಈ ವಾದ ಅರ್ಥಹೀನ. ಏಕೆಂದರೆ, ಈಗಾಗಲೇ ಚಾಲ್ತಿಯಲ್ಲಿರುವ ಸಾರ್ವತ್ರಿಕ ವಿತರಣಾ ವ್ಯವಸ್ಥೆಯ ಮೇಲೆ ಸರ್ಕಾರ ಸಾಕಷ್ಟು ಹಣ ಖರ್ಚು ಮಾಡುತ್ತಿದೆ. ಪ್ರಸ್ತುತ ವೆಚ್ಚದ ಮೇಲೆ ಇನ್ನೂ ಸ್ವಲ್ಪ ಮೊತ್ತವನ್ನು ಸೇರಿಸಿದರೆ ಸಾಕಾಗುತ್ತದೆ. ಯೋಜನೆಯ ವೆಚ್ಚ ೧,೨೫,೦೦೦ ಕೋಟಿ ರೂಪಾಯಿಗಳು. ಹೊಸದಾಗಿ ಮಾಡಬೇಕಾದ ವೆಚ್ಚ ವೇನಿಲ್ಲ. ಸಾರ್ವತ್ರಿಕ ವಿತರಣಾ ವ್ಯವಸ್ಥೆಗೆ ಖರ್ಚು ಮಾಡುವ ಹಣ ಕಾರ್ಪೊರೇಟ್ ವಲಯಕ್ಕೆ ನೀಡ ಲಾಗುತ್ತಿರುವ ಬಜೆಟ್ ವಿನಾಯಿತಿ / ರಿಯಾಯಿತಿಗಳ ೧/೫ ಅಂಶದಷ್ಟೂ ಸಹ ಇದಕ್ಕೆ ಬೇಕಾಗುವುದಿಲ್ಲ. ನಿಮ್ಮಲ್ಲಿ ಎಷ್ಟು ಜನ ಬಜೆಟ್‌ನ ಅಂಕಿ ಅಂಶಗಳನ್ನು ಗಮನಿಸಿದ್ದೀರಿ ? ಬೇಕಾದರೆ ಕೇಂದ್ರ ಸರ್ಕಾರದ ಬಜೆಟ್‌ನಲ್ಲಿ ಸರ್ಕಾರವು ಬಿಟ್ಟುಕೊಟ್ಟ ವರಮಾನದ ಯಾದಿಯನ್ನು ಪರಿಶೀಲಿಸಬಹುದು. ಇಲ್ಲಿ ೭ ಅಥವಾ ೧೨ನೇ ಪರಿಚ್ಛೇದದಲ್ಲಿ ಮೂರು ಪ್ರಮುಖ ನಮೂದು ಗಳನ್ನು ಗಮನಿಸಬೇಕು. ಅವು ಈ ಕೆಳಕಂಡಂತಿವೆ :

೧. ಕಾರ್ಪೊರೇಟ್ ವಲಯಕ್ಕೆ
   ಆದಾಯ ತೆರಿಗೆ
   ವಿನಾಯಿತಿ / ರಿಯಾಯಿತಿ :
   ೮೬,೦೦೦ ಕೋಟಿ ರೂಪಾಯಿಗಳು.

೨. ಆಮದು ಸುಂಕ
   ವಿನಾಯಿತಿ / ರಿಯಾಯಿತಿ :
   ೨,೪೦,೦೦೦ ಕೋಟಿ ರೂಪಾಯಿಗಳು.

೩. ಅಬ್ಕಾರಿ ಸುಂಕ
   ವಿನಾಯಿತಿ/ ರಿಯಾಯಿತಿ :
   ೨,೦೦,೦೦೦ ಕೋಟಿ ರೂಪಾಯಿಗಳು.

ಅಲ್ಲದೆ, ಬಜೆಟ್‌ನಲ್ಲಿ ನೀಡಲಾಗುವ ತೆರಿಗೆ ರಜೆ ಮತ್ತಿತರ ರಿಯಾಯಿತಿಗಳು, ಟಾಟಾ, ಅಂಬಾನಿ ಮುಂತಾದವರಿಗೆ ಕೊಡಲಾಗಿರುವ ಅರಣ್ಯ ಇಲಾಖೆಯ ಸಾವಿರಾರು ಎಕರೆ ಭೂಮಿ ಇತ್ಯಾದಿಗಳು ಇದರಲ್ಲಿ ಸೇರಿಲ್ಲ. ಪ್ರಸ್ತುತ ಸಾರ್ವತ್ರಿಕ ವಿತರಣಾ ವ್ಯವಸ್ಥೆಯಲ್ಲಿ ನೀಡಲಾಗುವ ಆಹಾರ ಸಬ್ಸಿಡಿಯ ವೆಚ್ಚಕ್ಕೆ ಬೆರಳೆಣಿಕೆ ಯಷ್ಟು ಕಾರ್ಪೊರೇಟ್ ವಲಯಕ್ಕೆ ನೀಡಲಾಗುವ ೮೬,೦೦೦ ಕೋಟಿ ರೂಪಾಯಿಗಳ ಆದಾಯ ತೆರಿಗೆ ವಿನಾಯಿತಿಯೊಂದನ್ನು ಸೇರಿಸುವುದರಿಂದಲೇ ದೇಶದ ಇಡೀ ಜನಸಂಖ್ಯೆಯನ್ನು ಒಳಪಡಿಸಿದಂತೆ ಆಹಾರ ಭದ್ರತೆ ನೀಡಬಹುದು. ಕೆಲವು ತಿಂಗಳುಗಳ ಹಿಂದೆ ಕೇಂದ್ರ ಸಚಿವರು ಚಿನ್ನದ ಆಮದಿಗೆ ನೀಡಲಾಗುವ ತೆರಿಗೆ ವಿನಾಯಿತಿ ಬಗ್ಗೆ ಮಾತನಾಡುತ್ತಿದ್ದದ್ದು ತಮಗೆ ತಿಳಿದಿದೆ. ಖನಿಜ ತೈಲ ಹಾಗೂ ಕೈಗಾರಿಕಾ ಯಂತ್ರ ಗಳಿಗೆ ನೀಡಲಾಗುವ ಆಮದು ಸುಂಕ ರಿಯಾಯಿತಿ ಗಳಿಗಿಂತ ಚಿನ್ನದ ಆಮದು ಏಕೈಕ ಅತಿ ದೊಡ್ಡ ರಿಯಾಯಿತಿ ಪಡೆಯುವ (ಕಳೆದ ಮೂರು ವರ್ಷ ಗಳಲ್ಲಿ ೧,೨೦,೦೦೦ ಕೋಟಿ ರೂಪಾಯಿಗಳು) ಬಾಬ್ತು ಆಗಿದೆ. ಸಂಸತ್ತಿನಲ್ಲಿ ಹಾಗೂ ಹೊರಗೆ ನಡೆಯುತ್ತಿರುವ ಈ ಚರ್ಚೆಯ ಸಂದರ್ಭದಲ್ಲಿ ಪ್ರಸ್ತುತ ಚರ್ಚೆಯನ್ನೂ ಸಮೀಕರಿಸುವುದು ಅವಶ್ಯಕ.

ಆಶ್ಚರ್ಯಕರ ಸಂಗತಿ ಎಂದರೆ ಯೋಜನಾ ಆಯೋಗದ ಸದಸ್ಯರಾದ ಸಂಸತ್ ಸದಸ್ಯರೊಬ್ಬರು ಐದು ರೂಪಾಯಿಗೆ ದೆಹಲಿಯಲ್ಲಿ ಹೊಟ್ಟೆ ತುಂಬ ಊಟ ಮಾಡಬಹುದೆಂದು ಅಪ್ಪಣೆ ಕೊಡಿಸಿದರು. ಅವರು ಸಂಸತ್ ಸದಸ್ಯರಾಗಿರುವುದರಿಂದ ನಾನು ಅವರ ಮಾತನ್ನು ನಂಬುತ್ತೇನೆ. ಏಕೆಂದರೆ ದೇಶದಲ್ಲಿ ಅತಿ ಹೆಚ್ಚು ಸಬ್ಸಿಡಿಯುಕ್ತ ಕ್ಯಾಂಟೀನ್ ಎಂದರೆ



ಸಂಸತ್ತಿನ ಕ್ಯಾಂಟೀನ್. ಅಲ್ಲಿ ಐದು ರೂಪಾಯಿಗೆ ಸಂಸತ್ ಸದಸ್ಯರಿಗೆ ಹೊಟ್ಟೆ ಭರ್ತಿ ಊಟ ಸಿಗಬಹುದು (ಪ್ರಾಯಶಃ ಅವರು ಅದನ್ನೂ ಕೂಡ ಪಾವತಿಸುವುದಿಲ್ಲ !). ಆದರೆ ಜನಸಾಮಾನ್ಯರ ಪಾಡೇನು ?

ಇರಲಿ, ಈಗ ನಮ್ಮ ಪ್ರಸ್ತುತ ವಿಚಾರಕ್ಕೆ ಬರೋಣ. ಗ್ರಾಮೀಣ ಭಾರತ ಎಂದರೇನು ? 'ಗ್ರಾಮೀಣ' ಎಂಬುದರ ಪರಿಕಲ್ಪನೆ ಏನು ? ಎರಡನೆ ಪ್ರಶ್ನೆ ವರದಿ ಮಾಡುವುದು ಎಂದರೇನು ? ಗ್ರಾಮೀಣ ವರದಿ ಎಂದರೇನು ? ಮಾನವ ಅಸ್ತಿತ್ವದ ದೃಷ್ಟಿಯಿಂದ ಭೂಗ್ರಹದ ಮೇಲೆ ಅತ್ಯಂತ ಸಂಕೀರ್ಣ ಭೂಭಾಗದಲ್ಲಿ (೨೦೧೧ರ ಜನಗಣತಿಯ ಪ್ರಕಾರ) ೫೦೦ರಿಂದ ೭೦೦ ಭಾಷೆಗಳನ್ನು ಮಾತನಾಡುವ ೮೩ ಕೋಟಿ ಜನರು ಸಾಂಸ್ಕೃತಿಕವಾಗಿ ಹಾಗೂ ಸಾಮಾಜಿಕವಾಗಿ ಭಿನ್ನವಾದ ಅತ್ಯಂತ ಸಂಕೀರ್ಣ ಬದುಕಿನ ಸಮುದಾಯಕ್ಕೆ ಸೇರಿದವರು. ಭಾಷಾ ವೈವಿಧ್ಯತೆಯನ್ನೇ ಗಮನಿಸಿ. ಕೇವಲ ನಾಲ್ಕು ಜನರು ಮಾತ್ರ ಮಾತನಾಡುವ ತ್ರಿಪುರದ ಸೈಮೂರ್ ಭಾಷೆ; ೫೦೦ ಜನರು ಮಾತನಾಡುವ ಅಂಡಮಾನ್‌ನ ಕೋಯಾ ಭಾಷೆಯ ಸಮುದಾಯಗಳಲ್ಲಿ ಆರ್ಥಿಕತೆ, ಸಂಸ್ಕೃತಿ ಹೇಗೆ ಕೆಲಸ ಮಾಡುತ್ತವೆ ಎಂದರೆ, ಆ ಸಮುದಾಯಗಳ ಸಾಮಾಜಿಕ ಸಂಘಟನೆಗಳ, ಸಂಘಗಳ ಸಂಕೀರ್ಣತೆಗಳೇ ಒಂದು ವಿಶೇಷ ಎನಿಸುತ್ತವೆ. ತಮಾಷೆಯ ವಿಷಯವೆಂದರೆ, ಸಂವಿಧಾನದ ೮ನೇ ಪರಿಚ್ಛೇದದಲ್ಲಿ ೨೨ ಭಾಷೆಗಳನ್ನು ಅಳವಡಿಸಲಾಗಿದೆ. ಈ ಪೈಕಿ ಅನೇಕ ರಾಜ್ಯಗಳ ಅಧಿಕೃತ ಭಾಷೆ ಇದರಲ್ಲಿಲ್ಲ. ತ್ರಿಪುರ, ಮಿಝೋರಾಂ ರಾಜ್ಯಗಳ ವಿಧಾನಸಭೆಯು ವ್ಯವಹರಿಸುವ ಭಾಷೆಗಳೂ ಸಹ ೮ನೇ ಪರಿಚ್ಛೇದದ ಭಾಗವಲ್ಲ. ಇದರರ್ಥ ೮ನೇ ಪರಿಚ್ಛೇದವೂ ಸಹ ಇಡೀ ದೇಶದ ಭಾಷೆಗಳನ್ನು ಸೂಕ್ತವಾಗಿ ಪರಿಗಣಿಸಿಲ್ಲ. ಇಡೀ ದೇಶವು ಸಂಕೀರ್ಣ ಮತ್ತು ಜಟಿಲ ಸಾಮಾಜಿಕ ಹಾಗೂ ಸಾಂಸ್ಕೃತಿಕ ಘಟಕ. ಗ್ರಾಮೀಣ ಭಾರತವೆಂದರೆ, ನನ್ನ ಅಭಿಪ್ರಾಯದಲ್ಲಿ ಜಗತ್ತಿನ ಅತಿ ವಿಶಾಲವಾದ ಕಲೆ, ಕಲಾವಿದರ ಕಲಾತ್ಮಕ ನೈಪುಣ್ಯಗಳ ಸಂಗ್ರಹ. ಕರ್ನಾಟಕದಲ್ಲಿ ಎಷ್ಟು ನೇಕಾರಿಕೆ ಕಲಿಸುವ ಸಂಸ್ಥೆಗಳಿವೆ ? ಕುಂಬಾರಿಕೆಯನ್ನು ಕಲಿಸುವ ಎಷ್ಟು ಸಂಸ್ಥೆಗಳಿವೆ, ಕಲಾಶಾಲೆಗಳಿವೆ ಎನ್ನುವುದು ದೇವರಿಗೆ ಮಾತ್ರ ಗೊತ್ತಿರುವ ವಿಷಯ. ಆದರೆ ಈ ವೃತ್ತಿಗಳಿಗೆ ನೂರಾರು ವರ್ಷಗಳ ಪರಂಪರೆ ಇದೆ. ಇಂದು ಇವೆಲ್ಲವೂ ಹಲವಾರು ದೃಷ್ಟಿಯಿಂದ ನಾಟಕೀಯ ಪರಿವರ್ತನೆಗೆ ಗುರಿಯಾಗಿವೆ. ಈ ಅಂಶವು ಪತ್ರಿಕಾ ವೃತ್ತಿಯ ದೃಷ್ಟಿಯಿಂದ ಮಹತ್ವಪೂರ್ಣವಾದುದು.

ವರದಿ ಎಂದರೇನು ? ಪತ್ರಿಕಾ ವೃತ್ತಿ ಎಂದರೇನು ? ಎನ್ನುವ ಪ್ರಶ್ನೆಗಳನ್ನು ಈಗ ಪರಿಶೀಲಿಸೋಣ. ಪತ್ರಿಕಾ ವೃತ್ತಿ ಅಥವಾ ವರದಿ ಎಂದರೆ ತಪಾಸಣಾ ಕಲೆ ಮತ್ತು ವಿಜ್ಞಾನ ಅಥವಾ ತಪಾಸಣಾ ಶಿಸ್ತು, ವಸ್ತುಸ್ಥಿತಿಯನ್ನು ಗ್ರಹಿಸುವ ನೈಪುಣ್ಯತೆ. ವರದಿಗಾರಿಕೆ ಎಂದರೆ ಘಟನಾವಳಿಗಳನ್ನು ತಿಳಿಸುವುದಲ್ಲದೆ ಅದರ ಸತ್ಯಾಸತ್ಯತೆಯನ್ನು ಹೋಲಿಸಿ/ತಾಳೆ ಹಾಕಿ ನೋಡುವ, ಪರಿಶೀಲಿಸುವ, ವಿವರಿಸುವ ಶಿಸ್ತು. ಜಗತ್ತಿನ ಯಾವುದೇ ಭಾಗದಲ್ಲಾದರೂ ಸರಿಯೆ, ಪತ್ರಿಕಾ ವೃತ್ತಿಗೆ ಇದೇ




ಅತಿ ದೊಡ್ಡ ಸವಾಲು. ಇಂದು ಪತ್ರಿಕಾ ವೃತ್ತಿ ಏನನ್ನು ಮಾಡುತ್ತಿದೆ ? ಏನನ್ನು ಮಾಡಬೇಕಿದೆ ? ಮಾಧ್ಯಮಗಳು ತಾವು ಏನನ್ನು ಪ್ರಾಮುಖ್ಯವೆಂದು ಪರಿಗಣಿಸುತ್ತವೆಯೋ ಅದನ್ನು ಜನರಿಗೆ ಕುತೂಹಲಕಾರಿಯಾದುದು ಎಂಬಂತೆ ಆಸಕ್ತಿ ಕೆರಳಿಸುವ ಕಾರ್ಯ ಮಾಡುತ್ತಿವೆ, ಅಷ್ಟೆ. ಉದಾಹರಣೆಗೆ, ಸಂಜಯ್ ದತ್ ಜೈಲಿನಲ್ಲಿ ಯಾವ ಉಡುಪು ಧರಿಸಿದ್ದಾನೆಂಬುದು ದೊಡ್ಡ ವಿಷಯವೆಂಬಂತೆ, (ಬಹಳ ಪ್ರಾಮುಖ್ಯವೆಂಬಂತೆ ಪರಿಗಣಿಸಿ) ಓದುಗರಿಗೆ, ವೀಕ್ಷಕರಿಗೆ ಅದನ್ನೇ ಉಣಬಡಿಸುತ್ತವೆ.

ನನ್ನ ಅಭಿಪ್ರಾಯದಲ್ಲಿ, ಅದರಲ್ಲೂ ವಿಶೇಷವಾಗಿ ಗ್ರಾಮೀಣ ಭಾರತದ ವರದಿಯ ವಿಷಯದಲ್ಲಿ ನೈಜ ಪತ್ರಿಕಾ ವೃತ್ತಿ ಇದಕ್ಕೆ ವಿರುದ್ಧವಾದುದನ್ನು ಮಾಡಬೇಕಿದೆ. ಅಂದರೆ ಜನರಿಗೆ ಯಾವುದು ಮುಖ್ಯವೋ ಅದನ್ನು ಅವಶ್ಯಕವೆನ್ನುವಂತೆ ಕುತೂಹಲ ಹುಟ್ಟಿಸುವ ರೀತಿಯಲ್ಲಿ ಆಸಕ್ತಿದಾಯಕವಾಗಿ ಜನರಿಗೆ ತಲುಪಿಸಬೇಕು. ಇದೇ ಪತ್ರಿಕಾ ವೃತ್ತಿಯ, ವರದಿಗಾರಿಕೆಯಲ್ಲಿನ ನಿಜವಾದ ಪ್ರಶ್ನೆ. ನಮಗೆ ಕಥೆಗಳ ಕೊರತೆ ಇಲ್ಲ. ಕೊರತೆ ಇರುವುದು ನಮ್ಮ ಇಚ್ಛಾಶಕ್ತಿಯಲ್ಲಿ ಹಾಗೂ ಪತ್ರಕರ್ತರಾಗಿ ನಾವು ಮುಖ್ಯ ವಿಚಾರಗಳನ್ನು ಸ್ವಾರಸ್ಯಕರವಾಗಿಸಿ, ಅವನ್ನು ಜನರು ಓದಲೇಬೇಕೆಂಬ ಅಭಿಲಾಷೆ ಉಂಟಾಗುವಂತೆ ವರದಿ ಮಾಡುವುದರಲ್ಲಿ ವಿಫಲರಾಗಿದ್ದೇವೆ.

ಇಂದು ನಮ್ಮ ದೇಶದ ಯಾವುದೇ ಪತ್ರಿಕೆಯಲ್ಲಿ ಕೃಷಿಗೆ ಸಂಬಂಧಿಸಿದಂತೆ ಕ್ಷೇತ್ರ ವರದಿಗಾರರಿಲ್ಲ. ಬಿತ್ತನೆ ಪೂರ್ವ ಸಿದ್ಧತಾ ಹಂತದಿಂದ ಹಿಡಿದು ಕಟಾವಿನ ನಂತರ ಸಂತೆಗೆ / ಮಾರುಕಟ್ಟೆಗೆ ಒಯ್ಯುವವರೆಗಿನ ಸಮಸ್ಯೆಗಳನ್ನು ವರದಿ ಮಾಡುವ ವ್ಯವಸ್ಥೆ ಯಾವುದೇ ಪತ್ರಿಕೆಯಲ್ಲಿಲ್ಲ. ಕಾರ್ಮಿಕರ ಸಮಸ್ಯೆಗಳನ್ನು ವರದಿ ಮಾಡುವ ಬಾತ್ಮೀದಾರರಿಲ್ಲ. ನನ್ನ ವೃತ್ತಿ ಬದುಕಿನ ಪ್ರಾರಂಭದ ಹಂತದಲ್ಲಿ ಕಾರ್ಮಿಕರ ವಿಷಯಗಳ ಪೂರ್ಣಾವಧಿ ಬಾತ್ಮೀದಾರರು ಇರುತ್ತಿದ್ದರು. ಇಂದು ವಾಣಿಜ್ಯ ಬಾತ್ಮೀದಾರರೇ ಕಾರ್ಮಿಕರ ವಿಷಯಗಳನ್ನು ಕಂಪನಿಯ ಕೈಗಾರಿಕಾ ಬಾಂಧವ್ಯದ ಅಧಿಕಾರಿಗಳು ಹೇಳಿದಂತೆ ವರದಿ ಮಾಡುತ್ತಿದ್ದಾರೆ.

ಆದ್ದರಿಂದಲೆ ಇಂದು ಗ್ರಾಮೀಣ ಭಾರತವೆಂಬ 'ಮಂತ್ರಮುಗ್ಧ ವಾಸ್ತವ'ವನ್ನು ಒಳಗೊಳ್ಳುವಂತಹ ವರದಿಗಾರಿಕೆಯಾಗಲಿ ಪತ್ರಿಕಾ ವೃತ್ತಿಯಾಗಲಿ ಇಲ್ಲದಿರುವ ವಾತಾವರಣ ಮೂಡಿರುವುದು.

ಒಮ್ಮೆ ಮಿತ್ರರಾದ ಜೈನಿಕ್ ಹರ್ಡಿಕರ್ ಮತ್ತು ನಾನು ಮಹಾರಾಷ್ಟ್ರದ ಮರಾಠವಾಡ ಪ್ರದೇಶದಲ್ಲಿ ಕಾರಿನಲ್ಲಿ ಹೋಗುತ್ತಿದ್ದೆವು. ಆಗ ಕೆಲವರು ತಮಿಳು ಮಾತಾಡುವ ಧ್ವನಿ ಕೇಳಿಬಂದಿತು. ಅವರು ಯಾರೆಂದು ವಿಚಾರಿಸಿದಾಗ ಅವರು ಬೋರ್‌ವೆಲ್ ಕೊರೆಯಲು ಮರಾಠವಾಡ ಪ್ರದೇಶಕ್ಕೆ ಆಗಮಿಸಿದ್ದ ತಮಿಳು ಕಾರ್ಮಿಕರು. ಅವರೆಲ್ಲಾ ಈರೋಡ್ ಸಮೀಪದ ತಿರುಚೆಂಗೂರ್ ಎಂಬ ಊರಿನವರು. ಅಸ್ಸಾಂ, ರಾಜಸ್ಥಾನ್ ದೇಶದ ಮತ್ತಿತರ ಭಾಗಗಳಲ್ಲಿ ಕೊಳವೆ ಬಾವಿ ಕೊರೆದು ಮರಾಠವಾಡ ಪ್ರದೇಶದಲ್ಲಿ ಬಾವಿ ಕೊರೆಯಲು ಸಂಚರಿಸುತ್ತಿದ್ದ ಕೆಲಸಗಾರರ ಗುಂಪು ಅದು. ಡ್ರೈವರ್ ಸೇರಿದಂತೆ ಅವರಲ್ಲಿ ಒಟ್ಟು ಇಪ್ಪತ್ತು ಜನರಿದ್ದರು. ಒಬ್ಬ ಮ್ಯಾನೇಜರ್, ಒಬ್ಬ ಅಡಿಗೆಯವನು, ಹನ್ನೆರಡು ಜನ ಕೂಲಿಯಾಳುಗಳು, ಇಬ್ಬರು ಡ್ರಿಲ್ಲರ್‌ಗಳು, ಇಬ್ಬರು ಸಹಾಯಕ ಡ್ರಿಲ್ಲರ್‌ಗಳು. ತಮಿಳರು, ಕನ್ನಡಿಗರು, ಮಧ್ಯಪ್ರದೇಶ, ಜಾರ್ಖಂಡ್, ಛತ್ತೀಸ್‌ಘಡ, ಒರಿಸ್ಸಾ ಹೀಗೆ ಹಲವು ಪ್ರದೇಶಗಳಿಗೆ ಸೇರಿದ್ದ ಈ ಗುಂಪಿನಲ್ಲಿ ಹನ್ನೊಂದು ಭಾಷೆ ಮಾತನಾಡುವವರಿದ್ದು, ಇದೊಂದು ಇಡೀ ಭಾರತವನ್ನು ಪ್ರತಿನಿಧಿಸುವ ಲಕ್ಷಣವಿರುವ ಸಂಗತಿಯಾಗಿತ್ತು.

ಅಂತರ್ಜಲವು ಅತೀ ಬಳಕೆಯಿಂದಾಗಿ ತೀರಾ ಕೆಳಮಟ್ಟಕ್ಕೆ ಇಳಿದಿದೆ. ಕರ್ನಾಟಕದಲ್ಲಿ ಅದು ತೀವ್ರ ಕುಸಿತಕ್ಕೆ ಗುರಿಯಾಗಿದ್ದು, ಸರಾಸರಿ ಅಂತರ್ಜಲದ ಮಟ್ಟ ೧೫೦೦ ಅಡಿಗಳಷ್ಟು ಕೆಳಗೆ ಹೋಗಿದೆ. ಮುಂದಿನ ದಿನಗಳಲ್ಲಿ ತೀವ್ರವಾದ ನೀರಿನ ಬಿಕ್ಕಟ್ಟು ಕಾದಿದೆ. ಆದರೆ ಮಧ್ಯಮ ವರ್ಗದ ನಾವು ಈ ಬಗ್ಗೆ ಚಿಂತಿಸುತ್ತಿಲ್ಲ. ನಾವು ಈ ಬಿಕ್ಕಟ್ಟಿನ ತೀವ್ರತೆಯಿಂದ ರಕ್ಷಿತರಾಗಿದ್ದೇವೆ, ನೀರನ್ನು ಎಲ್ಲಿಂದಲೋ ಬಾಟಲಿಯಲ್ಲಿ ಪಡೆಯುತ್ತಿದ್ದೇವೆ. ಮಧ್ಯಮ ವರ್ಗದ ನಾವು ಬಾಟಲ್ ನೀರಿನ ಸಮುದಾಯವಾಗಿ ಪರಿವರ್ತನೆ ಹೊಂದಿದ್ದೇವೆ. ಬಾಟಲಿ ನೀರು ಸಹ ನಲ್ಲಿಯಿಂದಲೇ ಬರುತ್ತದೆ. ಕೆಲವೊಮ್ಮೆ ಬಾಟಲಿನ ಮೇಲೆ 'ಶುದ್ಧೀಕರಿಸಿದ ನಲ್ಲಿ ನೀರು' ಎಂದು ಲೇಬಲ್ ಸಹ ಇರುತ್ತದೆ.

ಇವೆಲ್ಲವನ್ನು ಕಂಡಾಗ ನನಗೆ ನಮ್ಮ ದೇಶದಲ್ಲಿ ಎಷ್ಟು ಕೊಳವೆಬಾವಿಗಳಿರಬಹುದು ಎಂಬ ಪ್ರಶ್ನೆ ಎದುರಾಯಿತು. ಈ ಬಗ್ಗೆ ನಮ್ಮ ದೇಶದಲ್ಲಿ ಯಾವುದೇ ನಿಯಂತ್ರಣವಿಲ್ಲ. ಗ್ರಾಮೀಣ ಪ್ರದೇಶದ ವೈಪರೀತ್ಯವನ್ನು ಗಮನಿಸಿ. ೧೯೨೦-೩೦ರ ದಶಕದಲ್ಲಿ ೨೦-೩೦ ಅಡಿಗಳ ನೆಲಬಾವಿಯನ್ನು ನಿರ್ಮಿಸಿದರೆ, ಅಧಿಕಾರಿಗಳಿಗೆ ಅರ್ಜಿ ಭರ್ತಿ ಮಾಡಿ, ಸೆಸ್ ಪಾವತಿಸಿ, ನೋಂದಾಯಿಸಬೇಕೆನ್ನುವ ನಿಯಮಗಳಿದ್ದವು, ನಿಯಂತ್ರಣಗಳಿದ್ದವು. ಆದರೆ ಈಗ ೧೫೦೦ ಅಡಿ ಕೊಳವೆಬಾವಿ ನಿರ್ಮಿಸಿದರೆ ಈ ಯಾವ ರಗಳೆಯೂ ಇಲ್ಲ. ಇದರ ಪರಿಣಾಮವಾಗಿ ಇಂದು ಮಹಾರಾಷ್ಟ್ರವೊಂದರಲ್ಲಿಯೇ

ಹತ್ತು ಲಕ್ಷಕ್ಕೂ ಹೆಚ್ಚು ಕೊಳವೆಬಾವಿಗಳು ಇವೆ ಎಂದು ಅಂದಾಜಿಸಲಾಗಿದೆ. ಇಡೀ ದೇಶದಲ್ಲಿ ಎಷ್ಟು ಕೊಳವೆ ಬಾವಿಗಳಿರಬಹುದೆಂಬ ನಿಖರ ಲೆಕ್ಕವೇ ಇಲ್ಲ. ಏಕೆಂದರೆ ಅವುಗಳ ಲೆಕ್ಕ ಇಡುವ ವ್ಯವಸ್ಥೆಯೇ ಇಲ್ಲ. ಕೊಳವೆಬಾವಿಗಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಲೇ ಇದೆ. ಕರ್ನಾಟಕದ ಪರಿಸ್ಥಿತಿಯಂತೂ ಅತ್ಯಂತ ಗಂಭೀರವಾಗಿದೆ.

ನಂತರ ನಾನು ತಿರುಚೆಂಗೂರ್‌ನಲ್ಲಿ ಡ್ರಿಲ್ಲರ್‌ಗಳ ಬಗ್ಗೆ ವಿಚಾರಿಸಿದೆ. ಮೊದಲೆ ತಿಳಿಸಿದಂತೆ ಶೇಕಡ ೮೦ರಷ್ಟು ರಿಗ್‌ಗಳು ತಿರುಚೆಂಗೂರ್‌ನಿಂದಲೇ ಬರುತ್ತವೆ. ಅದರ ಉತ್ಪಾದನಾ ವೆಚ್ಚ ಸುಮಾರು ೮೦ ಲಕ್ಷ ರೂಪಾಯಿಗಳಿರಬಹುದು. ಅದನ್ನು ಸುಮಾರು ಒಂದರಿಂದ ಒಂದೂಕಾಲು ಕೋಟಿ ರೂಪಾಯಿಗಳಿಗೆ ಮಾರಾಟ ಮಾಡುತ್ತಾರೆ. ಆಶ್ಚರ್ಯಕರ ಸಂಗತಿ ಎಂದರೆ, ರಿಗ್‌ಗಳನ್ನು ಉತ್ಪಾದಿಸುವ ಊರಿನಲ್ಲಿಯೇ ಅವುಗಳನ್ನು ಬಳಸುತ್ತಿರಲಿಲ್ಲ. ಈ ಬಗ್ಗೆ ನಾನು ಆ ಬೋರ್‌ವೆಲ್ ಕಾರ್ಮಿಕರನ್ನು ವಿಚಾರಿಸಿದಾಗ, ಈರೋಡ್, ತಿರುಚೆಂಗೂರ್ ಇತ್ಯಾದಿ ಸುತ್ತಮುತ್ತಲಿನ ಪ್ರದೇಶದಲ್ಲಿ ಬಹಳ ಹಿಂದೆಯೆ ಅಂತರ್ಜಲ ಖಾಲಿಯಾಗಿದೆ, ಆದ್ದರಿಂದ ಈ ಪ್ರದೇಶದಲ್ಲಿ ಬಾವಿ ಕೊರೆಯುವುದರಿಂದ ಏನೂ ಪ್ರಯೋಜನವಿಲ್ಲ ಎಂದು ತಿಳಿಸಿದರು. ನಾನು ನಂತರ ಬೋರ್‌ವೆಲ್ ಕೊರೆಯುವ ರಿಗ್‌ಗಳ ಸಂಖ್ಯೆ ಎಷ್ಟಿರಬಹುದೆಂಬ ಪ್ರಶ್ನೆಗೆ ಉತ್ತರ ಹುಡುಕಲು ಪ್ರಯತ್ನಿಸಿದೆ, ಆಗ ಒಬ್ಬೊಬ್ಬರೂ ಒಂದೊಂದು ಸಂಖ್ಯೆ ತಿಳಿಸಿದರು. ಟ್ರಕ್ ಮಾಲೀಕರ ಸಂಘದ ಅಧ್ಯಕ್ಷರು ಸುಮಾರು ೭-೮ ಸಾವಿರಕ್ಕಿಂತ ಹೆಚ್ಚಿರಲಾರದೆಂದರು. ಇನ್ನೊಬ್ಬರು ಹೆಚ್ಚೆಂದರೆ ೫ ಸಾವಿರ ಇರಬಹುದೆಂದರು. ರಿಗ್ ಆಪರೇಟರ್‌ಗಳು ಹಾಗೂ ಕಾರ್ಮಿಕರನ್ನು ವಿಚಾರಿಸಿದಾಗ ೨೫ ಸಾವಿರಕ್ಕಿಂತಲೂ ಅಧಿಕವಾಗಿರುವುವೆಂದು ತಿಳಿಸಿದರು. ಅದು ಹೇಗೆಂದು ಪ್ರಶ್ನಿಸಿದಾಗ, ಮಾಲೀಕರು ತೆರಿಗೆ ಉಳಿತಾಯಗಳ ಕಾರಣ ಕರ್ನಾಟಕ, ಕೇರಳ ರಾಜ್ಯಗಳಲ್ಲಿ ಇವುಗಳನ್ನು ನೋಂದಾಯಿಸುತ್ತಾರೆಂದು ತಿಳಿಸಿದರು. ಸದ್ಯಕ್ಕೆ ನಮ್ಮ ಲೆಕ್ಕಾಚಾರಕ್ಕಾಗಿ ೨೦,೦೦೦ ರಿಗ್‌ಗಳು ಇವೆ ಎಂದು ಭಾವಿಸೋಣ. ದಿನಕ್ಕೆ ಎಷ್ಟು ಅಡಿ ಆಳಕ್ಕೆ ಬಾವಿ ಕೊರೆಯುವಿರಿ ಎಂದು ಪ್ರಶ್ನಿಸಿದಾಗ ಅವರು ವರ್ಷಕ್ಕೆ ಇನ್ನೂರು ದಿನ ಕೆಲಸ ಮಾಡುವುದಾಗಿ (ಅವರು ವರ್ಷವಿಡೀ ದೂರ ದೂರದ ಪ್ರದೇಶಗಳಿಗೆ ಪ್ರಯಾಣಿಸುತ್ತಿರುತ್ತಾರೆ. ಆಫ್ರಿಕ ಖಂಡದ ೧೬ ದೇಶಗಳಲ್ಲಿ ಕಾರ್ಮಿಕರಿಗೆ ರಿಗ್ ಕೊರೆಯುವ ತರಬೇತಿ ನೀಡುತ್ತಾರೆ) ತಿಳಿಸಿ, ಮೃದುಮಣ್ಣಿನ ನೆಲದಲ್ಲಿ ದಿನವೊಂದಕ್ಕೆ ೧೩೦೦-೧೫೦೦ ಅಡಿ ಆಳದ ಬಾವಿ ಕೊರೆದರೆ ಆಂಧ್ರಪ್ರದೇಶದ ಗಡಸು ಕಲ್ಲಿನ ನೆಲದಲ್ಲಿ ೧೦೦೦ ಅಡಿಯವರೆಗೂ ಕೊರೆಯಬಹುದು ಎಂದು ತಿಳಿಸಿದರು. ವರ್ಷದ ೨೦೦ ದಿನಗಳ ಕಾಲ ೨೦೦೦೦ ರಿಗ್‌ಗಳು ಕೆಲಸ ಮಾಡಿ ಸರಾಸರಿ ೧೦೦೦ ಅಡಿ ಆಳದ ಬಾವಿಗಳನ್ನು ಕೊರೆದರೆ ಅದರ ಪರಿಣಾಮಗಳೇನು ಎಂಬುದು ಯೋಚಿಸಬೇಕಾದ ವಿಷಯ. ನಮ್ಮಲ್ಲಿ ಒಂದು ರಾಷ್ಟ್ರವಾಗಿ ಕಥಾ, ಬುರ್ರಕಥಾ ಮತ್ತಿತರ ಕಥೆಗಳನ್ನು ಹೇಳುವ ಪರಂಪರೆಯೇ ಇದೆ. ಆದರೆ ಪತ್ರಿಕಾ ವೃತ್ತಿಯಲ್ಲಿ ಕಥೆ ಹೇಳುವ ಕಲೆಯೇ ಇಲ್ಲವಾಗಿದೆ. ಅಂಕಿ ಅಂಶಗಳನ್ನು ವರದಿ ಮಾಡುವ ಭರದಲ್ಲಿ ಅಲ್ಲಿ ನಡೆಯುವ ಪ್ರಹಸನಗಳನ್ನು ಗೌಣವಾಗಿಸುತ್ತೇವೆ. ಇದು ಒಂದು ಪ್ರವೃತ್ತಿಯಾಗಿದೆ. ಇತ್ತೀಚೆಗೆ ಗ್ರಾಮೀಣ ಭಾರತವು ದೇಶದ ಆರ್ಥಿಕತೆಯನ್ನೇ ಮುನ್ನಡೆಸಿದೆ ಎಂಬ ವೈಭವೀಕರಿಸುವ ಇನ್ನೊಂದು ಪ್ರವೃತ್ತಿ ಬೆಳೆಯುತ್ತಿದೆ. ಗ್ರಾಮೀಣ ಪ್ರದೇಶದಲ್ಲಿ ಹಲವಾರು ಪ್ರಕ್ರಿಯೆಗಳು ಘಟಿಸುತ್ತಿವೆ. ನನ್ನ ಅನಿಸಿಕೆಯಲ್ಲಿ ಎರಡು ಬಗೆಯ ಪತ್ರಿಕಾ ವೃತ್ತಿ ಇದೆ. ಒಂದು ಪತ್ರಿಕಾ ವೃತ್ತಿ, ಇನ್ನೊಂದು ಸ್ಟೆನೊಗ್ರಫಿ. ಪತ್ರಿಕಾ ವೃತ್ತಿಯ ಹೆಸರಿನಲ್ಲಿ ಶೇಕಡ ೮೦ರಷ್ಟು ಸ್ಟೆನೊಗ್ರಫಿ ನಡೆಯುತ್ತಿದೆ. ನಾನು ಇದೇ ರೀತಿಯ ಹೇಳಿಕೆಯನ್ನು ಒಮ್ಮೆ ತಮಿಳುನಾಡಿನಲ್ಲಿ ನೀಡಿದಾಗ ಅಲ್ಲಿದ್ದ ಮಹನೀಯರೊಬ್ಬರು ಪ್ರತಿಭಟಿಸಿ, ತಾವು ೩೮ ವರ್ಷಗಳ ಕಾಲ ನ್ಯಾಯಾಲಯದಲ್ಲಿ ಸ್ಟೆನೊಗ್ರಾಫರ್ ಆಗಿ ಕೆಲಸ ಮಾಡಿದ್ದೆನೆಂದು ತಿಳಿಸಿ, ಸ್ಟೆನೊಗ್ರಾಫರ್‌ಗಳು ಪತ್ರಿಕಾ ವೃತ್ತಿಯವರಿಗಿಂತ ಉತ್ತಮರು; ಏಕೆಂದರೆ, ಅವರು ಯಾರೇ ಉಕ್ತಲೇಖನ ನೀಡಿದರೂ ಪ್ರಾಮಾಣಿಕವಾಗಿ ಬರೆದುಕೊಳ್ಳುತ್ತಾರೆ, ಆದರೆ ಪತ್ರಿಕಾ ವೃತ್ತಿಯವರೂ, ಬಲಾಢ್ಯರೂ, ಅಧಿಕಾರಸ್ಥರ ಉಕ್ತಲೇಖನವನ್ನು ಮಾತ್ರ ಬರೆದುಕೊಳ್ಳುತ್ತಾರೆ ಎಂದರು. ಈಗ ನಮ್ಮ ಮುಂದಿರುವುದು ನೀವು ವರದಿಗಾರರಾಗುವಿರೋ ಅಥವಾ ಸ್ಟೆನೊಗ್ರಾಫರ್‌ಗಳಾಗುವಿರೋ ಎಂಬುದಷ್ಟೇ ಪ್ರಶ್ನೆ. ಸರ್ಕಾರಿ ದಾಖಲೆಗಳಿಂದ ಮಾಹಿತಿ ಪಡೆಯುವುದು, ಕಲೆಕ್ಟರ್ ಅಥವಾ ಅಧಿಕಾರಿಗಳಿಂದ ಹೇಳಿಕೆ ಪಡೆಯುವುದಷ್ಟೆ ಪತ್ರಿಕಾ ವೃತ್ತಿಯಾಗುವುದಿಲ್ಲ. ಪತ್ರಿಕಾ ವೃತ್ತಿ ಎಂದರೆ ಪಡೆಯಲಾದ ಮಾಹಿತಿಯನ್ನು ತಾಳೆ ಮಾಡಿ ನೋಡುವುದು, ತಪಾಸಣೆ ನಡೆಸುವ ಶಿಸ್ತು. ಈ ದೃಷ್ಟಿಯಿಂದ ಗ್ರಾಮೀಣ ವಿದ್ಯಮಾನಗಳ ವರದಿಗಾರಿಕೆ ಅರ್ಥಾತ್ ಮಾಹಿತಿ ಸಂಗ್ರಹಣೆಯೆ ಒಂದು ಆಸಕ್ತಿದಾಯಕ ಕಾರ್ಯ.

ಇತ್ತೀಚಿನ ದಿನಗಳಲ್ಲಿ ನಮ್ಮ ದೇಶದ ಅತಿ ಉತ್ತಮ ಅಧಿಕಾರಿಗಳಲ್ಲಿ ಒಬ್ಬರಾದ ಶೀಲಾರಾಣಿ ಚೂಂಕ್‌ರ್ ಕೇರಳವನ್ನು ಹೊರತುಪಡಿಸಿದಂತೆ ಮೊಟ್ಟಮೊದಲ ಬಾರಿಗೆ ಶೇಕಡ ೧೦೦ರಷ್ಟು ಸಾಕ್ಷರತೆಯನ್ನು ಸಾಧಿಸಿದ





ಜನತೆಯಲ್ಲಿ ಬೇರೂರಿರುವ ಮೌಢ್ಯವನ್ನು ಹೋಗಲಾಡಿಸುವ ಹೆಜ್ಜೆಯಾಗಿ ನವಕರ್ನಾಟಕ ಪ್ರಕಾಶನವು ಹೊರತಂದ ಐದು ವೈಚಾರಿಕ ಕೃತಿಗಳು ಹಾಗೂ ಇಂದಿನ ರಾಜಕೀಯ ಸೋಗಲಾಡಿತನವನ್ನು ಬಿಂಬಿಸುವ ಒಂದು ಕಾದಂಬರಿ – ಒಟ್ಟು ಆರು ಪುಸ್ತಕಗಳ ಲೋಕಾರ್ಪಣೆ ಇತ್ತೀಚೆಗೆ ನಡೆಯಿತು. ನಗರದ ಜೆ.ಸಿ. ರಸ್ತೆಯಲ್ಲಿನ 'ನಯನ' ಸಭಾಂಗಣದಲ್ಲಿ ಆಯೋಜಿಸಿದ ಈ ಸಮಾರಂಭದ ಅಧ್ಯಕ್ಷತೆ, ಪುಸ್ತಕಗಳ ಲೋಕಾರ್ಪಣೆ ಹಾಗೂ ಆರೂ ಕೃತಿಗಳ ಪರಿಚಯವನ್ನು ಯಶಸ್ವಿಯಾಗಿ ನಿರ್ವಹಿಸಿದವರು ಖ್ಯಾತ ಚಿಂತಕ ಡಾ॥ ಜಿ. ರಾಮಕೃಷ್ಣ. ಮುಖ್ಯ ಅತಿಥಿಯಾಗಿ ಮಹಾರಾಷ್ಟ್ರದ ಅಂಧಶ್ರದ್ಧಾ ನಿರ್ಮೂಲನ ಸಮಿತಿಯ ಶ್ರೀಮತಿ ಮುಕ್ತಾ ದಾಭೋಲ್ಕರ್ ವಿಶೇಷ ಉಪನ್ಯಾಸ ಮಾಡಿದರು. ಪುಸ್ತಕಗಳ ಲೇಖಕರು, ಅನುವಾದಕರು ವೇದಿಕೆಯಲ್ಲಿ ಉಪಸ್ಥಿತರಿದ್ದರು.



ತಮಿಳುನಾಡಿನ ಪುದುಕೋಟ್ಟೈ ಜಿಲ್ಲೆಯ ಕಲೆಕ್ಟರ್ ಆಗಿದ್ದರು. ಒಮ್ಮೆ ಭಾರತ ಸರ್ಕಾರ ಜಾನುವಾರುಗಳ ಗಣತಿಯನ್ನು ನಡೆಸಬೇಕೆಂದು ಉದ್ದೇಶಿಸಿತು. ಆ ತೀರ್ಮಾನದ ಜಾರಿಯನ್ನು ಜಿಲ್ಲಾ ಕಲೆಕ್ಟರ್‌ಗಳ ಹೊಣೆಯಾಗಿಸಿ ಆ ದಿಶೆಯಲ್ಲಿ ಆದೇಶಿಸಿತು. ಶೀಲಾರಾಣಿಯವರು ಸಂಬಂಧಪಟ್ಟ ಅಧಿಕಾರಿಗಳನ್ನೆಲ್ಲಾ ಕರೆದು ಸೂಕ್ತ ನಿರ್ದೇಶನ ನೀಡಿ, ತತ್ಸಂಬಂಧವಾದ ಫಾರಂಗಳನ್ನು ನೀಡಿ, ಫಾರಂಗಳ ಯಾವುದೇ ಕಲಂಗಳನ್ನು ಭರ್ತಿ ಮಾಡದೆ ಹಿಂದಿರುಗಿಸಕೂಡದೆಂದು ಆದೇಶಿಸಿದರು. ಕೆಲವು ದಿನಗಳ ನಂತರ ಫಾರಂಗಳನ್ನು ಪರಿಶೀಲಿಸಿದಾಗ ಪುದುಕೋಟ್ಟೈನಲ್ಲಿ ೬೦೦೦ ಒಂಟೆಗಳು ಇರುವುದು ಪತ್ತೆಯಾಯಿತು. ಆ ಪಶುಗಣತಿಯ ಪ್ರಕಾರ ಇಡೀ ರಾಜಸ್ಥಾನದಲ್ಲಿರುವ ಒಂಟೆಗಳು ಪುದುಕೋಟ್ಟೈಗೆ ವಲಸೆ ಬಂದಿದ್ದವು. ಶೀಲಾರಾಣಿಯವರು ಈ ಬಗ್ಗೆ ಅಧಿಕಾರಿಗಳನ್ನು ಪ್ರಶ್ನಿಸಿದಾಗ ಅವರು, "ಮೇಡಂ, ಯಾವುದೇ ಕಾಲಂ ಅನ್ನು ಖಾಲಿ ಬಿಡಬಾರದೆಂದು, ತಾವೆ ನಮಗೆ ಸೂಚಿಸಿದ್ದೀರಿ" ಎಂದು ತಿಳಿಸಿದರು. ಇದು ನಮ್ಮ ಆಡಳಿತ ವ್ಯವಸ್ಥೆಯ ಕ್ರಮರಹಿತ ಸ್ವಭಾವಕ್ಕೆ ಸಾಕ್ಷಿಯಾಗಿದೆ. ಶೀಲಾರಾಣಿಯವರು ಇತ್ತೀಚಿನ ವರ್ಷಗಳಲ್ಲಿ ತಮಿಳುನಾಡು ಕಂಡ ಅತ್ಯಂತ ಸಂವೇದನಾಶೀಲ, ದಕ್ಷ ಅಧಿಕಾರಿಯಾಗಿದ್ದರು. ಅವರಿಗೆ ತಮ್ಮ ತಪ್ಪಿನ ಅರಿವಾಗಿ ನಗು ಬಂದಿತು. ಆದರೆ ಪ್ರಶ್ನೆ ಏನೆಂದರೆ ಇಂತಹ ಎಷ್ಟು ತಪ್ಪುಗಳು ಅರಿವಿಗೆ ಬಾರದೆ ಹೋಗುತ್ತಿವೆ ಎಂಬುದು ನಿಮ್ಮ ಊಹೆಗೆ ಬಿಟ್ಟ ವಿಷಯ.

ಒಮ್ಮೆ ನಾನು ಮಧ್ಯಪ್ರದೇಶದಲ್ಲಿ ಪ್ರವಾಸ ಮಾಡುತ್ತಿದ್ದಾಗ ಭೋಪಾಲ್‌ನ ಹಿರಿಯ ಐ. ಎ. ಎಸ್. ಅಧಿಕಾರಿಗಳು ನನಗೆ ಜಾಗ್ವಾರ್ ಜಿಲ್ಲೆಯ ಒಂದು ನಿರ್ದಿಷ್ಟ ವಿಭಾಗಕ್ಕೆ ಭೇಟಿ ನೀಡಬೇಕೆಂದೂ, ಅಲ್ಲಿ ಮಳೆಗೆ ಸಂಬಂಧಿಸಿದ ಮಾಹಿತಿ ಸಂಗ್ರಹಣ ವಿಧಾನ ಅನನ್ಯವಾಗಿದ್ದು, ಅದೇ ವಿಧಾನವನ್ನು ಮಾದರಿಯಾಗಿಸಿ ಇಡೀ ರಾಜ್ಯಕ್ಕೆ ಅನ್ವಯಿಸಬೇಕೆಂದು ಶಿಫಾರಸ್ಸು ಮಾಡಲಾಗಿದೆ ಎಂದೆಲ್ಲಾ ತಿಳಿಸಿದರು. ಇದರಿಂದ ಪ್ರಭಾವಿತನಾಗಿ ನಾನು ಆ ಕೂಡಲೇ ಜಾಗ್ವಾರ್ ಜಿಲ್ಲೆಗೆ ಆ ನಿರ್ದಿಷ್ಟ ಅಧಿಕಾರಿಯನ್ನು ಭೇಟಿ ಮಾಡಲು ಹೋದೆ. ಅಲ್ಲಿ ಸಂಬಂಧಪಟ್ಟ ಅಧಿಕಾರಿಗಾಗಿ ಎರಡು ದಿನ ಕಾದು ಭೇಟಿ ಮಾಡಿ, "ನಿಮ್ಮ ಜಿಲ್ಲೆಯಲ್ಲಿ ಸತತ ಮೂರು ವರ್ಷಗಳಿಂದ ಕಾರ್ಯ ನಿರ್ವಹಿಸುತ್ತಿರುವ ಸುಸ್ಥಿತಿಯಲ್ಲಿರುವ ಒಂದೇ ಒಂದು ಮಳೆ ಮಾಪಕವೂ ಇಲ್ಲದೆ ನೀವು ಮಳೆ ಮಾಹಿತಿ / ಅಂಕಿ ಅಂಶಗಳನ್ನು ಹೇಗೆ ಸಂಗ್ರಹಿಸುತ್ತೀರಿ" ಎನ್ನುವ ಒಂದೇ ಒಂದು ಪ್ರಶ್ನೆಯನ್ನು ಕೇಳಿದೆ. ಅದಕ್ಕೆ ಅವರು ಎರಡು ಕಡತಗಳನ್ನು ತೋರಿಸಿದರು. ಒಂದು ದೊಡ್ಡ ಕಡತ, ಇನ್ನೊಂದು ಚಿಕ್ಕ ಕಡತ. ದೊಡ್ಡ ಕಡತದಲ್ಲಿ ವಿಭಾಗಾಧಿಕಾರಿಯವರು ಸರ್ಕಾರಕ್ಕೆ, ಜಿಲ್ಲಾ ಪರಿಷತ್‌ಗೆ ಹಲವು ಮೇಲ್ಮಟ್ಟದ ಅಧಿಕಾರಿಗಳಿಗೆ ಮಳೆ ಮಾಪಕದ ದುರಸ್ತಿ ಮಾಡಿಸಿಕೊಡುವಂತೆ ಅಥವಾ ಅದನ್ನು ಬದಲಾಯಿಸಿಕೊಡುವಂತೆ ಇಲ್ಲವೇ ಹೊಸ ಮಾಪಕವನ್ನು ಒದಗಿಸುವಂತೆ ಅದಕ್ಕೆ ಅಗತ್ಯ ಹಣಕಾಸು ನಿಗದಿಪಡಿಸಿ ಮಂಜೂರು ಮಾಡುವಂತೆ ಕೋರಿ ಬರೆದ ಪತ್ರಗಳಾಗಿದ್ದವು. ಆ ಚಿಕ್ಕ ಕಡತದಲ್ಲಿ ಜಾಗ್ವಾರ್ ಜಿಲ್ಲೆಯ ಬೇರೆ ಬೇರೆ ವಿಭಾಗಗಳಲ್ಲಿ ಸುರಿದ ಮಳೆಯ ವಿವರಗಳು ಇದ್ದವು. ತಾವು ಜಿಲ್ಲೆಯ ಇತರ ವಿಭಾಗಗಳಲ್ಲಿ ಲಭ್ಯವಿರುವ ಮಳೆಯ ಸರಾಸರಿ ಅಂಕಿ ಅಂಶಗಳ ಆಧಾರದ ಮೇಲೆ ತಮ್ಮ ವಿಭಾಗದ ಮಳೆಯ ಮಾಹಿತಿಯ ವರದಿಯನ್ನು ತಯಾರಿಸುವುದಾಗಿ ತಿಳಿಸಿದರು. ವಿಭಾಗದ ವರ್ಗೀಕರಣ ಕೇವಲ ಆಡಳಿತಾತ್ಮಕವಾದದ್ದೇ ವಿನಾ ಭೌಗೋಳಿಕವಾದುದಲ್ಲ. ಆದ್ದರಿಂದ ಜಿಲ್ಲೆಯ ಇತರ ವಿಭಾಗಗಳ ಸರಾಸರಿ ಆಧಾರವಿರುವುದರಿಂದ ತಮ್ಮ ವಿಭಾಗದ ಮಳೆಯ ಮಾಹಿತಿಯಲ್ಲಿ ಯಾವುದೇ ವ್ಯತ್ಯಯವಿಲ್ಲವೆಂದು, ಅಲ್ಲದೆ ಮಳೆಯ ನಮೂನೆಯು ಅಲ್ಪ ಕಾಲದಲ್ಲಿ ಬದಲಾಗುವುದಿಲ್ಲ ಎಂದು ತಮ್ಮ ವಿಧಾನವನ್ನು ಸಮರ್ಥಿಸಿಕೊಂಡರು. ಒಂದು ವೇಳೆ ನಾವು ಮಂಗಳೂರನ್ನು ೨-೩ ಆಡಳಿತಾತ್ಮಕ ವಿಭಾಗಗಳಾಗಿ ವಿಭಜಿಸಿದರೆ ಅದರ ಮಳೆ ನಮೂನೆ ಬದಲಾಗುವುದೇ ? ಎಂಬಂತಹ ತರ್ಕ ಅವರದು.

ನಾವು ಪತ್ರಕರ್ತರಾಗಿ ಈ ಎಲ್ಲಾ ಕಥೆಗಳನ್ನು ಹೇಗೆ ಶಕ್ತಿಶಾಲಿಯಾಗಿಸುತ್ತೇವೆ, ಅತಿ ಮುಖ್ಯವಾಗಿ ಈ ಕಥೆಗಳನ್ನು ಹೇಗೆ ಬದುಕಿನ ಜೊತೆ ಹೆಣೆಯುತ್ತೇವೆ ಎಂಬುದೇ ಇಲ್ಲಿನ ಪ್ರಮುಖವಾದ ಪ್ರಶ್ನೆ. ಆಂಧ್ರದಲ್ಲಿ ಬಾರೋಲೋರು ರೆಡ್ಡಿ ಎನ್ನುವ ಮಿತ್ರರೊಬ್ಬರು ತಮ್ಮ ತೋಟದಲ್ಲಿ ೮೬ ಕೊಳವೆಬಾವಿಗಳನ್ನು ನಿರ್ಮಿಸಿರುವುದಾಗಿ ಹೇಳಿಕೊಳ್ಳುತ್ತಿದ್ದರು. ಅದರ ಪರಿಣಾಮವಾಗಿ ಅವರನ್ನು ಎಲ್ಲರೂ ಬೋರ್‌ಲೋರು ರೆಡ್ಡಿ ಎಂದು ಕರೆಯುತ್ತಿದ್ದರು. ನಾವು ಎಂತಹ ನೀರಿನ ಬಿಕ್ಕಟ್ಟಿಗೆ ಎದುರಾಗಲಿದ್ದೇವೆ ಎನ್ನುವ ಪರಿವೆಯೇ ನಮಗಿಲ್ಲ. ಇದು ಮಳೆಯ ಬಿಕ್ಕಟ್ಟಲ್ಲ. ಪ್ರತಿ ಹತ್ತು ವರ್ಷಗಳಿಗೊಮ್ಮೆ ಒಂದೆರಡು ವರ್ಷ ಮಳೆ ಕೊರತೆ ಬೀಳಬಹುದು. ಆದರೆ ಇದನ್ನು ನಾವು ಹೇಗೆ ಗ್ರಹಿಸುತ್ತೇವೆ, ಹೇಗೆ ವರದಿ ಮಾಡುತ್ತೇವೆ ಎನ್ನುವುದೇ ಪ್ರಶ್ನೆ. ಮೊದಲನೆಯದಾಗಿ, ಮಳೆಯ ನಮೂನೆಯಲ್ಲಿ ಆಗುತ್ತಿರುವ ಬದಲಾವಣೆಗೆ ನಾವು ಹೊಂದಿಕೊಂಡಿಲ್ಲ. ಎರಡನೆಯದಾಗಿ ನಾವು ನೀರನ್ನು ಬಳಸುವ ರೀತಿಯಲ್ಲಿ, ಮಾನವನ ಚಟುವಟಿಕೆಯಲ್ಲಿ ಆಗುತ್ತಿರುವ ಬೃಹತ್ ಬದಲಾವಣೆ. ಇದನ್ನು ನಾವು ಸರಿಯಾಗಿ ಗ್ರಹಿಸಿದರೆ, ಆಗ ನಾವು ಕಥೆಯನ್ನು ಹೇಳುವ ಶಕ್ತಿಯನ್ನು ಪಡೆದುಕೊಳ್ಳುತ್ತೇವೆ.

ಒಮ್ಮೆ ನಾನು ಪಶ್ಚಿಮ ಮಹಾರಾಷ್ಟ್ರದ ಕಡೆ ಹೋಗುತ್ತಿದ್ದಾಗ, ಕೆಲವು ವಿದ್ಯಮಾನಗಳನ್ನು ಗಮನಿಸಿದೆ. ನಮ್ಮ ಸರ್ಕಾರಗಳ ಆಮದು ಸುಂಕ ನೀತಿ ಹೇಗಿದೆ ಎಂದರೆ ಕೃಷಿಗೆ ಅವಶ್ಯಕವಾದ ಟ್ರಾಕ್ಟರ್‌ಗೆ ಆಮದು ಸುಂಕ ಶೇ. ೧೪. ಆದರೆ ಮರ್ಸಿಡಿಸ್ ಬೆಂಜ಼್ ಕಾರಿಗೆ ಆಮದು ಸುಂಕ ಶೇ. ೬. ಇಂತಹ ತಾರತಮ್ಯ ಗ್ರಾಮೀಣ ಭಾರತದ ಎಲ್ಲ ಹಂತಗಳಲ್ಲಿಯೂ ಇದೆ. ವರದಿಗಾರಿಕೆ ಪರಿಣಾಮಕಾರಿಯಾಗಿರಬೇಕಾದರೆ ತಾಳೆ ಹಾಕಿ ನೋಡುವ ಶಿಸ್ತು, ಅತಿ ಮುಖ್ಯವಾಗಿ ಕೃಷಿ ಪ್ರಕ್ರಿಯೆಯ ಜನರನ್ನು ಭೇಟಿ ಮಾಡುವುದು, ಅವರೊಂದಿಗೆ ಸಂವಾದ ನಡೆಸುವುದು, ಸಂಶೋಧನೆ ಹಾಗೂ ಅಲ್ಲಿ ಸಂಗ್ರಹಿಸಿದ ಮಾಹಿತಿಗೆ ಮಾಧ್ಯಮವಾಗುವುದು ಇತ್ಯಾದಿಗಳನ್ನು ಬೇಡುತ್ತದೆ.

ಈ ವಿಚಾರದಲ್ಲಿ ನನ್ನ ಪ್ರಕಾರ ೨೦೧೧ರ ಜನಗಣತಿಯು ಅನನ್ಯವಾದುದು. ಹಿಂದಿನ ಯಾವುದೇ ಜನಗಣತಿಯು ೨೦೧೧ರ ಜನಗಣತಿಯಷ್ಟು ವಿಶೇಷವಲ್ಲ. ಏಕೆಂದರೆ ಹಿಂದಿನ ಜನಗಣತಿಗಳಿಗಿಂತ ಭಿನ್ನವಾಗಿ ೨೦೧೧ರ ಜನಗಣತಿಯು ವಿಶಿಷ್ಟವಾದ ಸಂಗತಿಯನ್ನು ಅನಾವರಣಗೊಳಿಸುತ್ತದೆ. ಅದೆಂದರೆ, ಅದರ ಪ್ರಕಾರ ದೇಶದ ಜನಸಂಖ್ಯೆಗೆ ಗ್ರಾಮೀಣ ಜನಸಂಖ್ಯೆಗಿಂತ ನಗರ ಪ್ರದೇಶದ ಜನಸಂಖ್ಯೆಯು ಹೆಚ್ಚಿನ ಪ್ರತಿಶತ ಕೊಡುಗೆಯನ್ನು ನೀಡಿದೆ. ಮತ್ತು ೨೦೦೧-೨೦೧೧ರ ಅವಧಿಯಲ್ಲಿ ಗ್ರಾಮೀಣ ಪ್ರದೇಶದ ಜನಸಂಖ್ಯೆಯು ೯೦ ಮಿಲಿಯನ್ ಹೆಚ್ಚು ಜನರನ್ನು ಸೇರಿಸಿದ್ದರೆ, ನಗರ ಪ್ರದೇಶವು ೯೧ ಮಿಲಿಯನ್ ಜನರನ್ನು ದೇಶದ ಜನಸಂಖ್ಯೆಗೆ ಸೇರಿಸಿದೆ. ಆದರೆ ಒಟ್ಟು ಸಂಖ್ಯೆಯ ದೃಷ್ಟಿಯಿಂದ ನೋಡಿದರೆ ಗ್ರಾಮೀಣ ಪ್ರದೇಶದ ಜನಸಂಖ್ಯೆ ಈಗಲೂ ಮುಂದಿದೆ ಎಂಬುದು ನಿಜ. ಹಿಂದಿನ ಜನಗಣತಿಯ ಅವಧಿಯಲ್ಲಿನ ಇದೇ ಅಂಕಿ ಅಂಶಗಳನ್ನು ಹೋಲಿಸಿ ನೋಡೋಣ. ೧೯೯೧-೨೦೦೧ರ ಅವಧಿಯಲ್ಲಿ ನಗರ ಪ್ರದೇಶದ ಜನಸಂಖ್ಯೆ ೬೮ ಮಿಲಿಯನ್ ಹೆಚ್ಚಳ ಕಂಡಿದ್ದರೆ ಗ್ರಾಮೀಣ ಭಾರತದ ಜನಸಂಖ್ಯೆಯಲ್ಲಿ ೧೧೩ ಮಿಲಿಯನ್ ಹೆಚ್ಚಳವಾಗಿತ್ತು. ಈ ಮಾಹಿತಿಗಳಲ್ಲಿ ಎಷ್ಟು ಸ್ವಾರಸ್ಯಕರ ಕಥೆಗಳಿವೆ ಎಂಬುದೇ ಅತ್ಯಂತ ಆಸಕ್ತಿದಾಯಕ ಸಂಗತಿ.

ತೆಲಂಗಾಣದ ಪೋಲೆಪಲ್ಲಿ ಎಂಬ ಊರಿನಲ್ಲಿ ಅರಣ್ಯನಾಶದಿಂದ ಕಾಡಿನ ಮೇಲೆ ಅವಲಂಬಿತರಾದ ನೂರಾರು ಜನರ ಬದುಕು ನಾಶವಾಯಿತು.

ಅನಂತಪುರ ಜಿಲ್ಲೆಯ ನಲ್ಲಮಾಡ ಎಂಬ ಊರಿಗೆ ನಾನು ಆಗಾಗ್ಗೆ ಭೇಟಿ ನೀಡುತ್ತಿದ್ದೆ. ಅಲ್ಲಿನ ಎರಡು ಹಳ್ಳಿಗಳಲ್ಲಿ ಸಿಗುತ್ತಿದ್ದ ನೈಜ ಸಹಜ ಖನಿಜಮಯ ಸಿಹಿ

ನೀರಿನ ಬಗ್ಗೆ ಅಲ್ಲಿನ ಜನರಿಗೆ ಹೆಮ್ಮೆ ಇತ್ತು. ನಾನು ಅಲ್ಲಿಗೆ ಸುಮಾರು ೧೦–೧೨ ಬಾರಿ ಭೇಟಿ ನೀಡಿದ್ದೆ. ೨೦೦೦ದ ಇಸವಿಯವರೆಗೂ ಸಂಪೂರ್ಣ ಮದ್ಯಪಾನ ವಿರೋಧಿಯಾಗಿದ್ದ ನಾನು ಕೋಕೋ ಕೋಲ ಕುಡಿಯುತ್ತಿದ್ದೆ. ಕಳೆದ ಬಾರಿ ಅಲ್ಲಿಗೆ ಹೋದಾಗ ನಾನು ಸಹಜವಾಗಿಯೇ ನೀರು ಕೇಳಿದೆ. ಅಲ್ಲಿನ ಜನರು ನಾನು ಕೇಳಬಾರದ್ದೇನನ್ನೊ ಕೇಳಿದೆ ಎಂಬಂತೆ ಮುಖ ಮುಖ ನೋಡಿಕೊಂಡು ಹಿಂಜರಿಕೆಯಿಂದಲೇ ನೀರನ್ನು ಕೊಟ್ಟರು. ಅದು ಹಸಿರು–ಕಂದು ಬಣ್ಣದ ನೀರಾಗಿತ್ತು. ಅದನ್ನು ಕಂಡು ನಾನು ಹಿಂಜರಿದೆ. ನನ್ನ ಹಿಂಜರಿಕೆಯನ್ನು ನೋಡಿ ಅವರು, "ಸಾರ್, ಇಲ್ಲಿ ಕೋಕೋ ಕೋಲ ಸಿಗುತ್ತದೆ" ಎಂದು ತಿಳಿಸಿದರು. ಅವರ ಹೆಸರು ಗಡಸು ರಾಮುಡು. ಸ್ಥಳೀಯ ನೀರಿನ ಸೆಲೆಯನ್ನು ಕೋಕೋ ಕೋಲ ಕಂಪನಿಗೆ ಕೊಟ್ಟ ಕಾರಣದಿಂದಾಗಿ ಅಂತಹ ಪರಿಸ್ಥಿತಿ ಬಂದಿದೆ. ಅಂದಿನಿಂದ ನಾನು ಕೋಕೋ ಕೋಲ ಕುಡಿಯುವುದನ್ನೂ ಬಿಟ್ಟೆ. ಆ ಪ್ರವಾಸದಲ್ಲಿ ನನ್ನ ಜೊತೆ 'ಈ ನಾಡು' ಪತ್ರಿಕೆಯ ನರಸಿಂಹರೆಡ್ಡಿಯವರು ಸಹ ಇದ್ದರು. ನಾನು ರಾಮುಡು ಅವರನ್ನು, "ನೀವು ಕಳೆದ ೧೦ ವರ್ಷಗಳಿಂದ ಕೆಲಸ ಮಾಡಿಯೇ ಇಲ್ಲ, ಈ ಸುಡು ಬಿಸಿಲಿನಲ್ಲಿ ತಾವು ಕೆಲಸ ಮಾಡುವ ಅವಶ್ಯಕತೆ ಏನಿದೆ" ಎಂದು ಕೇಳಿದೆ. ಅದಕ್ಕವರು, "ಒಂದು ಕೆ. ಜಿ. ತೊಗರಿಬೇಳೆಯ ಬೆಲೆ ೯೫/– ರೂಪಾಯಿಗಳಾಗಿವೆ, ಆದರೆ ನನ್ನ ತಿಂಗಳ ಪೆನ್ಶನ್ ಇನ್ನೂರು ರೂಪಾಯಿ ಇದೆ. ಆದ್ದರಿಂದ ನಾನು ದುಡಿಯಲೇಬೇಕಾಗಿದೆ" ಎಂದರು. ಸಾಮಾನ್ಯವಾಗಿ ಕುಟುಂಬದಲ್ಲಿ ಹೆಚ್ಚು ವರಮಾನ ತರುವ ಪುರುಷರಿಗೆ ಹೆಚ್ಚು ಪ್ರಾಮುಖ್ಯತೆ ಇರುತ್ತದೆ. ಕಡಿಮೆ ವರಮಾನದವರು ಅಲಕ್ಷ್ಯಕ್ಕೆ ಒಳಗಾಗುತ್ತಾರೆ. (ವಾಸ್ತವದಲ್ಲಿ ಮಹಿಳೆಯರು ಹೆಚ್ಚು ಶ್ರಮವಹಿಸಿ ದುಡಿಯುತ್ತಾರೆ. ಅವರು ಶೇಕಡ ೬೭ರಷ್ಟು ಕೃಷಿ ಚಟುವಟಿಕೆಗಳಲ್ಲಿ ದುಡಿದರೂ, ಅವರ ಶ್ರಮವನ್ನು ಗೃಹಕೃತ್ಯದ ಸಹಾಯಕಿ ಎಂದು ಬಿಂಬಿಸಲಾಗಿದೆ). ಆಹಾರದ ಬಿಕ್ಕಟ್ಟು ಪ್ರಾರಂಭವಾದರೆ ವಿಧವೆಯರು, ವಯೋವೃದ್ಧರು ವ್ಯಾಪ್ತಿಬಾಹಿರರಾಗುತ್ತಾರೆ. ಆದ್ದರಿಂದಲೇ ಅವರಿಗೆ ಸಾಮರ್ಥ್ಯವಿಲ್ಲದಿದ್ದರೂ, ಶಕ್ಯವಿಲ್ಲದಿದ್ದರೂ ದುಡಿಯುವುದು ಅನಿವಾರ್ಯ. ಅನೇಕ ವೇಳೆ ಅವರಿಗೆ ಹಾರೆ ಗಡಾರಿಗಳನ್ನು ಹಿಡಿಯುವುದು ಸಹ ದುರ್ಭರವಾಗಿರುವ ಉದಾಹರಣೆಗಳಿವೆ. ವಿಪರ್ಯಾಸವೆಂದರೆ ಅತಿ ಅಪೌಷ್ಟಿಕತೆಗೆ ಗುರಿಯಾದವರನ್ನು ನಾವು ಅತಿ ಹೆಚ್ಚು ಶ್ರಮದ ಕೆಲಸಕ್ಕೆ ನಿಯೋಜಿಸುತ್ತೇವೆ. ಇಷ್ಟಾದರೂ ಡಾ॥ ಮಾಂಟೆಕ್ ಸಿಂಗ್ ಅಹ್ಲುವಾಲಿಯ ಅವರು ೩೨ ರೂಪಾಯಿಗಳ ವರಮಾನದಿಂದ ನಗರಗಳಲ್ಲಿಯೂ, ೨೮ ರೂಪಾಯಿಗಳ ವರಮಾನದಿಂದ ಗ್ರಾಮೀಣ ಪ್ರದೇಶಗಳಲ್ಲಿಯೂ ಬದುಕಬಹುದೆಂದು ಬಡತನದ ರೇಖೆಯನ್ನು ವ್ಯಾಖ್ಯಾನಿಸಿದ್ದರು. ಯೋಜನಾ ಆಯೋಗದ ಪರವಾಗಿ ಈ ಬಗ್ಗೆ ಅವರು ಸುಪ್ರೀಂ ಕೋರ್ಟಿನಲ್ಲಿ ಅಫಿಡವಿಟ್ ಸಹ ಸಲ್ಲಿಸಿದ್ದರು. ಈ ಮೊತ್ತವೂ ಸಹ ಒಂದು ವರ್ಷದ ನಂತರ ಸೂಚ್ಯಂಕಕ್ಕೆ ಲಗತ್ತಾದ ಮೊತ್ತಗಳು. ಪ್ರಾರಂಭದಲ್ಲಿ ನಗರ ಪ್ರದೇಶದಲ್ಲಿ ೨೮ ರೂಪಾಯಿಗಳು ಹಾಗೂ ಗ್ರಾಮೀಣ ಪ್ರದೇಶದಲ್ಲಿ ೨೨ ರೂಪಾಯಿಗಳು ಬಡತನದ ರೇಖೆಯ ಮೇಲಿನ ವರಮಾನವೆಂದು ಸೂಚಿಸಿದ್ದರು. ಒಮ್ಮೆ ಅವರನ್ನು ಇಷ್ಟು ಸಣ್ಣ ಮೊತ್ತದಲ್ಲಿ ಜನರು ಬದುಕಲು ಸಾಧ್ಯವೇ ಎಂದು ಪ್ರಶ್ನಿಸಿದಾಗ 'ಅಷ್ಟು ಹಣ ಇದ್ದರೆ ಬೇಕಾದಷ್ಟು' ಎಂದು ಉತ್ತರಿಸಿದ್ದರು. ನಂತರ ನಾವು ಮಾಹಿತಿ ಹಕ್ಕು ಕಾಯಿದೆಯ ಅಡಿಯಲ್ಲಿ ಮಾಹಿತಿಯನ್ನು ಕೇಳಿ ಯೋಜನಾ ಆಯೋಗದ ಬಗ್ಗೆ ಮಾಹಿತಿ ಸಂಗ್ರಹಿಸಿದೆವು. ಅದರ ಪ್ರಕಾರ ಡಾ॥ ಮಾಂಟೆಕ್ ಸಿಂಗ್ ಅಹ್ಲುವಾಲಿಯ ಅತಿ ಹೆಚ್ಚು ವಿದೇಶ ಪ್ರವಾಸ ಮಾಡಿದ ಯೋಜನಾ ಆಯೋಗದ ಉಪಾಧ್ಯಕ್ಷರೆನ್ನುವ ಮಾಹಿತಿ ಸಿಕ್ಕಿತು. ಮಾಂಟೆಕ್‌ರು ತಮ್ಮ ಅಧಿಕಾರಾವಧಿಯ ಏಳು ವರ್ಷಗಳಲ್ಲಿ ಪ್ರತಿ ಏಳು ದಿನಗಳಲ್ಲಿ ಒಂದು ದಿನ ವಿದೇಶದಲ್ಲೋ ಅಥವಾ ವಿಮಾನದಲ್ಲೋ ಇರುತ್ತಿದ್ದರು. ಹಿಂದೆ ಮಧು ದಂಡವತೆಯವರಂತಹ ಮುತ್ಸದ್ದಿಗಳು ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದಾಗ ಒಂದೇ ಒಂದು ದಿನವೂ ಯೋಜನಾ ಆಯೋಗದ ಖರ್ಚಿನಲ್ಲಿ ವಿದೇಶ ಪ್ರವಾಸ ಮಾಡಿರಲಿಲ್ಲ. ಮಾಂಟೆಕ್ ಜಿ–೨೦ ರಾಷ್ಟ್ರಗಳ ಸರ್ಕಾರಗಳ ಸಲಹೆಗಾರರು ಸಹ. ತಮ್ಮನ್ನು ಅವರು ಜಿ–೨೦ ರಾಷ್ಟ್ರಗಳ ಶೆರ್ಪಾ ಎಂದೇ ಕರೆದುಕೊಳ್ಳುತ್ತಾರೆ. ನಾವು ಸಂಗ್ರಹಿಸಿದ ಇನ್ನೊಂದು ಮಾಹಿತಿಯೆಂದರೆ, ಮಾಂಟೆಕ್‌ರು ತಮ್ಮ ಅಧಿಕಾರಾವಧಿಯ ಇತ್ತೀಚಿನ ದಿನಗಳಲ್ಲಿ ಮಾಡುತ್ತಿದ್ದ ಒಂದು ದಿನದ ವೆಚ್ಚ ನಾಲ್ಕು ಸಾವಿರ ಅಮೆರಿಕನ್ ಡಾಲರುಗಳು (ಅಂದರೆ ದಿನವೊಂದಕ್ಕೆ ೨,೪೦,೦೦೦/– ರೂಪಾಯಿಗಳು !!!). ಆದರೆ ಮಾಂಟೆಕ್ ಸಿಂಗ್‌ರ ಪ್ರಕಾರ ಗ್ರಾಮೀಣ ಪ್ರದೇಶದ ಒಬ್ಬ ಪ್ರಜೆಗೆ ದಿನವೊಂದಕ್ಕೆ ೨೮ ರೂಪಾಯಿಗಳು ಬೇಕಾದಷ್ಟಾಗುತ್ತವೆ. ಪತ್ರಿಕಾ ಉದ್ಯೋಗವು ಸ್ಪಂದನಶೀಲವಾಗಿರಬೇಕು, ಪತ್ರಕರ್ತನು ಮಾಹಿತಿಗಳ ಹೋಲಿಕೆ ತುಲನೆಗಳನ್ನು ನಿರ್ದಾಕ್ಷಿಣ್ಯವಾಗಿ ಮಾಡಬೇಕು. ಅಧಿಕೃತ ಮಾಹಿತಿ ಅಂಕಿ ಅಂಶಗಳನ್ನು ಇತರ ಅಂಕಿ ಅಂಶಗಳು ಏನೆಂದು ಪ್ರಶ್ನಿಸಬೇಕು. ಅದು ಗ್ರಾಮೀಣ ಪ್ರದೇಶದ ವರದಿಯೇ ಇರಲಿ, ಅಥವಾ ನಗರ ಪ್ರದೇಶದ ವರದಿಯೇ ಇರಲಿ, ಇದು ಅತ್ಯವಶ್ಯ. ನನ್ನ ಕೆಲವು ಕಾಲಮಿಸ್ಟ್ ಸ್ನೇಹಿತರಿಗೆ ನಾನು ಅನೇಕ ಬಾರಿ, "ನೀವು ನಿಮ್ಮ ಕಾಲಂಗಳನ್ನು ಬರೆಯುವಾಗ, ನಿಮಗೆ ಮಾಹಿತಿ ಒದಗಿಸುವ ಮಾಹಿತಿದಾರರನ್ನು ಎಂದಾದರೂ ಭೇಟಿಯಾಗಿದ್ದೀರಾ ? ಅವರು ಒದಗಿಸುವ ಮಾಹಿತಿಯನ್ನು ಟೀಕೆ ವಿಮರ್ಶೆಗಳಿಲ್ಲದೆ, ಪರಿಶೀಲಿಸದೆ ಕಣ್ಣುಮುಚ್ಚಿಕೊಂಡು ದಾಖಲಿಸಿದರೆ ಅದು ಮಳೆ ಮಾಹಿತಿಯಂತೆ, ಪುದುಕೋಟ್ಟೈನ ಒಂಟೆ ಗಣತಿಯಂತೆ ಆಭಾಸವಾಗುವುದಿಲ್ಲವೇ ?" ಎಂದು ಪ್ರಶ್ನಿಸಿದ್ದೇನೆ. ಕೆಲವರು ವಲಸೆ ಸಮಸ್ಯೆ ಬಗ್ಗೆ ಮಾತನಾಡುತ್ತಾರೆ. ವಾಸ್ತವದಲ್ಲಿ ಅವರು ವಲಸೆಗಾರರನ್ನು ಭೇಟಿ ಮಾಡಿರುವುದೇ ಇಲ್ಲ. ಅವರು ೨೦–೩೦ ವರ್ಷಗಳ ಹಿಂದೆ ಕ್ಷೇತ್ರ ಕಾರ್ಯವನ್ನು ಮಾಡಿರಬಹುದು. ಈಗ ಕ್ಷೇತ್ರ ಕಾರ್ಯವಿಲ್ಲದೆ ಆ ಬಗ್ಗೆ ಮಾತನಾಡುವುದು ಸರಿಯಲ್ಲ.

ನಿಮಗೆ ಆಶ್ಚರ್ಯವಾಗಬಹುದು, ಈ ಎಲ್ಲಾ ಮಾಹಿತಿ ಸಂಗ್ರಹಣೆಯ ಉಪಕರಣಗಳನ್ನು, ನಾನು ಸ್ವತಃ ಆವಿಷ್ಕರಿಸಿದವುಗಳಲ್ಲ. ಇವುಗಳನ್ನು ಆವಿಷ್ಕರಿಸಿದವರು ನಿಮಗಿಂತ, ನನಗಿಂತ ಎಷ್ಟೋ ಪಾಲು ಕಡಿಮೆ ವಿದ್ಯಾಭ್ಯಾಸ ಪಡೆದ ಗ್ರಾಮೀಣ ಪ್ರದೇಶದಲ್ಲಿ ಬೇರು ಮಟ್ಟದಲ್ಲಿ ಕೆಲಸ ಮಾಡುವ ಮಾಹಿತಿ ಸಂಗ್ರಹಣಾಕಾರರು. ತೀರ ಪ್ರದೇಶದ ಜನರ ಸಮಸ್ಯೆಗಳು, ವಲಸಿಗರ ಸಮಸ್ಯೆಗಳು, ಜನಗಣತಿಯ ನ್ಯೂನತೆಗಳು ಇತ್ಯಾದಿ ಅನೇಕ ವಿಷಯಗಳ ಬಗ್ಗೆ ನನ್ನ ತಿಳುವಳಿಕೆಯನ್ನು ಹೆಚ್ಚಿಸಿದವರು ಮಾಹಿತಿ ಸಂಗ್ರಹಕಾರರು. ನಮ್ಮ ದೇಶದ ಜನಗಣತಿಯು ಒಂದು ಬೃಹತ್ ದಾಖಲೆ ಎನ್ನುವುದು ನಿಜ. ಆದರೆ ಅದು ದೋಷಾತೀತವೇನಲ್ಲ. ಅದರ ದೋಷಮೂಲವೆಂದರೆ, ಅದರ ಮಾಹಿತಿ ಸಂಗ್ರಹಣಾ ವಿಧಾನ; ಅದರಲ್ಲೂ ವಿಶೇಷವಾಗಿ ಬುಡಕಟ್ಟುಗಳ ಅಧ್ಯಯನ/ಮಾಹಿತಿ ಸಂಗ್ರಹಣೆಯ ವಿಷಯದಲ್ಲಿರುವ ಇತಿಮಿತಿಗಳು. ಏಕೆಂದರೆ ಸಾಮಾನ್ಯವಾಗಿ ಮಾಹಿತಿ ಸಂಗ್ರಹಣಾಕಾರರು ಪ್ರಾಥಮಿಕ ಶಾಲಾ ಶಿಕ್ಷಕರಾಗಿರುತ್ತಾರೆ. ಅವರಿಗೆ ಗೊಂಡಾ ಅಥವಾ ಬಿಹೋಸ್ ಬುಡಕಟ್ಟು ಜನಾಂಗದವರ ಬಗ್ಗೆ ಮಾಹಿತಿ ಸಂಗ್ರಹಣಾ ಕಾರ್ಯದ ಬಗ್ಗೆ ಭಯ. ಕಾರಣ ವೇನೆಂದರೆ, ಅವರು ನರಭಕ್ಷಕರೆಂಬ ತಪ್ಪು ಭಾವನೆ. ಆದ್ದರಿಂದ ಆ ಬುಡಕಟ್ಟು ಜನಾಂಗದವರ ಪ್ರದೇಶಕ್ಕೆ ಭೇಟಿ ನೀಡದೆ, ದೂರ ಕುಳಿತೇ, ತಮಗೆ ಬೇಕಾದ ಹೆಸರುಗಳನ್ನು ನೀಡಿ ಜನಗಣತಿ ಕಾರ್ಯವನ್ನು ಮಾಡುತ್ತಾರೆ. ಇದು ತಪ್ಪು ತೀರ್ಮಾನಗಳಿಗೆ ಎಡೆಮಾಡಿಕೊಡುತ್ತದೆ. ಪರಿಶಿಷ್ಟ ಜಾತಿ/ಪಂಗಡಗಳ ರಾಷ್ಟ್ರೀಯ ಆಯೋಗದ ಅಧ್ಯಕ್ಷರಾಗಿದ್ದ, ಪ್ರೊ॥ ಬಿ. ಡಿ. ಶರ್ಮಾ ಅವರು ಈ ಬಗ್ಗೆ ಜನಗಣತಿ ಕಾರ್ಯದ ನ್ಯೂನತೆಯ ಬಗ್ಗೆ ಬೆಳಕು ಚೆಲ್ಲಿದರು.

ಬಿಹೋಸ್ ಬುಡಕಟ್ಟು ಜನರು ಸಾಮಾನ್ಯವಾಗಿ ತ್ರಿಕೋಣಾಕೃತಿಯಲ್ಲಿ ಚಲಿಸುತ್ತಾರೆ. ಅವರನ್ನು ಮಧ್ಯಪ್ರದೇಶದ ಭಾಗದಲ್ಲಿ ಬಿಹೋರ್‌ಗಳೆಂದು ಕರೆಯುತ್ತಾರೆ. ಈ ಅಲೆಮಾರಿ ಜನಾಂಗದವರನ್ನು ಮೂರು ಬಾರಿ ಎಣಿಕೆ/ಗಣತಿ ಮಾಡಿ ಅವರ ಸಂಖ್ಯೆ ಹೆಚ್ಚಾಗಿದೆ ಎಂದು ತಪ್ಪಾಗಿ ವರದಿ ಮಾಡಲಾಗಿತ್ತು. ಒರಿಸ್ಸಾ ಸರ್ಕಾರವು ಈ ಬಗ್ಗೆ ಒಂದು ಪತ್ರಿಕಾ ಪ್ರಕಟಣೆಯನ್ನು ಬಿಡುಗಡೆ ಮಾಡಿ, ತಮ್ಮ ಸರ್ಕಾರದ ಬಡತನ ನಿರ್ಮೂಲನಾ ಕಾರ್ಯಕ್ರಮದ ಕಾರಣ ಬಿಹೋಸ್ ಬುಡಕಟ್ಟು ಜನರ ಜನಸಂಖ್ಯೆಯು ಸ್ಥಿರಗೊಂಡು ಹೆಚ್ಚಳವಾಗಿದೆ ಎಂದು ಹೇಳಿಕೊಂಡಿತು. ವಾಸ್ತವದಲ್ಲಿ ಅವರ ಸಂಖ್ಯೆ ೨೦೦೦ ದಾಟಿಯೇ ಇಲ್ಲ. ಬುಡಕಟ್ಟು ಜನರನ್ನು ಅಧ್ಯಯನ ಮಾಡಬೇಕಾದರೆ ಅವರೊಂದಿಗೆ ಬೆರೆಯಬೇಕು, ಅವರ ಜೊತೆಯಲ್ಲಿಯೇ ಸಂಚರಿಸಬೇಕು. ಪತ್ರಕರ್ತರಾಗಿ ನಾವು ಹಲವು ರೀತಿಯಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ಕೇವಲ ವರದಿಗಾರಿಕೆಗೆ ಉಪಯೋಗಿಸುವುದು ಮಾತ್ರವಲ್ಲದೆ ಮನುಷ್ಯರಾಗಿ, ನಾಗರಿಕರಾಗಿ ಅದನ್ನು ಸಾರ್ವಜನಿಕ ಒತ್ತಡ ಹೇರಲು ಅಧಿಕಾರಸ್ಥರ ಗಮನ ಸೆಳೆಯಲು, ನಮಗೆ ಲಭ್ಯವಿರುವ ಎಲ್ಲಾ ವೇದಿಕೆಗಳನ್ನು, ಪತ್ರಿಕೆ, ಕಾಲಂಗಳು, ಜಾಲತಾಣಗಳು (ವೆಬ್‌ಸೈಟ್‌ಗಳು) ಸಾಮಾಜಿಕ ಮಾಧ್ಯಮಗಳು ಇತ್ಯಾದಿಗಳನ್ನು ಬಳಸಿಕೊಳ್ಳಬೇಕು. ಬೇಕಾದರೆ, ನೀವು ಇದನ್ನು 'ಗೆರಿಲ್ಲಾ ಪತ್ರಿಕಾ ವೃತ್ತಿ' ಎಂದು ಕರೆಯಬಹುದು.

– ಮುಂದುವರಿಯುತ್ತದೆ

ನಿರೂಪಣೆ : **ಡಿ. ಎ. ವಿಜಯಭಾಸ್ಕರ**
೧೧೪೦, ೧೩ನೇ ಅಡ್ಡರಸ್ತೆ, ಜೆ. ಪಿ. ನಗರ ೧ನೇ ಹಂತ, ೧ನೇ ಘಟ್ಟ, ಬೆಂಗಳೂರು – ೭೮

# ಈಗ ಆ ದಿನಗಳ ಮಾತೇಕೆ

**೧೯೭೦ರ** ಬರಗಾಲದಲ್ಲಿ
ಉಪ್ಪಿಲ್ಲದೆ ಚೌಳುಮಣ್ಣ ಹಾಕಿ
ಬೇಯಿಸಿದ ಹುರುಳಿ ತಿಂದ ಜನರ
ಊರ ಕುರಿ, ಮೇಕೆಗಳೊಂದಿಗೆ ಸ್ಪರ್ಧೆಗಿಳಿದು
ಉಗಣಿ ಬಳ್ಳಿಯ ಕುಡಿಗಳ ಚಿವುಟಿ ತಿಂದದ್ದು
ಚಪ್ಪರ ಚಂಡಿನ ಕೆಂಪು ಹಣ್ಣ ಮೇಲಿನ ಮುಳ್ಳ
ತಾವರಿಗೆ ಸೊಪ್ಪಲ್ಲಿ ಬಡಿದು ತಿಂದು
ಅರ್ಧ ರಾಗಿ, ಅರ್ಧ ಮಣ್ಣನ್ನು ಹಿಟ್ಟು ಮಾಡಿ ಉಂಡ ದಿನಗಳ
ಕುರಿತು ಮಾತನಾಡಿದರೆ
ನನ್ನ ಮಗ ಹೇಳುತ್ತಾನೆ
ಈಗ ಆ ದಿನದ ಮಾತೇಕೆ

ಸೂರಿಲ್ಲದೆ ಮರಿಯಮ್ಮ ಸೇವಾಭಾಯರ ಗುಡಿಯೊಳಗೆ
ಒಬ್ಬನೇ ಶಿಷ್ಯನಾದ ನಾನು
ಬುದ್ಧಿವಂತ ಮೇಷ್ಟ್ರ ಹತ್ತಿರ ಪಾಠ ಕಲಿಯಲು
ರವಿಯು ತೋಟಕ್ಕೆ ಹೋದ, ಪಾಠದೊಳಗಣ 'ರವಿ'
ಅವನ ತಂದೆಯ ತೋಟಕ್ಕೆ ಹೋಗಲೇ ಇಲ್ಲ.
ನಮ್ಮೇಷ್ಟ್ರು 'ರವಿ'ಯು ಅಂದೊಡನೆ
ಧ್ವನಿಯೊಂದು ಅತ್ತಿಂದ
ಮಾಸ್ತರ... ಎನ್ನುತಿರಲು
ಊರ ತೀಟೆಯ ನಡುವೆ ನನಗೆ ಆಟದ ವಿರಾಮ

ಗದಿಯ, ನೊಳಿಯ, ಪೀಕ
ಗೋಲಿ-ಗಜ್ಜುಗದ ಜೊತೆಗೆ ಬುಗುರಿ ಆಡುತಿರಲು
ಕುತೂಹಲದಿಂದ ಕಾದಿರುವವನಂತೆ ಥಂಗನೇ ನೆಗೆಯುತ್ತಿದ್ದೆ.
ಒಮ್ಮೊಮ್ಮೆ ಯಾರದೋ ಹಳೆ ಸೈಕಲ್ಲಿನ ಟೈಯರ್
ನಮ್ಮನ್ನ ಹೊತ್ತೋಡುವ ಮೋಟಾರು ಬೈಕ್ ಆಗಿ
ಹನ್ಮಂತ ದೇವರ ಗುಡಿಯಿಂದ
ತಾಳಿಮರದ ದುರ್ಗವ್ವನ ಗುಡಿವರೆಗೆ
ಬಾಯೊಳು ಬಂದ ಬುರುಗ ಲೆಕ್ಕಿಸದೆ ಬುರ್ ಎನುತ
ಓಡಿ ಬಂದು ಆಯಾಸವಾಗಿ
ಮೇಷ್ಟ್ರ ಮಾತುಗಳು ಮುಗಿದಿರಬಹುದೆಂದು ಊಹಿಸಿ
ಸಾ... ಎಂದಿಣುಕಲು
ಊಟದ ಸಮಯದ ಘೋಷಣೆ.

ನಮ್ಮೇಷ್ಟ್ರು
ಹತ್ತು ಡಬ್ಬಗಳ ದೊಡ್ಡದೊಂದು ಟಿಫನ್ ಕ್ಯಾರಿಯರ್ ಹೊತ್ತು
ಕೆರೆ ಏರಿಗೆ ಹೊಂಟರೆ
ಶಾಲೆ ಮುಗಿದಂತೆಯೇ
ನಮ್ಮನೆ ಹಾಲು ಮೊಸರಿನೊಂದಿಗೆ
ಗಡದ್ದಾಗಿ ಉಂಡು

ಲೇ 'ನಾಯ್ಕ' ತಗೊಳಲೇ ತೊಳ್ಕಂಡಬಾ
ಎಂದೊಡನೆ

ಅಳಿದುಳಿದ ಅನ್ನ ಸಾರಿಗೆ
ನಾಯಿಯಂತೆ ಬಾಲ ಆಡಿಸುತ್ತ
ಅವರ ಧ್ವನಿಯನ್ನೇ ಕೇಳಲು
ಕಾದಿದ್ದವನಂತೆ ಒಳಗೆ ಓಡಿ
ಖಾಲಿಗೊಂಡ ಡಬ್ಬಗಳನ್ನೆತ್ತಿಕೊಂಡು
ಕೆರೆಗೆ ಓಡಿದ್ದು
ಬಕಾಸುರ – ನಕ್ಕು
ಅಪ್ಪ ಹೇಳಿದ ಕತೆಯ ನೆನಪು ಮಾಡಿಕೊಂಡು
ಉಳಿಕೆಗೆ ತಡಕಾಡಿ
ಖಾಲಿ ಡಬ್ಬದ ಮೂಲೆಯಲಿ ಸಿಕ್ಕ
ಮಾವಿನ ಉಪ್ಪಿನಕಾಯಿ ವಾಟೆ
ದವಡೆಯಲ್ಲೇ ಇಟ್ಟು ಅಗಿದಗಿದು
ಸಂಜೆ ಗಂಜಿಗೆ ಕಾಯುತ್ತಿದ್ದದ್ದು ಹೇಳಿದಾಗ
ನನ್ನ ಮಗ ಹೇಳುತ್ತಾನೆ.
ಈಗ ಆ ದಿನಗಳ ಮಾತೇಕೆ.

ಜಾತಿ-ಧರ್ಮದ ಹೆಸರಲ್ಲಿ
ಉಳ್ಳವರ ದಬ್ಬಾಳಿಕೆ
ಜಾತ್ಯತೀತರೆಂದು ಮುಖವಾಡ ಹಾಕಿಕೊಂಡು
ಒಳಗೊಳಗೆ ನಗುವವರು
ಜಾತಿ ಹೆಸರಲಿ ಅವಿದ್ಯಾವಂತರೆಲ್ಲಾ
ಕೀಳಾಗಿ ಕಾಡುವ ಪರಿಯ ಹೇಳಲು
ಅವನು ಹೇಳುತ್ತಾನೆ
ಈಗ ಆ ದಿನಗಳ ಮಾತೇಕೆ




**ಡಾ|| ಶಿರಗಾನಹಳ್ಳಿ ಶಾಂತನಾಯ್ಕ**
ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ

ಗತಕಾಲದ ನೆನಪು ಬೆನ್ನುಬಿಡದ ಭೂತದಂತೆ
ಕಾಡುತ್ತಿರಲೆನ್ನ
ಹೊರಹಾಕಲಾಗದೆ ತೊಳಲಾಡುತ್ತಿದೆ...
ಅಪ್ಪ-ಅವ್ವ ಹೇಳಲು ಬಂದಾಗ ಅವರ ಕಷ್ಟಗಳ
ಕೇಳಲು ಈಗ ಸಮಯವಿಲ್ಲ
ನನ್ನ ಮಾತು ನೆನಪು ಮಾಡಿಕೊಳ್ಳಲು
ಯತ್ನಿಸುತ್ತೇನೆ...

ಹಳೆಯದೆಲ್ಲವನು ಸುರಳಿ ಸುತ್ತಿ
ಟ್ರಂಕಿನಲ್ಲಿ ಗಂಟು ಕಟ್ಟಿ ಎಸೆದು ಬಿಡುವ ಮನಸು
ನನ್ನ ಮಗನ ಮಾತು
ಮತ್ತೆ ಪ್ರತಿಧ್ವನಿಸುತ್ತೆ

ಈಗ ಆ ದಿನಗಳ ಮಾತೇಕೆ

ಒಮ್ಮೆ ಗಟ್ಟಿಯಾಗಿ ಕಣ್ಣು ಮುಚ್ಚಿ
ಸ್ಮೃತಿಯಲ್ಲಿರುವ ನೆನಪುಗಳ ಅಳಿಸಿಹಾಕಲು
ಯತ್ನಿಸುತ್ತೇನೆ.

ಆದರೆ ಎದೆಯೊಳಗೆ ಹದವಾಗಿ ನಾಟಿರುವ
ನನ್ನ ನೆನ್ನೆಗಳು ಇಂದಾಗಿ ನನ್ನ ಕೆಳನೂಕುತ್ತ
ಮುಗಿಲೆತ್ತರಕ್ಕೆ ಬೆಳೆಬೆಳೆದು ನಳನಳಿಸುತ್ತವೆ.



# ಮೌಢ್ಯಮುಕ್ತ ಸಮಾಜಕ್ಕಾಗಿ ಶ್ರಮಿಸುತ್ತಿರುವ ಮುಕ್ತಾ

ವಿಚಾರವಾದಕ್ಕೆ ಮೌಢ್ಯದ ಕೊಡಲಿಯೇಟು ಚರಿತ್ರೆಯಲ್ಲಿ ಹೊಸದಲ್ಲ. ಕಳೆದ ವರ್ಷ ಮಹಾರಾಷ್ಟ್ರದ ವಿಚಾರವಾದಿ ನರೇಂದ್ರ ದಾಭೋಲ್ಕರ್ ಮೂಲಭೂತವಾದಿ ಮೂಢರ ಗುಂಪಿನವರಿಂದ ಗುಂಡಿನಿಂದ ಹತರಾದದ್ದು ಇನ್ನೂ ದೇಶದ ಜನಮಾನಸದಿಂದ ಮರೆಯಾಗಿಲ್ಲ. ಮಹಾರಾಷ್ಟ್ರ ಅಂಧಶ್ರದ್ಧಾ ನಿರ್ಮೂಲನ ಸಮಿತಿಯ ಸ್ಥಾಪಕರಾಗಿ, ಮಹಾರಾಷ್ಟ್ರದಲ್ಲಿ ವೈಚಾರಿಕ ಚಳುವಳಿಯಲ್ಲಿ ಕ್ರಿಯಾಶೀಲವಾಗಿ ತೊಡಗಿಕೊಂಡಿದ್ದ ನರೇಂದ್ರ ದಾಭೋಲ್ಕರ್ ಅವರ ಅವಿರತ ಶ್ರಮದ ಫಲವಾಗಿ ಅವರ ಸಾವಿನ ನಂತರ ಮಹಾರಾಷ್ಟ್ರ ಮೂಢನಂಬಿಕೆ ಮತ್ತು ವಾಮಾಚಾರ ವಿರೋಧಿ ಮಸೂದೆ ಜಾರಿಯಾಗಿ ಕೇಂದ್ರದಲ್ಲಿ ಪಾರ್ಲಿಮೆಂಟಿನ ಒಪ್ಪಿಗೆಗಾಗಿ ಕಾದುಕುಳಿತಿದೆ. ಇದರಿಂದ ಪ್ರಭಾವಿತರಾಗಿ ಇತ್ತೀಚೆಗೆ ಕರ್ನಾಟಕದಲ್ಲೂ ಇಂತಹದೊಂದು ಮಸೂದೆಯನ್ನು ತರುವ ನಿಟ್ಟಿನಲ್ಲಿ ಹಲವಾರು ಪ್ರಯತ್ನಗಳು ಮತ್ತು ಚರ್ಚೆಗಳು ನಡೆಯುತ್ತಿವೆ. ಇತ್ತೀಚೆಗೆ ಬೆಂಗಳೂರಿನಲ್ಲಿ ನಡೆದ ಇಂತಹದೊಂದು ವಿಚಾರಸಂಕಿರಣಕ್ಕೆ ಅತಿಥಿಯಾಗಿ ಆಗಮಿಸಿದ್ದ ನರೇಂದ್ರ ದಾಭೋಲ್ಕರ್ ಅವರ ಪುತ್ರಿ ಮುಕ್ತಾ ದಾಭೋಲ್ಕರ್ ಅವರನ್ನು 'ಹೊಸತು' ಸಂದರ್ಶಿಸಿತು.

**ಹೊಸತು :** ನಮಸ್ಕಾರ. ಮಹಾರಾಷ್ಟ್ರದಲ್ಲಿ ಮೂಢನಂಬಿಕೆ ವಿರುದ್ಧದ ಹೋರಾಟದಲ್ಲಿ ತೊಡಗಿಕೊಂಡಿರುವ ನಿಮ್ಮನ್ನು ಪರಿಚಯ ಮಾಡಿಕೊಳ್ಳಲು ಬಯಸುತ್ತೇವೆ. ನಿಮ್ಮ ಮುಖ್ಯ ಚಟುವಟಿಕೆಗಳೇನು ?

**ಮುಕ್ತಾ :** ನಾನು ಮಹಾರಾಷ್ಟ್ರದ ದಾಬೋಲಿಯಲ್ಲಿ ಕೆಲಸ ಮಾಡುತ್ತಿರುವೆ. ಮೊದಲಿಗೆ ಕಾನೂನು ಪದವಿ ಪಡೆದ ನಂತರ ನಾನು ಸ್ವಲ್ಪ ಕಾಲ ವಕೀಲ ವೃತ್ತಿ ಮಾಡಿದೆನಾದರೂ ನಂತರ ಅದನ್ನು ಬಿಟ್ಟುಬಿಟ್ಟೆ. ಕಾನೂನಿನ ಜ್ಞಾನವನ್ನು ಬಳಸಿಕೊಂಡು ಜನರ ನಡುವೆ ಕೆಲಸ ಮಾಡಲು ಆರಂಭಿಸಿದೆ. ಹಳ್ಳಿಗಳಲ್ಲಿರುವ ಹಲವಾರು ಸಮಿತಿಗಳಲ್ಲಿ  ನಾನು ವಿಶೇಷವಾಗಿ ಶಿಕ್ಷಣದ ಸಮಿತಿಯಲ್ಲಿ ಕೆಲಸ ಮಾಡುತ್ತಿರುವೆ. ಇದೇ ಸಂದರ್ಭದಲ್ಲಿ ಟಾಟಾ ಇನ್‌ಸ್ಟಿಟ್ಯೂಟ್‌ನಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಎಂ.ಎ. ಮಾಡಿದೆ. ಈ ಅಧ್ಯಯನ ನನಗೆ ತುಂಬ ಸಹಕಾರಿಯಾಯಿತು. ಈ ಓದು ಮುಗಿಸಿ ಹೊರಬಿದ್ದ ಮೇಲೆ ಶಿಕ್ಷಣದ ಹಕ್ಕಿನ ಮಸೂದೆ (RTE act) ಜಾರಿಯಾಗಿತ್ತು.  ಇದರ ಅನುಷ್ಠಾನದಲ್ಲಿ ಇದ್ದ ತೊಡಕುಗಳನ್ನು ಬಿಡಿಸುವತ್ತ ಶಾಲಾ ಸಮಿತಿಗಳಲ್ಲಿ ಕೆಲಸ ಮಾಡುತ್ತಿರುವೆ. ಇದು ಬಹಳ ಕಷ್ಟದ ಕೆಲಸವೇ ಆಗಿದೆ. ದಾಬೋಲಿ ಒಂದು ಸಣ್ಣ ತಾಲ್ಲೂಕು. ಹೀಗಾಗಿ ಶಾಲಾ ಶಿಕ್ಷಣದ ಕ್ಷೇತ್ರವೇ ನನ್ನ ಮುಖ್ಯ ಕಾರ್ಯಕ್ಷೇತ್ರವಾಗಿದೆ. ಇದೇ ವಿಷಯಕ್ಕೆ ಸಂಬಂಧಪಟ್ಟಂತೆ 'ಹಳ್ಳಿ ಮತ್ತು ಶಾಲೆ' ಎಂಬ ಪುಸ್ತಕವನ್ನು ರಚಿಸಿರುವೆ.

ಸಂದರ್ಶನದಲ್ಲಿ ಭಾಗಿಯಾದವರು

**ಡಾ॥ ಜಿ. ರಾಮಕೃಷ್ಣ**

**ಡಾ॥ ಎನ್. ಗಾಯತ್ರಿ, ಶ್ರೀಮತಿ ಮೈತ್ರಿ ಬಿ.**



**ಹೊಸತು :** ಸಾಮಾಜಿಕ ಕ್ಷೇತ್ರದ ನಿಮ್ಮ ಇನ್ನಿತರ ಚಟುವಟಿಕೆಗಳೇನು ?

**ಮುಕ್ತಾ :** ನನ್ನ ಊರಿನಲ್ಲಿ ನನ್ನ ಕೆಲವು ಗೆಳತಿಯರು 'ಸಖಿ' ಎನ್ನುವ ಹೆಸರಿನಲ್ಲಿ ಸಂಘಟನೆಯೊಂದನ್ನು ಮಾಡಿಕೊಂಡಿದ್ದಾರೆ. ಅವರು ಕೌಟುಂಬಿಕ ದೌರ್ಜನ್ಯದ ಪ್ರಕರಣಗಳನ್ನು ತೆಗೆದುಕೊಂಡು ನೊಂದ ಮಹಿಳೆಯರಿಗಾಗಿ ಕೆಲಸ ಮಾಡುತ್ತಿದ್ದಾರೆ. ನಾನು ಅವರೊಂದಿಗೆ ಕೆಲಸ ಮಾಡುತ್ತಿರುವೆ. ಮತ್ತೆ, ಚುನಾಯಿತ ಪಂಚಾಯತಿ ಸದಸ್ಯರಲ್ಲಿ ಅವರ ಹಕ್ಕು ಮತ್ತು ಕರ್ತವ್ಯಗಳ ಬಗ್ಗೆ ಅರಿವು ಮೂಡಿಸಲು ತರಬೇತಿ ನೀಡುವ ಕೆಲಸ ಮಾಡುತ್ತಿರುವೆ. ನಾನು ಸ್ತ್ರೀವಾದಿಯಾಗಿರುವೆನಾದ್ದರಿಂದ ಮಹಿಳೆಯರನ್ನು ಆವರಿಸಿರುವ ಮೂಢನಂಬಿಕೆಗಳ ವಿರುದ್ಧ ವಿಶೇಷವಾಗಿ ಕೆಲಸ ಮಾಡುತ್ತಿರುವೆ.

**ಹೊಸತು :** ಮಹಾರಾಷ್ಟ್ರ ಅಂಧಶ್ರದ್ಧಾ ನಿರ್ಮೂಲನ ಸಮಿತಿಯ ಬಗ್ಗೆ ಸ್ವಲ್ಪ ತಿಳಿಸುವಿರಾ ?

**ಮುಕ್ತಾ :** ಈ ಸಮಿತಿ ಆರಂಭವಾದದ್ದು ೧೯೮೯ರಲ್ಲಿ. ಅದು ಒಂದು ಫೆಡರಲ್ ಸ್ವರೂಪ ಹೊಂದಿದೆ. ಅದರ ಕೇಂದ್ರ ಸತಾರದಲ್ಲಿ ಇದ್ದರೂ ಅದರ ಹಲವಾರು ಶಾಖೆಗಳು ಹಳ್ಳಿ, ತಾಲ್ಲೂಕುಗಳಲ್ಲಿ ಹರಡಿಕೊಂಡಿವೆ. ಈ ಸಮಿತಿಗೆಂದು ಸ್ವಂತ ಕಟ್ಟಡವಾಗಲೀ, ಆಸ್ತಿಯಾಗಲೀ ಇಲ್ಲ. ಯಾರು ಅಧ್ಯಕ್ಷರು/ಕಾರ್ಯದರ್ಶಿಗಳಾಗಿ ಕೆಲಸ ಮಾಡುತ್ತಿರುತ್ತಾರೋ ಅವರ ವಿಳಾಸವನ್ನೇ ನಾವು ಕೊಡುತ್ತೇವೆ. ದೇಶ-ವಿದೇಶದ ಯಾವ ಅನುದಾನವನ್ನೂ ಪಡೆಯದೆ ಸ್ವಂತ ಬಲದಿಂದ ಈ ಸಂಸ್ಥೆಯನ್ನು ನಡೆಸುತ್ತಿದ್ದೇವೆ. ಇದರಲ್ಲಿ ಸುಮಾರು ಎಂಬತ್ತು ಶಾಖೆಗಳಿವೆ. ನನ್ನ ತಂದೆ ಅವರ ಸಾವಿನ ಐದು ವರ್ಷಗಳಿಗೆ ಮುಂಚೆಯೇ ತಮ್ಮ ಎಲ್ಲಾ ಹುದ್ದೆಗಳನ್ನು




ತೊರೆದು ಸಾಮಾನ್ಯ ಸದಸ್ಯರಾಗಿ ಕೆಲಸ ಮಾಡುತ್ತಿದ್ದರು. ಸಮಿತಿಗೆ ತನ್ನದೇ ಮಾಸಪತ್ರಿಕೆಯೊಂದಿದೆ. 'ಅಂಧಶ್ರದ್ಧಾ ನಿರ್ಮೂಲನಾ ವಾರ್ತಾಪತ್ರ'ವು ಸುಮಾರು ೧೭,೦೦೦ ಸದಸ್ಯರನ್ನು ತಲುಪುತ್ತದೆ.

ನಾನು ಕಾಲೇಜು ದಿನಗಳಲ್ಲಿ ಈ ಸಮಿತಿಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ನನ್ನ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದೆ. ನನ್ನ ಸೋದರ ಹಮೀದ್ ದಲವಾಯಿ ಮನೋವೈದ್ಯ. ಅವನೂ ತನ್ನ ಖಾಸಗಿ ಪ್ರಾಕ್ಟೀಸ್‌ನ ಜೊತೆಗೆ ಗ್ರಾಮಗಳ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗಾಗಿ ಕೆಲಸ ಮಾಡುತ್ತಾನೆ. ಅವನು ಮುಖ್ಯವಾಗಿ ಜನರ ಮಾನಸಿಕ ಆರೋಗ್ಯದ ವಿಷಯಗಳಿಗಾಗಿ ಕೆಲಸ ಮಾಡುತ್ತಾನೆ.

**ಹೊಸತು :** ನಿಮ್ಮ ಇಡೀ ಕುಟುಂಬದಲ್ಲಿ ಇಂತಹ ವೈಜ್ಞಾನಿಕ ಮನೋಭಾವವಿದೆಯೇ ?

**ಮುಕ್ತಾ :** ಹೌದು, ಇದೆ. ನಮ್ಮ ತಂದೆ ಆರಂಭದ ಕೆಲವು ವರ್ಷಗಳ ಕಾಲ ವೈದ್ಯ ವೃತ್ತಿಯಲ್ಲಿ ಕಾರ್ಯಶೀಲರಾದರೂ ನಂತರದಲ್ಲಿ ಸಂಪೂರ್ಣವಾಗಿ ಈ ಚಳುವಳಿಗೆ ತಮ್ಮನ್ನು ತೊಡಗಿಸಿಕೊಂಡರು. ಅವರಿಗೆ ಬೆನ್ನೆಲುಬಾಗಿ ನಿಂತವರು ನಮ್ಮ ತಾಯಿ ಡಾ॥ ಶೈಲಾ. ಅವರು ಪ್ರಸೂತಿ ವೈದ್ಯೆ. ಅವರು ಅತ್ಯಂತ ಪರಿಶ್ರಮದಿಂದ ನಮ್ಮ ಮನೆಯ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತರು. ಮನೆಯ ಒಳಗೂ ಹೊರಗೂ ದುಡಿಯುತ್ತಾ ನಮ್ಮ ತಂದೆಗೆ ಚಳುವಳಿಯಲ್ಲಿ ಭಾಗವಹಿಸಲು ಅನುವು ಮಾಡಿಕೊಟ್ಟರು. ಅವರು ತಮ್ಮ ವೈದ್ಯವೃತ್ತಿಯ ಸುಮಾರು ನಲವತ್ತು ವರ್ಷಗಳಲ್ಲಿ ಮೂವತ್ತು ಸಾವಿರ ಹೆರಿಗೆಗಳನ್ನು ಮಾಡಿಸಿರಬಹುದು. ನನ್ನ ತಂದೆಯ ಮತ್ತು ತಾಯಿಯ ಕುಟುಂಬಗಳೆರಡೂ ನಮ್ಮ ಮನೆಗಳ ಹತ್ತಿರವೇ ಇದ್ದದ್ದರಿಂದ ಅವರ ನೆರವೂ ನಮ್ಮ ಕುಟುಂಬಕ್ಕೆ ಸಕಾಲದಲ್ಲಿ ದೊರಕುತ್ತಿತ್ತು. ಎಲ್ಲರೂ ವಿಚಾರವಾದಿಗಳೇ ಆದ್ದರಿಂದ ನಮಗೆ ನಮ್ಮ ಕೆಲಸ, ಕಾರ್ಯಗಳಲ್ಲಿ ಯಾವುದೇ ತೊಂದರೆ ಉದ್ಭವಿಸಲಿಲ್ಲ.

**ಹೊಸತು :** ಮೂಢನಂಬಿಕೆ ವಿರೋಧಿ ಮಸೂದೆ ಜಾರಿಯಾಗುವ ಪ್ರಕ್ರಿಯೆಯಲ್ಲಿ ನೀವು ಎದುರಿಸಿದ ಸವಾಲುಗಳನ್ನು ತಿಳಿಸುವಿರಾ ?

**ಮುಕ್ತಾ :** ಈ ಮಸೂದೆಯನ್ನು ಮುಖ್ಯವಾಗಿ ನಮ್ಮ ತಂದೆ ರಚಿಸಿದರಾದರೂ ಅದು ಹಲವಾರು ಜನರ ಚರ್ಚೆ, ಅಧ್ಯಯನದ ಫಲ. ಹದಿನೆಂಟು ವರ್ಷಗಳ ಹಿಂದಿನಿಂದ ಅದರ ಜಾರಿಗಾಗಿ ಹೋರಾಟ ನಡೆದಿದೆ. ನಮ್ಮ ತಂದೆಗೆ ಮಾತುಕತೆ-ಚರ್ಚೆಯ ಸಂಧಾನದಲ್ಲಿ ಅಪಾರವಾದ ವಿಶ್ವಾಸ.



*ಶ್ರೀಮತಿ ಮೈತ್ರಿ ಬಿ., ಡಾ॥ ಎನ್. ಗಾಯತ್ರಿ ಅವರೊಂದಿಗೆ ಶ್ರೀಮತಿ ಮುಕ್ತಾ ದಾಭೋಲ್ಕರ್*

ಎಂದೂ ತಮ್ಮ ವಿಚಾರಗಳಿಂದ ಬೇರೆಯವರ ಮೇಲೆ ಆಕ್ರಮಣ ನಡೆಸುತ್ತಿರಲಿಲ್ಲ. ಮೊದಲಿಗೆ ಈ ಮಸೂದೆಗೆ ವಿರೋಧ ಬಂದಿದ್ದೇ ಬಲಪಂಥೀಯರು ಮತ್ತು ಶಿವಸೇನೆಯವರಿಂದ. ಇವರುಗಳು ತಮ್ಮ ವಾದವನ್ನು ಬಿತ್ತಲು ಭಕ್ತಿಪಂಥದ ವಾರ್ಕರಿಗಳನ್ನು ಬಳಸಿಕೊಂಡರು. ಅವರನ್ನು ಚಳುವಳಿಯ ವಿರುದ್ಧ ಎತ್ತಿಕಟ್ಟಿದರು. ಜ್ಞಾನೇಶ್ವರ ಪಂಥಾನುಯಾಯಿಗಳಾದ ಈ ವಾರ್ಕರಿಗಳಿಗೆ ದಾರಿತಪ್ಪಿಸಿ ಅವರು ಈ ಮಸೂದೆಯನ್ನು ವಿರೋಧಿಸುವಂತೆ, ಖಂಡಿಸುವಂತೆ ಮಾಡಿದರು. ಸಹಜವಾಗಿಯೇ ಸರ್ಕಾರ ಅವರ ಮಾತಿಗೆ ತಲೆದೂಗಿತು. ನನ್ನ ತಂದೆಯ ಸಾವಿನ ನಂತರ ಈ ಗುಂಪಿನವರಿಗೆ ತಮ್ಮ ತಪ್ಪಿನ ಅರಿವಾಯಿತು. ಅವರೇ ಮುಂದೆ ಬಂದು ಮಸೂದೆಯ ಪರವಾದ ಮೆರವಣಿಗೆಯಲ್ಲಿ ಭಾಗವಹಿಸಿದರು. ಈ ಚಳುವಳಿಯಲ್ಲಿ ಕ್ರಿಯಾಶೀಲವಾಗಿ ತೊಡಗಿಕೊಂಡರು. ಸರ್ಕಾರ ಜನರ ಒತ್ತಾಯಕ್ಕಾಗಿ ಈ ಮಸೂದೆಯನ್ನು



ಮಂಡಿಸಿದರೂ ತಮ್ಮದೇ ಸಾಧನೆಯಂತೆ ಕೊಚ್ಚಿಕೊಳ್ಳುವುದರಲ್ಲಿ ಹಿಂದೆ ಬಿದ್ದಿಲ್ಲ. ಮೇ ೧, ೨೦೦೩ರ ಮಹಾರಾಷ್ಟ್ರ ರಾಜ್ಯೋತ್ಸವದಂದು ಸರ್ಕಾರ ತಾನು ಈ ಮಸೂದೆಯನ್ನು ಜಾರಿಗೊಳಿಸಿರುವುದಾಗಿ ಘೋಷಿಸಿತ್ತು. ನನ್ನ ತಂದೆ ಕೊಲೆಯಾದ ಮಾರನೆಯ ದಿನ ಮಹಾರಾಷ್ಟ್ರ ಸರ್ಕಾರ ಈ ಮಸೂದೆಗೆ ಅಂಗೀಕಾರ ಮುದ್ರೆಯೊತ್ತಿತು.

**ಹೊಸತು :** ಈ ನಿಮ್ಮ ಸಂಸ್ಥೆಯಲ್ಲಿ ಯುವ ಜನರು, ಮಹಿಳೆಯರು ಮತ್ತು ಅಲ್ಪಸಂಖ್ಯಾತರು ಎಷ್ಟರಮಟ್ಟಿಗೆ ಭಾಗವಹಿಸುತ್ತಿದ್ದಾರೆ ?

**ಮುಕ್ತಾ :** ಯುವಕರು ತುಂಬಾ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುತ್ತಿದ್ದಾರೆ. ಮಹಿಳೆಯರೂ ಭಾಗವಹಿಸುತ್ತಾರಾದರೂ ತುಂಬ ಹೆಚ್ಚಿನ ಸಂಖ್ಯೆಯಲ್ಲಿ ಎಂದು ಹೇಳಲಾರೆ. ಎಲ್ಲಾ ಸಂಸ್ಥೆಗಳೂ ಪುರುಷಾಧಿಪತ್ಯದವೇ ಎಂದು ನಿಮಗೆ ಗೊತ್ತಲ್ಲಾ ? ಇನ್ನು ಅಲ್ಪಧರ್ಮೀಯರು ಮತ್ತು ಬುಡಕಟ್ಟು

## ಸಾದರ ಸ್ವೀಕಾರ

**ಸುಪ್ತಸ್ವರ** *ಜಿ. ಕೆ. ರವೀಂದ್ರಕುಮಾರ್*
***ಪುಟ : ೨೪೮*** ***ಬೆಲೆ ರೂ. ೧೭೫***
**ಶ್ರೀ ರಾಘವೇಂದ್ರ ಪ್ರಕಾಶನ,** ಅಂಬರಕೊಡ್ಲ, ಅಂಕೋಲಾ – ೫೮೧ ೩೧೪

**ಸಾಫ್ಟ್ ಜಗತ್ತಿನಲ್ಲಿ** (ಕವನ ಸಂಕಲನ) *ಚೇತನ ಸೊಲಗಿ*
***ಪುಟ : xviii + ೬೭ = ೮೫*** ***ಬೆಲೆ ರೂ. ೭೦***
**ದಲಿತ ಸಾಹಿತ್ಯ ಪರಿಷತ್ತು,** ರಾಜ್ಯ ಘಟಕ, ಬುದ್ಧ ನಿಲಯ, ನಂ. ೩೦೩೭, ಕೆ. ಎಚ್. ಕಾಲೋನಿ, ಹುಲಕೋಟಿ–೫೮೨ ೨೦೫, ತಾಲೂಕು/ಜಿಲ್ಲೆ ಗದಗ

**ಅಂಗಭಂಗದ ರಾಜ್ಯದಲ್ಲಿ ಮತ್ತು ಇತರ ಮಕ್ಕಳ ನಾಟಕಗಳು** *ಕೃಷ್ಣಮೂರ್ತಿ ಬಿಳಿಗೆರೆ*
***ಪುಟ : ೯೨*** ***ಬೆಲೆ ರೂ. ೬೦***
**ನಮ್ಮ ಪ್ರಕಾಶನ,** ಬಿಳಿಗೆರೆ, ತಿಪಟೂರು ತಾಲೂಕು, ತುಮಕೂರು ಜಿಲ್ಲೆ – ೫೭೨ ೧೧೪

**ಬಟ್ಟೆ ಇಲ್ಲದ ಊರಿನಲ್ಲಿ** (ಕಥಾ ಸಂಕಲನ)
*ಡಾ॥ ಮಿರ್ಜಾ ಬಷೀರ್*
***ಪುಟ : ೧೪೮ + ೪ = ೧೫೨*** ***ಬೆಲೆ ರೂ. ೧೧೦***
**ಅಂತಃಕರಣ ಪ್ರಕಾಶನ,** 'ದೇಸಿ ಸಂಸ್ಕೃತಿ' ಮೈಲಾರೇಶ್ವರ ಸಂಕೀರ್ಣ, ಬಿ. ಹೆಚ್. ರಸ್ತೆ, ಶಿವಮೊಗ್ಗ–೫೭೭ ೨೦೧

**ವಚನದಿಂಚರ** (ವಚನ ಸಂಕಲನ)
*ಡಾ॥ ಅಭಿನವ ಕುಮಾರ ಚನ್ನಬಸವ ಸ್ವಾಮಿಗಳು*
***ಪುಟ : xxxiv + ೧೨೩*** ***ಬೆಲೆ ರೂ. ೫೦***

**ದುಬಾರಿ ದುಬಾಯಿ**
*ಡಾ॥ ಅಭಿನವ ಕುಮಾರ ಚನ್ನಬಸವ ಸ್ವಾಮಿಗಳು*
***ಪುಟ : xxii + ೯೯*** ***ಬೆಲೆ ರೂ. ೦೦***

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಶ್ರೀ ಕುಮಾರೇಶ್ವರ ಗ್ರಂಥಮಾಲೆ,** ಓಲೀಮಠ ಜಮಖಂಡಿ

**ಅಂಬೇಡ್ಕರ್ ಮತ್ತು ಮುಸ್ಲಿಮರು** (ಸುಳ್ಳುಗಳು ಮತ್ತು ಸತ್ಯಾಂಶಗಳು) *ಮೂಲ : ಆನಂದ್ ತೇಲ್ತುಂಬ್ಡೆ*
*ಕನ್ನಡಕ್ಕೆ : ಪ್ರೊ॥ ಬಿ. ಗಂಗಾಧರ ಮೂರ್ತಿ*
***ಪುಟ : xxiv + ೮೪ = ೧೦೮*** ***ಬೆಲೆ ರೂ. ೮೦***

**ಜಾತಿ ವ್ಯವಸ್ಥೆ : ಸಮಸ್ಯೆ – ಸವಾಲುಗಳು**
*ಮೂಲ : ಜಗಜೀವನರಾಮ, ಕನ್ನಡಕ್ಕೆ : ರಾಹು*
***ಪುಟ : xiv + ೧೩೮ = ೧೫೨*** ***ಬೆಲೆ ರೂ. ೧೨೦***

**ಜಾಗತೀಕರಣ ಮತ್ತು ದಲಿತರು**
*ಡಾ॥ ಆನಂದ್ ತೇಲ್ತುಂಬ್ಡೆ, ಅನು : ನಾ. ದಿವಾಕರ*
***ಪುಟ : ೮೮ + ೪*** ***ಬೆಲೆ ರೂ. ೬೦***

**ಭಗವದ್ಗೀತೆ V/s ಬೌದ್ಧ ತತ್ವ**
*ಡಾ॥ ಬಿ ಆರ್. ಅಂಬೇಡ್ಕರ್*
***ಪುಟ : ೪೮*** ***ಬೆಲೆ ರೂ. ೩೦***

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಮೊಗ್ಗೆ ಮಾಯಿ ದೇವನ ಶಿವಾನುಭವ ಸೂತ್ರ – ಒಂದು ಅಧ್ಯಯನ** *ಡಾ॥ ಚನ್ನಬಸವ ಸ್ವಾಮಿಗಳು*
***ಪುಟ : xxxii + ೨೭೦*** ***ಬೆಲೆ ರೂ. ೨೦೦***
**ಶ್ರೀ ಬಿದರಿ ಕುಮಾರೇಶ್ವರ ಗ್ರಂಥಮಾಲೆ,** ಓಲೀಮಠ ಜಮಖಂಡಿ, ಕಲ್ಮಠ, ಸವದತ್ತಿ

**ಮೋಕ್ಷವಾದ ಮತ್ತು ಅಂಬೇಡ್ಕರ್‌ವಾದ**
*ಎಚ್. ಎಸ್. ಬೇನಾಳ*
***ಪುಟ : xx + ೧೨೦ = ೧೪೦*** ***ಬೆಲೆ ರೂ. ೧೧೦***

**ಪ್ರಥಮ ವಚನಕಾರ ಜೇಡರ ದಾಸಿಮಯ್ಯ** (ದಕ್ಷಿಣ ವಾರಣಾಸಿ ಸುಕ್ಷೇತ್ರ ಮುದನೂರ) ಎಚ್. ಎಸ್. ಬೇನಾಳ
***ಪುಟ : xxviii + ೧೨೪ = ೧೫೨ + ೧೬ (colour pages)*** ***ಬೆಲೆ ರೂ. ೨೦೦***
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸಹನಾ ಪ್ರಕಾಶನ,** ಗುಲಬರ್ಗಾ – ೫೮೫ ೧೦೩

**ಹಸ್ತಪ್ರತಿ ಸಂಕಥನ** *ಡಾ॥ ವೀರೇಶ ಬಡಿಗೇರ*
***ಪುಟ : xiv + ೨೦೦*** ***ಬೆಲೆ ರೂ. ೧೬೦***
**ಮಯ ಪ್ರಕಾಶನ,** ಕಮಲಾಪುರ – ೫೮೩ ೨೨೧

**ಕೊಪ್ಪಳ ಜಿಲ್ಲೆಯ ಅನುಭಾವಿ ಕವಿಗಳು**
*ಡಾ॥ ಬಸವರಾಜ ಸಬರದ*
***ಪುಟ : ೯೨*** ***ಬೆಲೆ ರೂ. ೫೦***
**ನಿರ್ದೇಶಕರು, ಪ್ರಸಾರಾಂಗ,** ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ – ೫೮೫ ೧೦೬

**ನಾಡೋಜ ಪಾಟೀಲ ಪುಟ್ಟಪ್ಪ**
*ಶಿವರಂಜನ್ ಸತ್ಯಂಪೇಟೆ*
***ಪುಟ : xvi + ೮೮*** ***ಬೆಲೆ ರೂ. ೧೦೦***
**ಬಸವಮಾರ್ಗ ಪ್ರತಿಷ್ಠಾನ ಸತ್ಯಂಪೇಟೆ,** ಶಹಾಪುರ – ೫೮೫ ೨೨೩, ಯಾದಗಿರಿ

**ಬೊಗಸೆ ತುಂಬ ಕೆಂಡವು** (ಕವಿತೆಗಳು)
*ನವೀನ್‌ಕುಮಾರ್*
***ಪುಟ : xiv + ೬೦ = ೭೪*** ***ಬೆಲೆ ರೂ. ೬೫***
**ಶ್ಯಾಮಲಾ ಸಾಹಿತ್ಯ,** 'ವೆಂಕಟೇಶ್ವರ ನಿಲಯ', ತಿಲಕ್ ರಸ್ತೆ, ಕೊಪ್ಪ, ಚಿಕ್ಕಮಗಳೂರು ಜಿಲ್ಲೆ

**ಬದುಕು ಪ್ರೀತಿಯ ಒಡಲು** (ಕವನಗಳು)
*ಸಿದ್ಧರಾಜು ವೈ. ಸೊನ್ನದ*
***ಪುಟ : xii + ೭೦ = ೮೨*** ***ಬೆಲೆ ರೂ. ೧೦೦***
**ಸುಮತಾ ಪ್ರಕಾಶನ,** 'ಸಂಕೇತ ನಿಲಯ' ಸೆಕ್ಟರ್ ನಂ. ೧೨, ಪ್ಲಾಟ್ ೧೬೩ಎ, ನವನಗರ, ಬಾಗಲಕೋಟ

**೮೦ರ ಪಯಣ – ಡಾ॥ ಬಿ. ಎ. ಸನದಿಯವರ ಸಾಹಿತ್ಯಯಾನದ ಹೆಜ್ಜೆಗಳು**
*ಸಂ : ಪ್ರೊ॥ ಮೋಹನ ಹಬ್ಬು*
***ಪುಟ : ೭೩೬ + iv*** ***ಬೆಲೆ ರೂ. ೭೦೦***
**ಸಾಹಿತ್ಯಸುಗ್ಗಿ,** ನಂ. ೪೦, ೧ನೇ ಮುಖ್ಯರಸ್ತೆ, ೨ನೇ ಹಂತ, ೩ನೇ ಬ್ಲಾಕ್, ನಾಗರಬಾವಿ, ಬೆಂಗಳೂರು – ೫೬೦ ೦೭೨



*ಶ್ರೀಮತಿ ಮುಕ್ತಾ ದಾಭೋಲ್ಕರ್ ಅವರೊಂದಿಗೆ ಜಿ.ಆರ್.*

ಜನಾಂಗದ ಜನರು ಬಿಡಿ ಬಿಡಿ ವ್ಯಕ್ತಿಗಳಾಗಿ ಭಾಗ ವಹಿಸುತ್ತಾರಾದರೂ ಅವರು ಇಡೀ ಸಮುದಾಯವಾಗಿ ಬಂದು ಭಾಗವಹಿಸಿರುವುದು ಕಡಿಮೆಯೇ.

**ಹೊಸತು :** ಇಂದು ಯುವಜನರು ಸಾಮಾಜಿಕ ಚಳುವಳಿಗಳಲ್ಲಿ ಭಾಗವಹಿಸುವುದು ಕಡಿಮೆ. ಹಾಗಿರುವಾಗ ಅವರನ್ನು ಆಕರ್ಷಿಸಲು ನೀವು ಎಂತಹ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದೀರಾ ?

**ಮುಕ್ತಾ :** ನಮ್ಮಲ್ಲಿ ಮಾತಿಗಿಂತ ಕ್ರಿಯೆಗೆ ಆದ್ಯತೆ ಹೆಚ್ಚು. ವಿದ್ಯಾರ್ಥಿಗಳು, ಯುವಜನರು ಭಾಗವಹಿಸ ಬಹುದಾದಂತಹ ಸಣ್ಣ ಸಣ್ಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತೇವೆ. ಉದಾಹರಣೆಗೆ, ಜನರು ಗಣೇಶೋತ್ಸವದ ಸಂದರ್ಭದಲ್ಲಿ ಗಣೇಶನ ಮೂರ್ತಿ ಗಳನ್ನು ಕೆರೆಯಲ್ಲಿ ಮುಳುಗಿಸಿ ಜಲ ಮಾಲಿನ್ಯವನ್ನು ಉಂಟುಮಾಡುವರು. ಆಗ ನಮ್ಮ ಸಮಿತಿಯ ಸದಸ್ಯರು ಅವರಲ್ಲಿ ಹೋಗಿ ಮುಳುಗಿದ ಗಣೇಶ ಮೂರ್ತಿಗಳನ್ನು ತೆಗೆದುಕೊಂಡು ಸ್ವತಃ ಇದಕ್ಕೆಂದೇ ನಿರ್ಮಿಸಿದ ಕೃತಕ ಬಾವಿಗಳಲ್ಲಿ ಮುಳುಗಿಸುವರು. ಇದನ್ನೊಂದು ಚಳುವಳಿಯ ರೂಪದಲ್ಲಿ ಮಾಡುವು ದರಿಂದ ಜನರಿಗೂ ಇದರ ಬಗ್ಗೆ ಜಾಗೃತಿಯುಂಟಾಗಿ ಅವರೇ ಸ್ವತಃ ಈ ಚಳುವಳಿಯಲ್ಲಿ ಭಾಗವಹಿಸುವರು. ಹಾಗೆಯೇ, ಪಟಾಕಿ ಹಬ್ಬದ ಸಂದರ್ಭದಲ್ಲೂ ಪ್ರತಿಯೊಂದು ಮನೆಗೂ ಹೋಗಿ ಪ್ರತಿ ಬಾರಿಯು ಕೊಳ್ಳುವ ಪಟಾಕಿಯಲ್ಲಿ ಮೊದಲಿಗೆ ನೂರು ರೂಪಾಯಿ ಉಳಿಸುವಂತೆ ಮಕ್ಕಳ ಮನವೊಲಿಸಿ ಅರ್ಜಿಯೊಂದಕ್ಕೆ ಸಹಿ ಹಾಕಿಸಿಕೊಳ್ಳುವರು. ಕೊನೆಗೆ ಈ ಅರ್ಜಿಗಳನ್ನೆಲ್ಲಾ ಸಂಗ್ರಹಿಸಿ ಒಟ್ಟಾಗಿ ಉಳಿತಾಯ ಮಾಡಿದ ಪಟಾಕಿಯ ಮೊತ್ತವನ್ನು ಘೋಷಿಸುವುದು ಒಂದು ಕಾರ್ಯಕ್ರಮ. ಇಂತಹ ಕಾರ್ಯಕ್ರಮಗಳಲ್ಲಿ ಹೆಚ್ಚು ಹೆಚ್ಚು ಯುವ ಜನರನ್ನು ತೊಡಗಿಸಿ ಕೊಳ್ಳುವುದು ಸಾಧ್ಯ.

**ಹೊಸತು :** ನೀವು ಜನರ ಮೂಢನಂಬಿಕೆಗಳನ್ನು ಹೋಗಲಾಡಿಸಲು ವಿಶಿಷ್ಟವಾದ ಮಾರ್ಗೋಪಾಯ ಗಳನ್ನು ಆಚರಿಸುತ್ತೀರಾ ?

**ಮುಕ್ತಾ :** ನಾವು ಮೊದಲು ಜನರು ಈ ಮೂಢನಂಬಿಕೆಗಳಿಗೆ ಏಕೆ ದಾಸರಾಗಿದ್ದಾರೆ, ಎಂಬುದನ್ನು ತಿಳಿದುಕೊಳ್ಳಬೇಕು. ಉದಾಹರಣೆಗೆ ಜನರಿಗೆ ಬರುವ ಕಾಯಿಲೆ, ಕಸಾಲೆ ಇರಬಹುದು, ಇಲ್ಲವೆ ಮಾನಸಿಕ ವೈಕಲ್ಯಗಳಿರಬಹುದು. ಹುಚ್ಚು ಬಿಡಿಸಲು, ಕಾಯಿಲೆ ಹೋಗಿಸಲು ಜನ ದರ್ಗಾ, ದೇವಾಲಯಗಳಿಗೆ ಹೋಗುತ್ತಾರೆ. ಮಾಟ, ಮಂತ್ರಗಳಿಗೆ ಮೊರೆಹೋಗುತ್ತಾರೆ. ಆಗ ಅವರು ಹೋಗುವ ದರ್ಗಾಗಳೋ, ದೇವಾಲಯದ ಬಳಿಯೋ ಮಾನಸಿಕ ಚಿಕಿತ್ಸಾ ಕೇಂದ್ರವನ್ನು ತೆರೆದು ಅಲ್ಲಿಗೆ ಬರುವ ರೋಗಿಗಳನ್ನು ಕರೆದು ಅವರಿಗೆ ಮಾನಸಿಕ ಸಾಂತ್ವನ ಹೇಳುವುದು, ಶುಶ್ರೂಷೆ ಮಾಡುವುದು ಮುಂತಾದವನ್ನು ಹಮ್ಮಿಕೊಳ್ಳುತ್ತೇವೆ. ಈ ಕೆಲಸ ಮಾಡುವ ಕಾರ್ಯಕರ್ತರನ್ನು 'ಮಾನಸ ಮಿತ್ರ' ಎಂದು ಕರೆಯುತ್ತೇವೆ. ಅವರಿಗೆ ಮಾನಸಿಕ ಆರೋಗ್ಯದ ತರಬೇತಿಯನ್ನು ನೀಡಿ ಸಜ್ಜು ಗೊಳಿಸಲಾಗಿರುತ್ತದೆ. ಹೀಗೆಯೇ ಜನರ ನಂಬಿಕೆ, ಪದ್ಧತಿಯನ್ನು ಒಮ್ಮೆಗೆ ಖಂಡಿಸದೆ ವೈಜ್ಞಾನಿಕ ಪದ್ಧತಿಗಳಲ್ಲಿ ವಿಶ್ವಾಸ ಮೂಡುವಂತೆ ಮಾಡುವುದು ನಮ್ಮ ತಂತ್ರವಾಗಿದೆ.

**ಹೊಸತು :** ಇಂತಹ ಚಳುವಳಿಗಳು ಅಲ್ಪ ಸಂಖ್ಯಾತ ಧರ್ಮಗಳ ಮೂಢನಂಬಿಕೆಗಳನ್ನು ಕುರಿತು ಧ್ವನಿಯೆತ್ತುವುದಿಲ್ಲ, ಎನ್ನುವ ಆಕ್ಷೇಪಣೆಯನ್ನು ಮಾಡುತ್ತಾರಲ್ಲ, ಅದಕ್ಕೆ ಏನು ಹೇಳುತ್ತೀರಿ ?

**ಮುಕ್ತಾ :** ಹಾಗೇನಿಲ್ಲ, ಎಲ್ಲ ರೀತಿಯ ಮೂಢನಂಬಿಕೆಗಳ ವಿರುದ್ಧವೂ ನಾವು ಮಾತನಾಡುತ್ತೇವೆ. ನೀವು ನಮ್ಮ ತಂದೆ ಬರೆದಿರುವ ಪುಸ್ತಕವನ್ನು ಓದಿ. ನಾವು ಮಸೂದೆಯಲ್ಲಿ ಪಟ್ಟಿ ಮಾಡಿರುವ ಮೂಢನಂಬಿಕೆಗಳಲ್ಲಿ ಇಸ್ಲಾಂ ಧರ್ಮಕ್ಕೆ ಸೇರಿದ ೬೦೦ ಮೂಢನಂಬಿಕೆಗಳು ಸೇರಿವೆ. ನನ್ನ ಸೋದರನಿಗೆ ನಮ್ಮ ತಂದೆ ಹಮೀದ್ ದಲವಾಯಿ ಎಂದು ನಾಮಕರಣ ಮಾಡಿದ್ದಾರೆ. ಅದು ಮುಸ್ಲಿಂ ಸಂತ ಹಮೀದ್‌ನ ಹೆಸರು.

ಮತ್ತೊಂದು ಉದಾಹರಣೆ ಕೊಡುವೆ : ಮಾಹಿಮ್‌ನಲ್ಲಿ ಸಮುದ್ರದ ನೀರು ತುಂಬ ಗಲೀಜಾಗಿ ರುತ್ತದೆ. ಅಲ್ಲಿ ಮೌಂಟ್ ಮೇರಿ ಕೆಥಡ್ರಲ್‌ನವರು ಅಲ್ಲಿನ ದೈವೀಕೃಪೆಯಿಂದ ಚಮತ್ಕಾರವುಂಟಾಗಿ ನೀರು ಸಿಹಿಯಾಗಿದೆ, ಎಂದು ಸುದ್ದಿ ಹಬ್ಬಿಸಿದರು. ಜನ ಕೂಡ ಅದನ್ನು ನಂಬಿ ಧಾವಿಸಿ ಬಂದರು. ಅಷ್ಟೊಂದು ಕೊಳಕಾದ ನೀರನ್ನು ಹಾಗೆಯೇ ಸೇವಿಸುವುದು ಜೀವಕ್ಕೆ ಹಾನಿ ಎಂದು ಈ ಮೂಢ ಜನ ಭಾವಿಸಲೇ ಇಲ್ಲ. ಆ ನೀರನ್ನು ಬಾಟಲ್‌ಗಳಲ್ಲಿ ತುಂಬಿಕೊಂಡು ತೀರ್ಥವೆಂಬಂತೆ ಸೇವಿಸುತ್ತಿದ್ದರು. ಆಗ ನಾವು ಈ ಪವಾಡದ ವಿರುದ್ಧವೂ ಹೋರಾಟ ನಡೆಸಿದೆವು. ಆ ಧರ್ಮಕ್ಕೆ ಸೇರಿದ ಜನರೂ ಈ ಚಳುವಳಿಯಲ್ಲಿ ಭಾಗವಹಿಸಿದರು.

**ಹೊಸತು :** ಆದರೂ ಈ ಮೂಢನಂಬಿಕೆ ನಿರ್ಮೂಲನಾ ಚಳುವಳಿಯಲ್ಲಿ ಕಾರ್ಯಕರ್ತರಾಗಿ ಅಲ್ಪಸಂಖ್ಯಾತ ಧರ್ಮಗಳ ಜನರು ಭಾಗವಹಿಸುವುದು ಕಡಿಮೆಯಲ್ಲವೆ ?

**ಮುಕ್ತಾ :** ಅದು ನಿಜ. ಆದರೆ, ನಾವು ಒಂದಂಶವನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಈ ಜನರಿಗೆ ಅವರ ಧರ್ಮಗಳ ಒಳಗೆ ಬಂಡೇಳಲು ಸಾಧ್ಯವಾಗುವಂತಹ ಒಂದು ವೇದಿಕೆಯಿರುವುದಿಲ್ಲ. ಅಷ್ಟೇ ಅಲ್ಲ, ವಿದ್ಯಾಭ್ಯಾಸದ ಅವಕಾಶಗಳು ಕಡಿಮೆ. ಈ ಎಲ್ಲಾ ಅಂಶಗಳನ್ನು ಗಂಭೀರವಾಗಿ ಪರಿಗಣಿಸಬೇಕು. ಮೂಢನಂಬಿಕೆ ನಿರ್ಮೂಲನೆಯ ಚಳುವಳಿ ಹಲವಾರು ಅಂಶಗಳನ್ನು ಪರಿಗಣಿಸಬೇಕಾಗುತ್ತದೆ.

**ಹೊಸತು :** ಹೌದು, ನೀವು ಹೇಳುವುದು ನಿಜ. ನಮ್ಮೊಡನೆ ಇಷ್ಟೊಂದು ವಿಚಾರಗಳನ್ನು ಹಂಚಿ ಕೊಂಡಿದ್ದೀರಾ. ಹೊಸತು ಪರವಾಗಿ ವಂದನೆಗಳು.

ಲೇಖನ ಸಿದ್ಧಪಡಿಸಿದವರು : **ಡಾ॥ ಎನ್. ಗಾಯತ್ರಿ**
ನಂ. ೨೦೧, ಸ್ಕೈಲೈನ್ ಗೋಲ್ಡನ್ ರೇಸ್, ಛತ್ರಂ ಬ್ಲಾಕ್
ಗವಿಪುರಂ ಕೆಂಪೇಗೌಡ ನಗರ, ಬೆಂಗಳೂರು-೫೬೦ ೦೧೯

## ಅಭದ್ರ

ಕೆಳವರ್ಗಗಳಿಗೆ
ಸೇರಿದ ಯಾರ
ಬುಡವೂ ಈಗ
ಭದ್ರವಿಲ್ಲ;
ಬುಡಕಟ್ಟು
ಜನಾಂಗದ ಬುಡ
ಮತ್ತಷ್ಟು ಅಭದ್ರ !

**ಸಿ. ಪಿ. ಕೆ.**
ಮೈಸೂರು




## ಸಮಗ್ರ ನಿರೀಶ್ವರವಾದ



*ಮರಾಠಿ ಮೂಲ :*
*ಶರದ ಬೇಡೇಕರ*
*ಕನ್ನಡಕ್ಕೆ :*
*ಚಂದ್ರಕಾಂತ ಪೋಕಳೆ*
**ಪುಟ : ೧೪೮**
**ಬೆಲೆ : ರೂ. ೧೬೫**
**ನವಕರ್ನಾಟಕ ಪ್ರಕಾಶನ**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – 1

*ಆತ್ಮ ಮತ್ತು ದೇವರು – ಈ ಎರಡು ವಿಚಾರಗಳನ್ನು ತಮ್ಮ ಬುದ್ಧಿಗೆ ನಿಲುಕಿದಂತೆ ಅರ್ಥೈಸಿಕೊಳ್ಳುತ್ತ ಸಾಗಿದ ಮನುಷ್ಯರಲ್ಲಿ ಸಹಜವಾಗಿ ಭಿನ್ನಾಭಿಪ್ರಾಯ ತಲೆದೋರಿ ಪ್ರಪಂಚದಾದ್ಯಂತ ಇರುವ ವಿವಿಧ ಮತ ಶಾಖೆಗಳು ಬೇರೂರಿದವು. ಹೀಗಾಗಿ ಇದರಿಂದ ಈಶ್ವರನೊಬ್ಬನೇ ಇರುವುದೋ ಹಲವು ದೇವ ದೇವತೆಗಳೋ ಎಂಬ ಜಿಜ್ಞಾಸೆ ಪ್ರಾರಂಭವಾಯಿತು. ಬುದ್ಧಿಶಾಲಿ ವರ್ಗವೊಂದು ಭೌತವಾದಿ ಪ್ರಪಂಚವು ನಿಯಮಗಳಿಗನುಸಾರವಾಗಿ ಮಾತ್ರ ನಡೆಯುತ್ತದೆಂದೂ ದೇವನೊಬ್ಬ ಇರುವುದು ಕೇವಲ ಕಾಲ್ಪನಿಕ ವಿಚಾರವೆಂದೂ ಇದುವರೆಗೂ ಈಶ್ವರವಾದಿಗಳು ಆತನ ಇರುವಿಕೆಯನ್ನು ಒಪ್ಪುವಂತಹ ಸಮರ್ಥನೆ ನೀಡಿಲ್ಲವೆಂದೂ ದೈವವಾದವನ್ನು ಸ್ಪಷ್ಟವಾಗಿ ನಿರಾಕರಿಸಿದ್ದಾರೆ. ದೇವರ ಹೆಸರಿನಲ್ಲಿ ದೇಗುಲ ಸಂಸ್ಕೃತಿ ನಿರ್ಮಾಣಮಾಡಿ ದೇವರ ಭಯವನ್ನು ಮುಗ್ಧಜನರಲ್ಲಿ ಬಿತ್ತಿ ಹೆದರಿಸಿ ಆತನನ್ನು ಮಾನಸಿಕ–ಆರ್ಥಿಕವಾಗಿ ಕುಗ್ಗಿಸಿ ದೈವಭಕ್ತಿಯ ಅಮಲೇರಿಸಿ ಈಶ್ವರವಾದಿಗಳು ತಾವೂ ಸ್ವತಃ ಅದೇ ಗೊಂದಲದಲ್ಲಿ ಬಿದ್ದು ತೊಳಲಾಡುತ್ತಿದ್ದಾರೆ. ಈ ಮಹತ್ವದ ಕೃತಿಯ ಯುಕ್ತಿವಾದಿ – ನಿರೀಶ್ವರವಾದಿ ಇಬ್ಬರೂ ಪರಸ್ಪರ ತಮ್ಮ ಅನಿಸಿಕೆಗಳನ್ನು ಹಂಚಿಕೊಂಡು ಮಥಿಸುತ್ತ ಗಂಭೀರ ಚರ್ಚೆಯಲ್ಲಿ ತೊಡಗಿದಂತೆ ರೂಪಿತವಾಗಿದೆ. ಮಾತ್ರವಲ್ಲ, ಕಲ್ಪನಾಸೌಧದ ಮೇಲೆ ನಿರ್ಮಿತವಾಗಿರುವ ಈಶ್ವರವಾದಿಯ ನಿಲುವನ್ನು ನಿರೀಶ್ವರವಾದಿಯು ದೇವರ ಅಸ್ತಿತ್ವವನ್ನೇ ನಿರಾಕರಿಸಿ ಒಪ್ಪಿತವಾಗುವ ವಾದ ಮಂಡಿಸಿ ವಿಶ್ವದ ಅರಿವನ್ನು ಮೂಡಿಸುವಲ್ಲಿ ಸಫಲನಾಗಿದ್ದಾನೆ.*

## ನಂಬಿಕೆ, ಮೂಢನಂಬಿಕೆ, ವೈಜ್ಞಾನಿಕ ಮನೋವೃತ್ತಿ

*ಎಂ. ಅಬ್ದುಲ್ ರೆಹಮಾನ್ ಪಾಷ*
**ಪುಟ : ೨೦೦** **ಬೆಲೆ : ರೂ. ೧೨೫**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ನಂಬಿಕೆ–ಶ್ರದ್ಧೆಗಳಿಲ್ಲದಿದ್ದರೆ ನಮ್ಮ ಜೀವನ ಪರಿಪೂರ್ಣವಲ್ಲ. ಅವು ಮೂಢನಂಬಿಕೆ, ಅಂಧಶ್ರದ್ಧೆಗಳಾಗಿ ಪರಿವರ್ತಿತವಾಗದಂತೆ, ವೈಚಾರಿಕ ಬುದ್ಧಿ ನಮ್ಮಿಂದ ಪಲಾಯನಗೈಯದಂತೆ ಜಾಗ್ರತರಾಗಿರುವುದು ಅವಶ್ಯ. ಬಾಲ್ಯದಿಂದಲೇ ಸಂಸ್ಕಾರಗೊಂಡ ಮನಸ್ಸಿಗೆ ಕೆಲವು ಸಾಮಾಜಿಕ ಕಟ್ಟಲೆಗಳನ್ನು ಮೀರುವ ಧೈರ್ಯ ಅಷ್ಟು ಸುಲಭವಾಗಿ ಬರುವುದಿಲ್ಲ. ಕಟ್ಟುಪಾಡು, ರೂಢಿಗತ ಸಂಪ್ರದಾಯ, ಧಾರ್ಮಿಕ ಬೆದರಿಕೆ ಇವೆಲ್ಲ ಶೃಂಖಲೆಗಳಂತೆ! ತಾನಾಗಿ ಕಳಚಿಕೊಳ್ಳುವಂತಹವಲ್ಲ. ಮೂಢ ಆಚಾರ ತೊಡೆದುಹಾಕಲು ದೃಢ ಮನಸ್ಸು ಬೇಕು. ವಿಮರ್ಶಾತ್ಮಕ ದೃಷ್ಟಿಕೋನವಿರಬೇಕು. ಶತಮಾನದ ಹಿಂದಿನ ಅನೇಕ ನಂಬಿಕೆಗಳು ಹುಸಿ ಹಾಗೂ ಅವೈಜ್ಞಾನಿಕ ಎಂದು ಪ್ರಾಯೋಗಿಕವಾಗಿ ಸಿದ್ಧವಾಗಿದ್ದರೂ ನಾವು ಅವನ್ನು ಇನ್ನೂ ಕೈಬಿಟ್ಟಿಲ್ಲ. ಅದಕ್ಕೆ ಕಾರಣ ಜ್ಯೋತಿಷ್ಯ – ಮತಧಾರ್ಮಿಕ – ದೈವ ದೇವಸ್ಥಾನಗಳ ಪೋಷಕರು ತಮ್ಮ ಸ್ವಾರ್ಥಕ್ಕೋಸ್ಕರ ಜನಮನದಲ್ಲಿ ಚಾಲ್ತಿಯಲ್ಲಿರುವಂತೆ ನೋಡಿಕೊಳ್ಳುವುದು. ಅವು ಶ್ರೀಸಾಮಾನ್ಯನ ಅಸಹಾಯಕತೆಯನ್ನು ಬಂಡವಾಳವಾಗಿಸಿ ವಾಣಿಜ್ಯೀಕರಣಗೊಳಿಸಿ ಜನರನ್ನು ತಪ್ಪುದಾರಿಗೆಳೆದು ಸಂಪತ್ತನ್ನು ಗುಡ್ಡೆ ಹಾಕಿಕೊಳ್ಳುತ್ತಲೇ ಇವೆ. ಪ್ರಶ್ನಿಸುವ ವೈಚಾರಿಕ ಮನೋವೃತ್ತಿ ನಾವು ಬೆಳೆಸಿಕೊಂಡಿಲ್ಲ. ಅದನ್ನು ಬೆಳೆಸಿಕೊಳ್ಳಬೇಕು ಮಾತ್ರವಲ್ಲ ನಮ್ಮಲ್ಲಿ ಬೇರೂರಿರುವ ಭಯದ ವಾತಾವರಣದಿಂದ ದೂರಸರಿದು ಮೌಢ್ಯದ ಕತ್ತಲಿನಿಂದ ಹೊರಬರಬೇಕೆಂಬುದೇ ಈ ಲೇಖನಗಳ ಉದ್ದೇಶ. ಸದಾಚಾರ – ಸದ್ವರ್ತನೆ – ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳಲು ಸಹಾಯಕವಾಗುವಂಥ ಕೃತಿ.*

## ಹಿಂದೂ (ಸವರ್ಣ–ದಲಿತ ಸಂಘರ್ಷ)



*ಮರಾಠಿ ಮೂಲ : ಶರಣಕುಮಾರ ಲಿಂಬಾಳೆ; ಕನ್ನಡಕ್ಕೆ : ಡಾ॥ ಪ್ರಮೀಳಾ ಮಾಧವ್*
**ಪುಟ : ೧೬೮** **ಬೆಲೆ : ರೂ. ೧೨೦**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಸವರ್ಣ–ದಲಿತ ಸಂಘರ್ಷದ ಈ ಕೃತಿಯ ಒಳಹೊಕ್ಕು ಹೊರಗೆ ಬಂದಾಗ ಭಯಾನಕ ವ್ಯವಸ್ಥೆಯೊಂದರ ಸಂಪೂರ್ಣ ಪರಿಚಯವಾಗುತ್ತದೆ. ಸಮಾಜದಲ್ಲಿ ಸವರ್ಣೀಯರು ದಲಿತ ವಿರೋಧಿಯಾದ ಎಂತೆಂತಹ ಕಾರಸ್ಥಾನಗಳನ್ನು ವ್ಯವಸ್ಥೆಗೊಳಿಸಿ ತಮ್ಮ ಸ್ವಾರ್ಥ ಮೆರೆದಿರುತ್ತಾರೆಂಬ ಅರಿವು ಆಗುತ್ತದೆ. ಉರಿಯುವ ಮನೆಯ ಗಳ ಹಿರಿಯುವ ಮಂದಿ, ಎರಡೂ ಕಡೆಗಳಲ್ಲಿ ಸಂಭಾವಿತರಂತೆ ನಟಿಸುತ್ತ ತಮ್ಮ ಹತೋಟಿ ಸಾಧಿಸಿ ಎರಡು ಸಮುದಾಯಗಳ ಮಧ್ಯೆ ಕಿಚ್ಚಿಕ್ಕುವ ಜನ, ತಮ್ಮ ಪ್ರತಿಷ್ಠೆಗಾಗಿ ಎಂತಹ ಹೇಯಕೃತ್ಯಕ್ಕೂ ಹೇಸದ ಕ್ರೂರಿಗಳು ಇಲ್ಲಿನ ಪಾತ್ರಗಳಾಗಿದ್ದಾರೆ. ಮತ–ಧಾರ್ಮಿಕ ವಿಷಯಗಳಲ್ಲಿ ಸಮಾಜವು ಬೂದಿಮುಚ್ಚಿದ ಕೆಂಡದಂತೆ ಭಾಸವಾಗುತ್ತದೆ. ಪವಿತ್ರವೆಂದು ನಂಬಲಾಗುವ ದೇವಮಂದಿರಗಳಲ್ಲಿ ಕೊಲೆ ಸಂಚುಗಳು ರೂಪುಗೊಂಡು ಕಾರ್ಯರೂಪಕ್ಕೆ ಬರುತ್ತವೆ. ಮೀಸಲಾತಿಯ ಮೂಲಕ ದಲಿತರು – ಅಸ್ಪೃಶ್ಯರು ಅಧಿಕಾರಕ್ಕೆ ಬಂದಾಗ ಅವರ ಮುಗ್ಧತೆಯನ್ನು ದುರುಪಯೋಗಪಡಿಸಿಕೊಂಡು ನೆಪಕ್ಕೆ ಅವರನ್ನು ಅಧಿಕಾರಕ್ಕೇರಿಸಿ ತಾವು ಹೇಳಿದಂತೆ ಅವರನ್ನು ಕುಣಿಸುವ ಹುನ್ನಾರ, ಒತ್ತಡಗಳನ್ನು ಸೃಷ್ಟಿಸಿ ಮಣಿಸುವ ಕುಟಿಲ ಇವೆಲ್ಲ ನಡೆಯುತ್ತದೆ. ಇಂದಿನ ರಾಜಕೀಯ – ಸಾಮಾಜಿಕ ಸನ್ನಿವೇಶಗಳ ಜ್ವಲಂತ ದರ್ಶನವಿದು. ಮುಂದೆ ದ್ವೇಷ + ದ್ವೇಷ, ಪ್ರತೀಕಾರ + ಪ್ರತೀಕಾರ! ವರ್ಗಸಂಘರ್ಷಗಳು ಭೀಕರವಾಗಿ ನಡೆದು ರಕ್ತದೋಕುಳಿ, ದಲಿತ – ಸವರ್ಣರೆಲ್ಲರ ರಕ್ತದ ಬಣ್ಣ ಮಾತ್ರ ಕೆಂಪೇ ಆಗಿರುತ್ತದೆ. ವ್ಯವಸ್ಥೆ ಬದಲಿಸಹೊರಟ ಗಂಡುಗಲಿಗಳೆಲ್ಲ ತಾವೇನಾಗಿದ್ದೇವೆಂದು ಸ್ವ–ವಿಮರ್ಶೆ ಮಾಡತೊಡಗುತ್ತಾರೆ.*

## ಬೀದಿ ಬೆಳಕಿನ ಕಂದೀಲು (ಲೇಖನಗಳು)



*ಬಸವರಾಜ ಹೂಗಾರ*
**ಪುಟ : ೮೦** **ಬೆಲೆ : ರೂ. ೬೦**
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

*ಪುಟ್ಟ ಪುಟ್ಟ ಲೇಖನಗಳ ಗುಚ್ಛವಾದರೂ ನಾವಿಂದು ಬದುಕುತ್ತಿರುವ ಸಾಂಸ್ಕೃತಿಕ ಪರಿಸರದ ಬಗ್ಗೆ ಕೆಲವು ಝಲಕುಗಳನ್ನು ನೀಡಿ ಯೋಚಿಸುವಂತೆ ಮಾಡಿವೆ. ನಮಗೇ ಅರಿವಿಲ್ಲದಂತೆ ನಮ್ಮ ನಡೆನುಡಿಗಳಲ್ಲಿ, ವ್ಯವಹಾರದಲ್ಲಿ ಆಕ್ಷೇಪಾರ್ಹವಾದ ಅಂಶಗಳಿರುತ್ತವೆ. ನಾವು ಮಾತನಾಡಿದ್ದನ್ನು ಕೃತಿಯಲ್ಲಿಳಿಸುವವರಲ್ಲ. ನಮ್ಮದು ಜಾತ್ಯತೀತ ರಾಷ್ಟ್ರವೆಂದು ಸಂವಿಧಾನದಲ್ಲಿ ಬರೆದಿದ್ದರೂ ಎಲ್ಲರನ್ನೂ ಗೌರವಿಸಬೇಕೆಂದು ಹೇಳಿ ಎಲ್ಲ ಮತಾಚರಣೆಗಳಿಗೂ ಹಸಿರು ನಿಶಾನೆ ತೋರಿದ್ದಾರೆ. ಜಾತಿಯ ಕಲಂಕ ನಮ್ಮಿಂದ ದೂರ ಸರಿಯಲೊಲ್ಲದು. ಧಾರ್ಮಿಕ ಆಚರಣೆಗಳಲ್ಲಿ ನಾವು ಪೋಲುಮಾಡುವ ಆಹಾರಧಾನ್ಯಗಳು ಒಂದು ಹೊತ್ತು ಊಟಕ್ಕೆ ಗತಿಯಿಲ್ಲದವರ ಹೊಟ್ಟೆ ತುಂಬಿಸುತ್ತವೆ. ಉಳ್ಳವರ – ಇಲ್ಲದವರ ಅಂತರ ಕಡಿಮೆಯಾಗುವುದಿಲ್ಲ. ಪ್ರಗತಿಯಾಗುವುದೆಂಬ ಭ್ರಮೆಯಲ್ಲೇ ಕಾಲಕಳೆಯುತ್ತೇವೆ. ಪಕ್ಕದವರು ಹಸಿದು ಕೂತಿದ್ದರೆ ನಾವು ಹೊಟ್ಟೆತುಂಬಾ ಉಂಡು ಸಂಭ್ರಮಿಸುತ್ತೇವೆ. ನಮ್ಮಿಂದ ಜೀರ್ಣಿಸಿಕೊಳ್ಳಲಾಗದ ಸಂಸ್ಕೃತಿಯನ್ನು ಸಹ ನಮ್ಮಿಂದ ಬದಲಿಸಲು ಸಾಧ್ಯವಾಗದಂಥ ಪರಿಸ್ಥಿತಿಯಲ್ಲಿ ನಾವಿದ್ದೇವೆ. ಹಾಗಾದರೆ ನಮ್ಮ ಅಭಿವೃದ್ಧಿಗೆ ತಡೆ ಒಡ್ಡುವವರು ಯಾರು? ವೈಯಕ್ತಿಕ ನಂಬಿಕೆಗಳು ಸಾರ್ವಜನಿಕ ಮಟ್ಟಕ್ಕೇರಿ ಅನಾಹುತಗಳನ್ನು ಸೃಷ್ಟಿಸಿದಾಗಲೂ ಸ್ಪಂದಿಸದೆ ಇರುವುದು ಯಾರ ಪ್ರೇರಣೆಯಿಂದ? ಸಮುದಾಯದ ಒಳಿತಿಗಾಗಿ ಶ್ರಮಿಸುತ್ತಿದ್ದ ಬುಡಕಟ್ಟು ಸಂಸ್ಕೃತಿಯ ಮಾನವ ಇಂದಿನ ವೇಗದ ಯುಗದಲ್ಲಿ ತನ್ನ ಮಾನವೀಯತೆಯನ್ನೇ ಕಳೆದುಕೊಂಡು ಯಾವ ಕಾಲದಲ್ಲಿ ಬದಲಾದ? ಹಲವು ಮುಖಗಳಿಂದ ಬೇರೆ ಬೇರೆ ವಿಷಯಗಳನ್ನಾಯ್ದು ಬರೆದ ಈ ಲೇಖನಗಳಲ್ಲಿ ಇಂಥ ಚಿಂತನೆ ಉದ್ದಕ್ಕೂ ಮಂಡಿತವಾಗಿದೆ.*

– **ಇಂದಿರಾಕುಮಾರಿ,** ಯಶವಂತಪುರ, ಬೆಂಗಳೂರು – ೨೨

# ಕಾಣದ ಗ್ರಹಣಗಳು

**ಮೋ**ಡಗಳು ಬಿಡುವುಕೊಟ್ಟರೆ ಸಂಜೆಯ ಆಕಾಶದಲ್ಲಿ ಆಕಾಶಗಂಗೆಯ ಸೊಬಗನ್ನು ಕಾಣಬಹುದು. ಚಂದ್ರನಿಲ್ಲದ ರಾತ್ರಿಗಳಲ್ಲಿ ಆಕಾಶವೂ ಶುಭ್ರವಾಗಿರುವ ಅವಕಾಶ ಸಿಕ್ಕರೆ ಮರೆಯದೇ ಈ ಭಾಗವನ್ನು ನೋಡಿ. ವೃಶ್ಚಿಕ ಧನುರಾಶಿಗಳಲ್ಲಿ ನಕ್ಷತ್ರಗಳ ದಟ್ಟಣೆ ಹೆಚ್ಚಾಗಿದೆ ಎಂದು ತಿಳಿಯಬಹುದು. ವೃಶ್ಚಿಕದ ಉತ್ತರಕ್ಕೆ ಉರಗಧರ (ಓಫಿಯೂಕಸ್)ಅನ್ನು ಗುರುತಿಸಬಹುದು. ಆಕಾಶಗಂಗೆ ನದಿಯ ಹಾಗೆ ಕಾಣುವುದು. ಒಂದು ಶಾಖೆ ಪೂರ್ವದ ಗರುಡ (ಅಕ್ವಿಲಾ) ಮತ್ತು ರಾಜಹಂಸ (ಸಿಗ್ನಸ್) ಮೂಲಕ ಹಾದು ಹೋಗುವುದು. ಇನ್ನೊಂದು ದಕ್ಷಿಣ ದಿಗಂತದ ಅಂಚಿನಲ್ಲಿ ತ್ರಿಶಂಕು ಅಥವಾ ದಕ್ಷಿಣ ಶಿಲುಬೆ (ಕ್ರಕ್ಸ್) ಮೂಲಕ ಹಾದುಹೋಗುವುದು. ಕಿನ್ನರ (ಸೆಂಟಾರಸ್) ಪುಂಜದಲ್ಲಿ ಕ್ಷೀಣವಾದ ನಕ್ಷತ್ರಗುಚ್ಛ (ಇದಕ್ಕೆ ಒಮೆಗಾ ಸೆಂಟಾರಿ ಎಂಬ ಹೆಸರಿದೆ) ಕಾಣುವುದು.

ಶನಿ ಮತ್ತು ಮಂಗಳ ಗ್ರಹಗಳು ಸಂಜೆ ಕಾಣುವುವು. ಮಂಗಳ ಚಿತ್ರಾ ನಕ್ಷತ್ರದ ಪಕ್ಕದಲ್ಲಿ ಹಾದುಹೋಗುವುದು. ಈ ಎರಡೂ ಗ್ರಹಗಳನ್ನು ಚಂದ್ರ ಮರೆಮಾಡುವ ಆಚ್ಛಾದನೆಗಳು ನಡೆಯಲಿವೆ. ಇದನ್ನೂ ಗ್ರಹಣ ಎಂದೇ ವರ್ಗೀಕರಿಸಬಹುದು. ಆದರೆ, ಅವೆರಡೂ ನಮಗೆ ಅನುಕೂಲಕರವಾಗಿಲ್ಲ. 5 ಮತ್ತು 6ರಂದು ಮಂಗಳದ ಪಕ್ಕ ಚಂದ್ರನ ಸ್ಥಾನವನ್ನು ಗುರುತಿಸಿಕೊಂಡರೆ ಚಂದ್ರ ಅದನ್ನು ದಾಟಿ ಬಂದಿರುವುದು ತಿಳಿಯುತ್ತದೆ. ಹಾಗೆಯೇ 8 ಮತ್ತು 9ರಂದು ಶನಿಯ ಪಕ್ಕ ಚಂದ್ರನ ಸ್ಥಾನ ಗುರುತಿಸಿ ನಮ್ಮ ಹಗಲಿನಲ್ಲಿ ಆಚ್ಛಾದನೆ ನಡೆದುಹೋಗಿರುವುದನ್ನು ತಿಳಿಯಬಹುದು. ಕಳೆದ ತಿಂಗಳವರೆಗೂ ಕಾಣುತ್ತಿದ್ದ ಗುರುಗ್ರಹ ಈಗ ದಿಗಂತದ ಅಂಚಿಗೆ ಸರಿದಿರುವುದರಿಂದ ಕಾಣುವುದಿಲ್ಲ.

ಈ ತಿಂಗಳ ಹುಣ್ಣಿಮೆಯ 24 ಗಂಟೆಗಳ ತರುವಾಯ ಚಂದ್ರ – ಭೂಮಿ ನಡುವಿನ ಅಂತರ ಕನಿಷ್ಠವಾಗಲಿದೆ. ಆದ್ದರಿಂದ ಭರತದ ಆರ್ಭಟ ಹೆಚ್ಚು ಎನ್ನಬಹುದು. ಆದರೆ ಮಳೆಗಾಲದ ಅಬ್ಬರದಲ್ಲಿ ಇದು ಸ್ಪಷ್ಟವಾಗಿ ಗೋಚರವಾಗದಿರಬಹುದು. ಮುಂದಿನ ತಿಂಗಳಲ್ಲಿಯೂ ಹುಣ್ಣಿಮೆಯ ದಿನವೇ ಚಂದ್ರ ಪುರಭೂ ಬಿಂದುವಿನಲ್ಲಿರುವುದರಿಂದ ಭರತ ಜೋರಾಗಿರುವುದು.

ಮುಂಜಾವು ಬೇಗ ಏಳುವವರಿಗೆ ತಿಂಗಳುದ್ದಕ್ಕೂ ಉಲ್ಕೆಗಳು ಕಾಣುವ ಸಂಭವವೂ ಇದೆ. ಶುಕ್ರ ಗ್ರಹ ಸ್ಫುಟವಾಗಿ ಕಾಣುವುದು. ಶುಕ್ರ ರೋಹಿಣಿಯ ಪಕ್ಕದಲ್ಲಿ 2ರಂದು ಕಾಣುವುದು. ತಿಂಗಳ ಮಧ್ಯಭಾಗದಲ್ಲಿ ಬುಧ ಗ್ರಹವೂ ಕಾಣುವುದು. 25ರ ಮುಂಜಾವು ರೇಖಾಚಂದ್ರ ಈ ಎರಡೂ ಪ್ರಕಾಶಮಾನ ಚುಕ್ಕೆಗಳ ನಡುವೆ ಕಾಣುವುದು.

ಈ ತಿಂಗಳಲ್ಲಿ 4ರಂದು ಭೂಮಿ–ಸೂರ್ಯರ ನಡುವೆ ದೂರ ಗರಿಷ್ಠವಾಗಿರುತ್ತದೆ. ಅಂದರೆ, ಭೂಮಿ ಅಪರವಿ ಎಂಬ ಬಿಂದುವಿನಲ್ಲಿ ಇರುತ್ತದೆ.

ಉ ಪೂ ಪ ದ

ಸಪ್ತರ್ಷಿ ಮಂಡಲ, ವೀಣಾ, ಭೀಮ, ಸ್ವಾತಿ, ಸಿಂಹ, ಉರಗಧರ, ತುಲಾ, ಕನ್ಯಾ, ಮಂಗಳ, ಚಿತ್ರಾ, ಶನಿ, ಹಸ್ತ, ಧನು, ವೃಶ್ಚಿಕ, ಕಿನ್ನರ, ತ್ರಿಶಂಕು

ಜುಲೈ ೨೫ರಂದು
ಶುಕ್ರ, ಬುಧ ಮತ್ತು ಚಂದ್ರ

**ಜುಲೈ ತಿಂಗಳ ಖಗೋಳ ದಿನಚರಿ**

| | |
|---|---|
| 2 | ಶುಕ್ರ–ರೋಹಿಣಿ ನಡುವೆ 4 ಡಿಗ್ರಿ ಅಂತರ * (ಮುಂಜಾವು) |
| 4 | ಭೂಮಿ ಅಪರವಿ ಬಿಂದುವಿನಲ್ಲಿ |
| 5 | ಚಾಂದ್ರಮಾಸದ ಮೊದಲ ಪಾದ |
| 5, 6 | ಚಂದ್ರ–ಮಂಗಳ ನಡುವೆ 5 ಡಿಗ್ರಿ * (ಸಂಜೆ) |
| 8, 9 | ಶನಿ–ಚಂದ್ರ ನಡುವೆ 7 ಡಿಗ್ರಿ * (ಸಂಜೆ) |
| 12 | ಹುಣ್ಣಿಮೆ 16:55ಕ್ಕೆ ಬುಧಗ್ರಹದ ಗರಿಷ್ಠ ಕೋನೋನ್ನತಿ * (ಮುಂಜಾವು) |
| 13 | ಚಂದ್ರ ಪುರಭೂ ಬಿಂದುವಿನಲ್ಲಿ |
| 19 | ಚಾಂದ್ರಮಾಸದ ಕೊನೆಯ ಪಾದ |
| 24 | ಶುಕ್ರ–ಚಂದ್ರ ನಡುವೆ 5 ಡಿಗ್ರಿ * (ಮುಂಜಾವು) ಗುರುಗ್ರಹದ ಯುತಿ |
| 25 | ಬುಧ–ಚಂದ್ರ ನಡುವೆ 5 ಡಿಗ್ರಿ * (ಮುಂಜಾವು) |
| 27 | ಅಮಾವಾಸ್ಯೆ 04:12ಕ್ಕೆ |
| 28 | ಚಂದ್ರ ಅಪರವಿ ಬಿಂದುವಿನಲ್ಲಿ |

(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ,
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧



ಡಿ. ಎನ್. ರವಿಕುಮಾರ್

# ಸರ್ಪಗಲ್ಲು ಅಥವಾ ಸರ್ಪಗುಡ್ಡ

**ಚಿ**ತ್ರದುರ್ಗದ ಇತಿಹಾಸಕ್ಕೆ ಪ್ರತ್ಯಕ್ಷ ಸಾಕ್ಷಿಯೇ ಇಲ್ಲಿನ ವರ್ಣಮಯ ಚಿತ್ತಾಕರ್ಷಕ ಕಲ್ಲುಬಂಡೆಗಳು. ಊರ ಹೆಸರಲ್ಲೇ ಚಿತ್ರವನ್ನು ತನ್ನ ಮುಡಿಗೇರಿಸಿಕೊಂಡ ಹೆಗ್ಗಳಿಕೆ. ಸಾಲದ್ದಕ್ಕೆ ಸಿಡಿಲಿಗೂ ಜಗ್ಗದ ಉಕ್ಕಿನಂತಹ ಕಲ್ಲುಬಂಡೆಗಳ ತವರಾಗಿದೆ ಈ ಗತಿಸಿದ ನಾಡು. ಚಿತ್ರದುರ್ಗ ನಗರ ಪ್ರದೇಶದಿಂದ ಜೋಗಿಮಟ್ಟಿ ರಸ್ತೆಯ ಮಾರ್ಗವಾಗಿ ಚಲಿಸಿದರೆ, ಆಡುಮಲ್ಲೇಶ್ವರ ರಸ್ತೆಯ ವೃತ್ತದ ಬಲಭಾಗದ ತಿರುವಿನಲ್ಲಿ ಒಂದು ಕಿ.ಮೀ.ನಷ್ಟು ಕ್ರಮಿಸಿದರೆ ಸುವಿಸ್ತಾರವಾದ ಕೋಟೆ ಬದಿಯ ವಿಶಾಲ ಪ್ರಾಂಗಣ ಗೋಚರವಾಗುತ್ತದೆ. ಈ ಸುಂದರ ಪ್ರಾಂಗಣ ಸುಮಾರು ಮೂರು ಕಿ.ಮೀ.ನಷ್ಟು ಸುತ್ತಳತೆಯನ್ನು ಹೊಂದಿದೆ. ಈ ಪ್ರದೇಶದಲ್ಲಿ ಪ್ರವಾಸಿಗರಿಗಾಗಿ ಮತ್ತು ಹೊರಸಂಚಾರಿಗಳಿಗಾಗಿ ಸಾಕಷ್ಟು ಮುದನೀಡುವ ಸ್ಥಳಗಳಿವೆ. ಅವುಗಳಲ್ಲಿ: ೧) ಜೋಡಿ ಬತೇರಿಗಳು, ೨) ಅಗಳುಗಳು, ೩) ಕರವರ್ತೀಶ್ವರ ದೇವಾಲಯ, ೪) ವಡ್ಡು (ಹೊಂಡ), ೫) ಮಾವಿನತೋಪು, ೬) ಬಾಳೇಕಾಯಿ ಸಿದ್ದಪ್ಪನ ಗುಹೆ, ೭) ಮುಗಿಲೆತ್ತರದ ನೆಲ್ಲಿಕಾಯಿ ಬೆಟ್ಟದ ಹಿಂಬದಿಯ ದೃಶ್ಯ, ೮) ತಿಮ್ಮಣ್ಣನಾಯಕನ ಕೆರೆ, ೯) ಚೌಡೇಶ್ವರಿ ದೇಗುಲ, ೧೦) ಬಿಳಿಕಮಲದ ಹಳ್ಳ ಹಾಗೂ ಈ ದೇಗುಲದ ಪಕ್ಕದ ಬಲಭಾಗದಲ್ಲಿ ಗೋಚರಿಸುವುದೇ ಸರ್ಪಗುಡ್ಡ ಅಥವಾ ಸರ್ಪಗಲ್ಲು.

ಈ ಸರ್ಪಗುಡ್ಡವು ಪಶ್ಚಿಮ ದಿಕ್ಕಿನೆಡೆಗೆ ಮುಖ ಮಾಡಿದ್ದು, ನೆಲಮಟ್ಟದಿಂದ ಸುಮಾರು ೩೦೦ ಅಡಿಗಳಿಗೂ ಹೆಚ್ಚು ಎತ್ತರದಲ್ಲಿದೆ. ಈ ಸರ್ಪಗುಡ್ಡದಲ್ಲಿ ಹೆಚ್ಚು ರಾಕ್ಷಸಗಾತ್ರದ ಹೆಬ್ಬಂಡೆಗಳಿದ್ದು, ನೋಡಲು ಒಂದೊಂದು ಬಂಡೆಯೂ ಚಿತ್ರವಿಚಿತ್ರ ಆಕೃತಿಗಳನ್ನು ಬಿಂಬಿಸುತ್ತದೆ. ಅಷ್ಟೇ ವರ್ಣಮಯವೂ ಹೌದು. ಇದರಂತೆಯೇ ಪಶ್ಚಿಮ ದಿಕ್ಕಿನ ಕಡೆಗೆ ಹೆಡೆ ಬಿಚ್ಚಿಕೊಂಡು ನಿಂತಂತೆ ಗೋಚರಿಸುವುದೇ ಬೃಹದಾಕಾರವಾದ ಏಕಶಿಲೆಯ ಸರ್ಪಗಲ್ಲು. ಈ ವಿಶಿಷ್ಟವಾದ ಸರ್ಪಗಲ್ಲಿನ ಆಕೃತಿಯಿಂದಲೇ ಈ ಗುಡ್ಡವನ್ನು ಸರ್ಪಗುಡ್ಡ ಎಂಬ ಹೆಸರಿನಿಂದ ಗುರುತಿಸಲಾಗಿದೆ. ಇಲ್ಲಿರುವ ಎಲ್ಲಾ ಏಕಶಿಲಾ ಕಲ್ಲುಬಂಡೆಗಳು ಸಂಜೆಯ ಸೂರ್ಯನ ಕಿರಣಗಳಿಗೆ ಕಿತ್ತಳೆ ವರ್ಣದಿಂದ ಕಂಗೊಳಿಸಿ ನೋಡುಗರ ಮತ್ತು ಛಾಯಾಗ್ರಾಹಕರ ಮನಸೂರೆಗೊಳಿಸುತ್ತವೆ. ಪ್ರತಿವರ್ಷದ ಆಗಸ್ಟ್ ಮತ್ತು ಸೆಪ್ಟೆಂಬರ್ ತಿಂಗಳುಗಳಲ್ಲಿ ಹಿಂಗಾರು ಮೋಡಗಳ ಚಲನೆಯಿಂದ, ಕಾರ್ಮೋಡಗಳ ಸಂದಿನಿಂದ ನುಸುಳುವ ಬೆಳಕು ಮತ್ತು ನೆರಳಿನ ಆಟ ನೋಡಲು ಅದ್ಭುತವಾಗಿರುತ್ತದೆ. ಛಾಯಾಗ್ರಾಹಕರಿಗಂತೂ ಇದೊಂದು ಶುಭ ಮುಹೂರ್ತ. ಸರ್ಪಗುಡ್ಡವನ್ನೇರುವುದು ಅಷ್ಟೇನೂ ಕಷ್ಟವೆನಿಸುವುದಿಲ್ಲ. ಅತ್ಯಂತ ಸುಲಭವಾಗಿ ಚೌಡೇಶ್ವರಿ ದೇವಾಲಯದ ಬಲಭಾಗದಿಂದ ಹತ್ತು ಹೆಜ್ಜೆ ಸಾಗಿದರೆ ಗುಡ್ಡದ ಬುಡ ತಲುಪುತ್ತೇವೆ. ಇಲ್ಲಿಂದ ಸುಮಾರು ೩೦ ನಿಮಿಷಗಳಲ್ಲಿ ಬೃಹದಾಕಾರವಾದ ಸೀಳುಬಂಡೆಗಳ ಪೊಟರೆಗಳಲ್ಲಿ ಚಲಿಸಿ ಎಡಭಾಗಕ್ಕೆ ತಿರುಗಿ ನೋಡಿದರೆ ಸುಂದರ ಸರ್ಪಗಲ್ಲನ್ನು ತಲುಪಿರುತ್ತೇವೆ. ಅದಕ್ಕೂ ಮುನ್ನ ಸೀಳುಬಂಡೆಯ ಪೊಟರೆಯ ಹೊರ ಭಾಗದಿಂದ ಕಂಗೊಳಿಸುವ ಪ್ರಕೃತಿ ಸೌಂದರ್ಯವನ್ನು ನಿಮ್ಮ ಕ್ಯಾಮರಾ ಕಣ್ಣಲ್ಲಿ ಸೆರೆಹಿಡಿಯಲು ಮರೆಯದಿರಿ.

'ಶಿಲೆಯಲ್ಲವೋ ಇದು ಕಲೆಯ ಬಲೆಯೋ' ಎಂಬ ರಾಷ್ಟ್ರಕವಿ ಕುವೆಂಪುರವರ ಅಮೋಘ ವರ್ಣನೆಯಂತೆ ಈ ಗುಡ್ಡದ ಕಲ್ಲುಬಂಡೆಗಳು ಕಲೆಯ ಬಲೆಯಿಂದಲೇ ಕಂಗೊಳಿಸಿ ವಿಸ್ಮಯ ಮೂಡಿಸುತ್ತವೆ. ಈ ಸರ್ಪಗಲ್ಲು ಸುಮಾರು ೪೦ ಅಡಿಗಳಷ್ಟು ಎತ್ತರದ ಕಿತ್ತಳೆ ವರ್ಣದ ಏಕಶಿಲೆ. ಮುಂಜಾನೆ, ಅಪರಾಹ್ನ ಹಾಗೂ ಸಂಜೆಯ ಮೂರು

ಈ ಸರ್ಪಗುಡ್ಡದಲ್ಲಿ ಹೆಚ್ಚು ರಾಕ್ಷಸಗಾತ್ರದ ಹೆಬ್ಬಂಡೆಗಳಿದ್ದು, ನೋಡಲು ಒಂದೊಂದು ಬಂಡೆಯೂ ಚಿತ್ರವಿಚಿತ್ರ ಆಕೃತಿಗಳನ್ನು ಬಿಂಬಿಸುತ್ತದೆ. ಅಷ್ಟೇ ವರ್ಣಮಯವೂ ಹೌದು. ಇದರಂತೆಯೇ ಪಶ್ಚಿಮ ದಿಕ್ಕಿನ ಕಡೆಗೆ ಹೆಡೆ ಬಿಚ್ಚಿಕೊಂಡು ನಿಂತಂತೆ ಗೋಚರಿಸುವುದೇ ಬೃಹದಾಕಾರವಾದ ಏಕಶಿಲೆಯ ಸರ್ಪಗಲ್ಲು. ಈ ವಿಶಿಷ್ಟವಾದ ಸರ್ಪಗಲ್ಲಿನ ಆಕೃತಿಯಿಂದಲೇ ಈ ಗುಡ್ಡವನ್ನು ಸರ್ಪಗುಡ್ಡ ಎಂಬ ಹೆಸರಿನಿಂದ ಗುರುತಿಸಲಾಗಿದೆ.









ಸಮಯಗಳಲ್ಲೂ ವೈವಿಧ್ಯಮಯವಾಗಿ ಗೋಚರಿಸುವುದು ಇದರ ವಿಶೇಷ. ಈ ಗುಡ್ಡದಿಂದ ನಿಂತು ನೋಡಿದರೆ ಮೂರು ಕಿ.ಮೀ. ಸುತ್ತಳತೆಯ ವಿಶಾಲ ಪ್ರಾಂಗಣವು ನಮ್ಮನ್ನು ನಿರಾಯಾಸಗೊಳಿಸುತ್ತದೆ. ನೆಲ್ಲಿಕಾಯಿ ಬೆಟ್ಟದ ಅಸಂಖ್ಯಾತ ಕಲ್ಲುಬಂಡೆಗಳು ನೋಡುಗರನ್ನು ಮಾತಿಗಿಂತ ಮೌನ ಲೇಸು ಎಂಬಂತೆ ಮಾಡುತ್ತವೆ. ಕೆಳಭಾಗದ ತಿಮ್ಮಣ್ಣನಾಯಕನ ಕೆರೆಯು ಸೂರ್ಯನ ಕಿರಣಗಳಿಗೆ ಬೆಳ್ಳಿ ತಟ್ಟೆಯಂತೆ ಕಂಗೊಳಿಸಿ, ಸುತ್ತಮುತ್ತಲ ಜೋಗಿಮಟ್ಟಿ ಸಾಲುಗುಡ್ಡಗಳ ವನರಾಶಿಯನ್ನು ಕಣ್ಮುಂದೆ ತಂದು ನಿಲ್ಲಿಸುತ್ತದೆ. ಈ ಸರ್ಪಗಲ್ಲಿನ ಮುಂಭಾಗದ ಇಳಿಜಾರು ಹಾಸುಬಂಡೆಯು ಕಡುಕಪ್ಪಿನಿಂದ ಕಂಗೊಳಿಸುತ್ತಾ ಅಲ್ಲಲ್ಲಿ ಕಿತ್ತಳೆ ವರ್ಣದ ಸಣ್ಣ ಸಣ್ಣ ಬಂಡೆಗಳಿಂದ ತನ್ನನ್ನು ಅಲಂಕರಿಸಿಕೊಂಡು ಸರ್ಪಗುಡ್ಡದ ಸೌಂದರ್ಯಕ್ಕೆ ಸಾಕ್ಷಿಯಾಗಿದೆ. ಸರ್ಪಗಲ್ಲಿನ ಎಡಭಾಗದಲ್ಲಿದೆ ಒಂದು ಬೃಹದಾಕಾರವಾದ ಕಲ್ಲಿನ **"ಸಮೋಸ"**! ಆಶ್ಚರ್ಯ ಬೇಡ, ಇದು ಮೈದಾಹಿಟ್ಟಿನಿಂದ ಮಾಡಿದ ಸಮೋಸವಲ್ಲ, ಬದಲಾಗಿ ಕಲ್ಲಿನಿಂದ ರಚನೆಗೊಂಡ ಕಂದು ವರ್ಣದ ಸಮೋಸ! ಇದನ್ನು ತಿನ್ನಲಾಗದಿದ್ದರೂ ನೋಡುಗರ ನೋಟದಿಂದ ಈ ಕಲ್ಲಿನ ಸಮೋಸವನ್ನು ಆಸ್ವಾದಿಸಬಹುದು. ಈ ಪ್ರಕೃತಿಯೇ ಹಾಗೆ. ತನ್ನ ವೈವಿಧ್ಯತೆಯನ್ನು ವಿವಿಧ ಭಂಗಿಗಳಲ್ಲಿ ನೋಡಿ ಆನಂದಿಸುವುದು ಅವರವರ ಇಚ್ಛೆಗೆ ಬಿಟ್ಟಿದ್ದು. ಸಾಕಷ್ಟು ಒತ್ತಡ ಮತ್ತು ಜಂಜಾಟಗಳಿಂದ ದಣಿದ ನಮ್ಮ ದೇಹವು ಈ ಪ್ರಕೃತಿಯ ಮಡಿಲಲ್ಲಿ ನಿರಾಯಾಸವಾಗಿ ನೈಸರ್ಗಿಕ ಚಿಕಿತ್ಸೆಯನ್ನು ಪಡೆದುಕೊಳ್ಳುತ್ತದೆ. ಇಷ್ಟೆಲ್ಲಾ ಮುದ ನೀಡುವ ಶಕ್ತಿ ಈ ಸರ್ಪಗುಡ್ಡದಲ್ಲಿ ಅಡಗಿದೆ. ಸ್ಥಳೀಯರು ಮತ್ತು ಪ್ರವಾಸಿಗರು ಸಹಜವಾಗಿ ಸುಂದರ ಪ್ರಾಂಗಣಕ್ಕೆ ಭೇಟಿ ನೀಡುವುದರ ಮುಖಾಂತರ ತಮ್ಮ ದೈನಂದಿನ ಜಂಜಾಟಗಳಿಂದ ದೂರ ಉಳಿಯುತ್ತಾರೆ. ನೀವು ಕೂಡ ಈ ತಾಣವನ್ನು ಒಮ್ಮೆ ಆಸ್ವಾದಿಸಿ.

**ಗಮನಿಸಿ :** ಈ ಸ್ಥಳವನ್ನು ಪ್ರಮುಖವಾಗಿ ಚಿತ್ರದುರ್ಗದ ಅರಣ್ಯ ಇಲಾಖೆಯು ಕಾಯ್ದಿರಿಸಿಕೊಂಡು ಚೌಡೇಶ್ವರಿ ದೇವಾಲಯದ ಪಕ್ಕದಲ್ಲಿ ತಪಾಸಣಾ ಕೇಂದ್ರವನ್ನು ನಿರ್ಮಿಸಲಾಗಿದೆ. ಯಾವುದೇ ವ್ಯಸನಗಳಿಗೆ ಇಲ್ಲಿ ಅವಕಾಶವಿರುವುದಿಲ್ಲ, ಮರ-ಗಿಡಗಳನ್ನು ಹಾಳುಗೆಡವುವಂತಿಲ್ಲ, ವನ್ಯಜೀವಿ ಸಂಪತ್ತಿಗೆ ಧಕ್ಕೆ ತರುವಂತಿಲ್ಲ, ಪ್ಲಾಸ್ಟಿಕ್ ವಸ್ತುಗಳನ್ನು ಬಳಸುವಂತಿಲ್ಲ ಹಾಗೂ ಮಾವಿನತೋಪಿನ ಬಳಿಯಲ್ಲೇ ಇರುವ ಅಪರೂಪದ ಜಲಸಸ್ಯವರ್ಗ ಬಿಳಿ ಕಮಲದ ಹೂರಾಶಿಗಳಿಗೆ ಕುಂದು ತರುವಂತಿಲ್ಲ. ಏಕೆಂದರೆ ಬಿಳಿ ಕಮಲದ ಹಳ್ಳವು ಈ ಸ್ಥಳದ ಮತ್ತೊಂದು ಆಕರ್ಷಣೆ. ವಿಹಾರಿಗಳಿಗೆ, ಪ್ರವಾಸಿಗರಿಗೆ ಮತ್ತು ಹೊರ ಸಂಚಾರಿಗಳಿಗೆ ಅತ್ಯಂತ ಮನೋಲ್ಲಾಸ ನೀಡುವ ಸ್ಥಳವಾದ್ದರಿಂದ ಇದರ ಸಂರಕ್ಷಣೆಗೆ ಪ್ರತಿಯೊಬ್ಬರೂ ಸಹಕರಿಸಬೇಕಾಗುತ್ತದೆ.

**ವನ್ಯಜೀವಿ ಸಂಪತ್ತು :** ಮೂರು ಕಿ.ಮೀ.ನಷ್ಟಿರುವ ಈ ಸುಂದರ ಪ್ರಾಂಗಣದಲ್ಲಿ ಐತಿಹಾಸಿಕ ಕೆರೆಗಳು, ಅಗಳುಗಳು, ಹೊಂಡಗಳು, ಹಳ್ಳಗಳು ಹಾಗೂ ನೀರಿನ ಸೆಲೆಯಿಂದ ಸೃಷ್ಟಿಯಾಗಿರುವ ಜೌಗು ಪ್ರದೇಶವಾದ್ದರಿಂದ ಈ ಪ್ರದೇಶವು ಭಾರಿ ಗಾತ್ರದ ಹೆಬ್ಬಾವುಗಳ ನೆಚ್ಚಿನ ತಾಣ. ಇಲ್ಲಿ ೧೫೦ಕ್ಕೂ ಹೆಚ್ಚು ಪಕ್ಷಿ ಪ್ರಭೇದಗಳು, ಕರಡಿ, ಚಿರತೆ, ಮುಳ್ಳುಹಂದಿಗಳು, ತೋಳ, ಭಾರಿ ಗಾತ್ರದ ಕಾಡುಹಂದಿಗಳೂ ಸೇರಿದಂತೆ ಹಲವು ವನ್ಯಜೀವಿಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ. ಸಾಲದ್ದಕ್ಕೆ ಅಸಂಖ್ಯಾತ ಔಷಧೀಯ ಸಸ್ಯಗಳು ಈ ಪ್ರದೇಶದಲ್ಲಿ ಹುಲುಸಾಗಿ ಬೆಳೆದುನಿಂತಿವೆ. ಆದಕಾರಣ ಸ್ಥಳೀಯ ಅರಣ್ಯ ಇಲಾಖೆಯು ಈ ಪ್ರದೇಶವನ್ನು ಕಾಯ್ದಿರಿಸಿ ಹೆಚ್ಚಿನ ಸಸ್ಯಾಭಿವೃದ್ಧಿಗಾಗಿ ಶ್ರಮಿಸುತ್ತಿದೆ.

ಚಿತ್ರ-ಲೇಖನ : **ಡಿ. ಎನ್. ರವಿಕುಮಾರ್**
ಚಿತ್ರಕಲಾ ಉಪನ್ಯಾಸಕರು, 'ಸಾ.ಕಾ.ರ.' ನಿಲಯ, ೭ನೇ ಕ್ರಾಸ್ ವೆಸ್ಟ್
ಜೆ. ಸಿ. ಆರ್. ಬಡಾವಣೆ, ಚಿತ್ರದುರ್ಗ – ೫೭೭ ೫೦೧

## ಗಝಲ್

ದಡಗಳಿವೆ, ನದಿ ಹರಿಯುತಿಲ್ಲ ನಿಟ್ಟುಸಿರಿಡುತಲಿದ್ದೇವೆ ನಾವಿಬ್ಬರೊಂದಾಗಿ
ನದಿ ಹರಿಯುವ ನಿರೀಕ್ಷೆಯನೇ ನೇಯುತಿದ್ದೇವೆ ನಾವಿಬ್ಬರೊಂದಾಗಿ

ಊರೆಲ್ಲ ನಿಂತ ಖಾಲಿ ದಡಗಳ ನಡುವೆ ಹುಡುಕುತಿದ್ದೇವೆ ನೀರ ಹರಿವನು
ದಡಗಳ ಮೇಲಿನ ಮರಳು ರಾಶಿಯಲೇ ಬದುಕುತಿದ್ದೇವೆ ನಾವಿಬ್ಬರೊಂದಾಗಿ

ಕಂಡವರು ಹುಚ್ಚರೆನ್ನುತ್ತಾರೆ, ನಾವು ಅವರನು ಮೂರ್ಖರೆನ್ನುತ್ತೇವೆ
ಭರಿಸಲಾಗದ ನಿರಾಸೆಗಳ ನೋವಿನಲೂ ನಗುತಲಿದ್ದೇವೆ ನಾವಿಬ್ಬರೊಂದಾಗಿ

ನೋಡಿಯೂ ನೋಡದಂತೆ ಸುತ್ತೆಲ್ಲ ಜನ ಸಂತೆ ಸೇರುತ್ತಾರೆ ಕಂತೆ ಬಿಚ್ಚುತ್ತಾರೆ
ನಾಳೆ ಹರಿವ ನದಿಯ ನಿನಾದವನು ಕೇಳುತಿದ್ದೇವೆ ನಾವಿಬ್ಬರೊಂದಾಗಿ

ಆ ಜಗದ ನದಿ ನಲ್ಲಿಯಲ್ಲಿ ಬರುತ್ತದೆ, ನಲ್ಲಿಗಳನೇ ನದಿಯೆಂದು ನಂಬಲಾಗಿದೆ
ನಾಳೆಯ ನಿಜದ ನದಿಗಾಗಿ ಹತ್ತಾರು ಹಾಡು ಕಟ್ಟಿದ್ದೇವೆ ನಾವಿಬ್ಬರೊಂದಾಗಿ

ದಡದಿಂದ ದಡಕೆ ಅಪ್ಪಳಿಸಿ ಅಲೆವ ನಿಟ್ಟುಸಿರುಗಳ ಹಿಡಿದು ಕೊಲ್ಲುತಿದ್ದೇವೆ
ಜಗಕೆ ಜೀವಕಳೆ ತುಂಬುವುದ ಕಾಣಲಿದ್ದೇವೆ ನಾವಿಬ್ಬರೊಂದಾಗಿ

ನಮ್ಮೊಳಗೆ ಮೂಡಿ ಮರೆಯಾಗುವ ನೋವಿನ ಖುಷಿ ಯಾರಿಗೂ
ಅರ್ಥವಾಗುವುದಿಲ್ಲ
ಸುರಿದ ಚಿಕ್ಕ ಮಳೆಯಲ್ಲೇ ಪುಟ್ಟ ಕಾಗದದ ದೋಣಿ ಬಿಟ್ಟಿದ್ದೇವೆ
ನಾವಿಬ್ಬರೊಂದಾಗಿ !

**ಗಣೇಶ ಹೊಸ್ಮನೆ**
ಜಾನ್ಮನೆ – ೫೮೧ ೩೧೫, ಶಿರಸಿ (ಉತ್ತರ ಕನ್ನಡ)

# ಉನ್ನತ ಶಿಕ್ಷಣ
# ವಿಶ್ವವಿದ್ಯಾನಿಲಯಗಳು ಹೇಗೆ... ಎತ್ತ?
## ಒಂದು ಅನ್ವೇಷಣೆ

ಭಾರತದಲ್ಲಿ ಅತಿ ಹೆಚ್ಚು ಸಾಫ್ಟ್‌ವೇರ್ ಕೂಲಿಗಳು ಸಿಗುತ್ತಾರೆ. ಇಷ್ಟು ಕೆಲಸ ಮಾಡಿ ಕೂಲಿ ತೆಗೆದುಕೊ, ಸಾಫ್ಟ್‌ವೇರ್ ರೆಡಿ ಮಾಡಿ ಹಣವನ್ನು ತೆಗೆದುಕೊ ಎಂಬ ಕಟ್ಟಪ್ಪಣೆ. ಇದು ಯಾವ ವ್ಯಕ್ತಿತ್ವ ವಿಕಸನವೂ ಆಗದ ಕೇವಲ ಔದ್ಯೋಗಿಕ ಉತ್ಪನ್ನಕ್ಕಾಗಿ, ಲಾಭಕ್ಕಾಗಿ ನೀಡುವ ಶಿಕ್ಷಣವಾಗುತ್ತದೆ. ಆದರೆ, ಯಾವ ಶಿಕ್ಷಣದ ಗುಣಮಟ್ಟವೂ ಇಲ್ಲಿ ಸಿಗದು. ಇಂದು ವ್ಯಕ್ತಿತ್ವ ವಿಕಸನ, ಪ್ರಜಾಪ್ರಭುತ್ವ ನಿಲುವು, ಸಾಮಾಜಿಕ ನಿಲುವು ಬೇಕೇ ಹೊರತು ಹೊರಗಿನ ಒತ್ತಡಕ್ಕೆ ವಿಶ್ವವಿದ್ಯಾನಿಲಯಗಳು ಬೇಕಾಗಿಲ್ಲ ಎನ್ನುವ ವಾದ ಶಿಕ್ಷಣ ಪರಿಚಾರಕರದ್ದಾಗಿದೆ.

**ಸಂಗಮನಾಥ ರೇವತಗಾಂವ**

ಉನ್ನತ ಶಿಕ್ಷಣದ ಹೆಸರಲ್ಲಿ ವಿಶ್ವವಿದ್ಯಾನಿಲಯಗಳು ದಾರಿ ತಪ್ಪುತ್ತಿವೆಯೇ ? ಬಡ ಪ್ರತಿಭಾವಂತರ ಪಾಲಿಗೆ ಉನ್ನತ ಶಿಕ್ಷಣ ಮರೀಚಿಕೆಯಾಗಿದೆಯೇ ? ರಾಜ್ಯದಲ್ಲಿ ಹುಟ್ಟುತ್ತಿರುವ ವಿಶ್ವವಿದ್ಯಾನಿಲಯಗಳಿಂದ ಗುಣಮಟ್ಟದ ಶಿಕ್ಷಣ ದೊರೆಯುತ್ತಿದೆಯೇ ? ವ್ಯವಹಾರ, ಲಾಭದ ದೃಷ್ಟಿಯಿಂದ ನಿರ್ಮಾಣವಾಗುವ ವಿಶ್ವವಿದ್ಯಾನಿಲಯಗಳಿಂದ ವಿದ್ಯೆಯನ್ನು ನಿರೀಕ್ಷಿಸುವುದಾದರೂ ಹೇಗೆ ? ಅಧ್ಯಾಪಕರು ಗುಣಮಟ್ಟದ ಶಿಕ್ಷಣ ನೀಡುತ್ತಿದ್ದಾರೆಯೇ ? ವ್ಯಕ್ತಿತ್ವ ವಿಕಾಸಕ್ಕಿಂತ ಲಾಭದ ದೃಷ್ಟಿಕೋನದ ಮಧ್ಯೆ ಹೊರಳಾಡುವ ವಿಶ್ವವಿದ್ಯಾನಿಲಯಗಳಿಂದ ಪ್ರಗತಿ ಸಾಧ್ಯವೇ ? ಅಂಕಿ–ಸಂಖ್ಯೆಗಳ ಸ್ಥಿರತೆಗಿಂತ ಸಮಾಜದ, ದೇಶದ ಸ್ಥಿರತೆಯನ್ನು ಕಾಪಾಡುವ ವಿಶ್ವವಿದ್ಯಾನಿಲಯಗಳಿವೆಯೇ ? ವಿಶ್ವವಿದ್ಯಾನಿಲಯಗಳು ವಿದ್ಯಾರ್ಜನೆ ನೆಪದಲ್ಲಿ ವಿದ್ಯಾರ್ಥಿಗಳನ್ನು ತುಂಬಿಕೊಳ್ಳುವ ಕಾರ್ಖಾನೆಗಳಾಗಿವೆಯೇ ?

ಈ ಮೇಲಿನ ಎಲ್ಲ ಪ್ರಶ್ನೆಗಳಿಗೆ ಉತ್ತರ ಹುಡುಕಿಕೊಳ್ಳುವ ಕಾಲ ಬಂದಿದೆ. ಬುದ್ಧಿಜೀವಿಗಳು ಈ ಬಗ್ಗೆ ಚಿಂತನೆ ಮಾಡಬೇಕಾಗಿದೆ. ಸಮಾಜದಲ್ಲಿ ವಿಶ್ವವಿದ್ಯಾನಿಲಯಗಳು ಒಂದಲ್ಲ ಒಂದು ಪಾತ್ರ ನಿರ್ವಹಿಸಿವೆ. ಯಾವ ಪಾತ್ರ ನಿರ್ವಹಿಸಿವೆ ಎನ್ನುವುದಕ್ಕಿಂತ ಹೇಗೆ ಪಾತ್ರ ನಿರ್ವಹಿಸಿವೆ ಎಂಬುದನ್ನು ಅರಿಯ ಬೇಕಾಗಿದೆ. ವಿಶ್ವವಿದ್ಯಾನಿಲಯಗಳು ಮತ್ತು ಉನ್ನತ ಶಿಕ್ಷಣ ಎರಡೂ ಪರಸ್ಪರ ಸಂಬಂಧ ಸೂಚಕಗಳು. ಪಾಶ್ಚಾತ್ಯ ಸಂಸ್ಕೃತಿ, ಶಿಕ್ಷಣಗಳ ದಬ್ಬಾಳಿಕೆಯಲ್ಲಿ ಭಾರತೀಯ ಪ್ರಜೆ ನಲುಗುತ್ತಿದ್ದಾನೆ. ಉನ್ನತ ಶಿಕ್ಷಣ ಅನುಕರಣೀಯವಾಗಬಾರದು, ಅನುಕೂಲಕರವಾಗಬೇಕು ಎಂಬುದು ಇಲ್ಲಿಯ ಕಳಕಳಿಯ ಮಾತಾಗಿದೆ.

**ಉನ್ನತ ಶಿಕ್ಷಣ**

ಮಾನವನ ಏಳ್ಗೆಯಲ್ಲಿ ಉನ್ನತ ಶಿಕ್ಷಣ ಮಹತ್ವದ ಪಾತ್ರ ವಹಿಸುತ್ತದೆ. ಸಾಮಾಜಿಕ ವಿಕಾಸ ಮತ್ತು ದೇಶದ ಆರ್ಥಿಕ ಪ್ರಗತಿಗೆ ಶಿಕ್ಷಣದ ಕೊಡುಗೆಯು ಅಪಾರವಾಗಿದೆ. ವಿಜ್ಞಾನ ತಂತ್ರಜ್ಞಾನಗಳಲ್ಲಾಗುವ ಅಭಿವೃದ್ಧಿಗಳು ಉನ್ನತ ಶಿಕ್ಷಣವನ್ನು ಪಡೆದ ಸಮರ್ಥ ಸ್ತ್ರೀ–ಪುರುಷರನ್ನು ಅವಲಂಬಿಸಿವೆ. ಭಾರತವು ಪ್ರಗತಿಪರ ರಾಷ್ಟ್ರವಾಗಿ ಮುನ್ನಡೆಯುತ್ತಿರುವಲ್ಲಿ ಉನ್ನತ ಶಿಕ್ಷಣದ ಕೊಡುಗೆ ಪ್ರಮುಖವಾಗಿದೆಯೆನ್ನುವುದರಲ್ಲಿ ಅನುಮಾನವಿಲ್ಲ. ಆದರೆ, ಉನ್ನತ ಶಿಕ್ಷಣ ವ್ಯವಸ್ಥೆಯೇ ಹಲವು ಸಮಸ್ಯೆಗಳಿಂದ ಪೀಡಿತವಾಗಿದೆ. ಉತ್ತಮ ಗುಣಮಟ್ಟದ ಉನ್ನತ ಶಿಕ್ಷಣ ಬಹುಸಂಖ್ಯಾತರಿಗೆ ಸಿಗುತ್ತಿಲ್ಲ. ಹಿಂದುಳಿದ ವರ್ಗಗಳಿಗೆ ಸೇರಿದ ಯುವಕರಿಗೆ ಉನ್ನತ ಶಿಕ್ಷಣವು ಕೈಗೆಟುಕುತ್ತಿಲ್ಲ. ಹಣಕಾಸಿನ ಕೊರತೆ, ಜನಪರ ತಾತ್ವಿಕ ದೃಷ್ಟಿಕೋನ ಮತ್ತು ದೂರದೃಷ್ಟಿಯ ಅಭಾವಗಳು ಉನ್ನತ ಶಿಕ್ಷಣದ ಅಭಿವೃದ್ಧಿಗೆ ದೊಡ್ಡ ಅಡ್ಡಿ–ಆತಂಕಗಳಾಗಿವೆ. ಒಟ್ಟು ಸಮಾಜ, ಪಾಲಕರು, ಶಿಕ್ಷಕರು, ವಿದ್ಯಾರ್ಥಿಗಳಲ್ಲಿರುವ ಮನೋಸಾಮಾಜಿಕ ನ್ಯೂನತೆಗಳು ಉನ್ನತ ಶಿಕ್ಷಣದ ಗುಣಮಟ್ಟದ ಹೆಚ್ಚಳಕ್ಕೆ ಕಂಟಕಗಳಾಗಿವೆ.



ಈ ಅಂಶಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಉನ್ನತ ಶಿಕ್ಷಣದ ಗುಣಮಟ್ಟದ ಪ್ರಶ್ನೆ ಮತ್ತು ಸಂಸ್ಕೃತಿಯ ಸ್ಥಿತಿ-ಗತಿ, ಸಮಸ್ಯೆಗಳು, ಪರಿಹಾರ ಮಾರ್ಗೋಪಾಯಗಳು ಇತ್ಯಾದಿ ವಿಷಯಗಳ ಬಗ್ಗೆ ವಿಶೇಷ ಉಪನ್ಯಾಸ, ಪ್ರಬಂಧಗಳ ಮಂಡನೆ, ಪ್ಯಾನೆಲ್ ಚರ್ಚೆಗಳು ನಡೆಯಬೇಕಿದೆ. ಉನ್ನತ ಶಿಕ್ಷಣದ ನೀತಿ ನಿರೂಪಕರು, ಆಯೋಜಕರು, ಕಾರ್ಯಕ್ರಮಗಳನ್ನು ಜಾರಿಗೊಳಿಸುವ ಜನನಾಯಕರು, ಆಡಳಿತ ಅಧಿಕಾರಿಗಳು, ಶಿಕ್ಷಣ ಸಂಸ್ಥೆಗಳ ಆಡಳಿತ ಮಂಡಳಿಗಳು, ಪ್ರಾಚಾರ್ಯರು ಮತ್ತು ಶಿಕ್ಷಕರ ಪಾತ್ರ ಮಹತ್ವದ್ದಾಗಿದೆ. ಇವರೆಲ್ಲರ ಮಧ್ಯೆ ಪರಿವರ್ತನೆಯಾಗಬೇಕಾದ ತಾತ್ವಿಕ ದೃಷ್ಟಿಕೋನದ ಕುರಿತು ವಿಮರ್ಶೆ-ಚರ್ಚೆಯಾಗಬೇಕಿದೆ.

ಅಧ್ಯಾಪಕರು, ಪಾಲಕರು, ಸಮುದಾಯ ಹಾಗೂ ವಿದ್ಯಾರ್ಥಿಗಳ ಗುರಿ, ಉದ್ದೇಶಗಳು, ಬೋಧನೆ – ಕಲಿಕೆಯ ಸಾಮರ್ಥ್ಯಗಳು; ಐಕ್ಯೂ ಎಮ್, ನ್ಯಾಕ್ ಇತ್ಯಾದಿ ಕಾರ್ಯಕ್ರಮಗಳು ಗುಣಮಟ್ಟದ ಹೆಚ್ಚಳಕ್ಕೆ ನೀಡಿರುವ ಕೊಡುಗೆಯಾಗಬೇಕಿದೆ.

ಉನ್ನತ ಶಿಕ್ಷಣವು ರಾಷ್ಟ್ರಕ್ಕೆ ಮೂಲಭೂತ ಬುನಾದಿಯೆಂಬುದನ್ನು ಯಾರೂ ನಿರಾಕರಿಸಲಾರರು. ಉನ್ನತ ಶಿಕ್ಷಣವು ದೇಶದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಯನ್ನು ನಿರ್ಧರಿಸುತ್ತದೆ. ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ ಮತ್ತು ಸಂಪೂರ್ಣ ಸಾಕ್ಷರತೆಗಳನ್ನು ಸಾಧಿಸಬೇಕಾದ್ದು ದೇಶದ ಆದ್ಯಕರ್ತವ್ಯ. ಅದೇ ಸಮಯದಲ್ಲಿ ಉನ್ನತ ಶಿಕ್ಷಣದಲ್ಲಿ ಜಾಗತಿಕ ಮಟ್ಟವನ್ನು ಸಾಧಿಸುವ ಯತ್ನವನ್ನು ಅಲ್ಲಗಳೆದು ಅದನ್ನು ಕಡೆಗಣಿಸುವುದು ಸರ್ವಥಾ ಸಾಧುವಲ್ಲ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸುವ ದಿಶೆಯಲ್ಲಿ ಉನ್ನತ ಶಿಕ್ಷಣದ ಗುಣಮಟ್ಟವೂ ಅಷ್ಟೇ ಮುಖ್ಯ. ಮಾಧ್ಯಮಿಕ ಶಿಕ್ಷಣದ ಸವಲತ್ತು ಪಡೆದವರ ಪೈಕಿ ಅದನ್ನು ಮೊಟ್ಟಮೊದಲ ಬಾರಿಗೆ ಪಡೆದವರ ಪೀಳಿಗೆಯೂ ಸೇರಿದೆ. ಅಂಥವರಿಗೆ ಉನ್ನತ ಶಿಕ್ಷಣ ಕೈಗೆಟುಕುವಂತಿರಬೇಕು. ಹಾಗೆ ಮಾಡಿದಾಗ ಮಾತ್ರವೇ ಸಮಾನತೆ ಮತ್ತು ಸಾಮಾಜಿಕ ನ್ಯಾಯಕ್ಕೆ ಪುಷ್ಟಿ ದೊರೆಯಲು ಸಾಧ್ಯ.

ಬಜೆಟ್‌ನ ಸಿಂಹಪಾಲು ರಕ್ಷಣೆಗೆ ಮತ್ತು ಅಣುಬಾಂಬಿಗೆ ಎಂದು ತೆಗೆದಿರಿಸುವ ಸರ್ಕಾರವು ಉನ್ನತ ಶಿಕ್ಷಣ, ಆರೋಗ್ಯ, ಪೌಷ್ಟಿಕ ಆಹಾರ, ಸಂರಕ್ಷಣೆ, ಸಾರ್ವಜನಿಕ ವಿತರಣಾ ವ್ಯವಸ್ಥೆ ಮೊದಲಾದ ಕ್ಷೇತ್ರಗಳಿಂದ ನಿಧಾನವಾಗಿ ಹಿಂದಕ್ಕೆ ಸರಿಯುತ್ತಿದೆ. ಶಿಕ್ಷಣ ಮೂಲಭೂತ ಹಕ್ಕೆಂದು ಶಾಸನ ರೂಪಿಸುತ್ತಿರುವಾಗ, ಮತ್ತೊಂದೆಡೆ ಶಾಲೆಗಳು ಮಾರಾಟಕ್ಕಿವೆ ಎಂಬ ಫಲಕಗಳು ರಾರಾಜಿಸುತ್ತಿವೆ.

ಪ್ರೌಢಶಾಲಾ ಶಿಕ್ಷಣದ ನಂತರ ನೀಡಲಾಗುವ ಪದವಿಪೂರ್ವ, ಪದವಿ ಹಾಗೂ ಸ್ನಾತಕೋತ್ತರ ಶಿಕ್ಷಣವನ್ನು ಸಾಮಾನ್ಯವಾಗಿ ಉನ್ನತ ಶಿಕ್ಷಣವೆಂದು ಗುರುತಿಸ ಲಾಗುತ್ತದೆ. ನಮ್ಮ ಸಮಾಜಕ್ಕೆ ಅಗತ್ಯವಿದೆಯೇ ಇಲ್ಲವೇ ಎನ್ನುವುದನ್ನೂ ಯೋಚಿಸದೆ ಮೇಲಿಂದ ಮೇಲೆ ಮೆಡಿಕಲ್ ಮತ್ತು ಇಂಜಿನಿಯರಿಂಗ್ ಕಾಲೇಜುಗಳನ್ನು ಆರಂಭಿಸಲು ರಾಜ್ಯದಲ್ಲಿ ಅನುಮತಿ ನೀಡಲಾಗುತ್ತಿದೆ.

ವಿಶ್ವವಿದ್ಯಾನಿಲಯಕ್ಕೆ ಸಂಯೋಜಿತವಾಗಿರುವ ಯಾವುದೇ ಕಾಲೇಜಿನ ಅಧ್ಯಾಪಕರು ವಿಶ್ವವಿದ್ಯಾನಿಲಯದ ಅಂಗಸಂಸ್ಥೆಗಳ ಸದಸ್ಯರಾಗಲು ಅವಕಾಶ ಇಲ್ಲವೆಂಬುದು ದೊಡ್ಡ ವಿಪರ್ಯಾಸವಲ್ಲವೆ? ಸ್ವತಃ ವಿಶ್ವವಿದ್ಯಾನಿಲಯಗಳು ತಮ್ಮ





ಸ್ವಾಯತ್ತತೆಯನ್ನು ಕಳೆದುಕೊಳ್ಳುತ್ತಿರುವುದನ್ನು ಕಾಣುತ್ತಿದ್ದೇವೆ. ಅಂತಹ ಹಿನ್ನೆಲೆಯಲ್ಲಿ ಸ್ವಾಯತ್ತವಾಗಬೇಕೆಂದು ಸರ್ಕಾರವು ಕಾಲೇಜುಗಳ ಮೇಲೆ ಒತ್ತಡ ಹೇರುತ್ತಿರುವುದು ಸೋಜಿಗವೆನಿಸುತ್ತದೆ.

ವೃತ್ತಿ ಶಿಕ್ಷಣದ ಬಗ್ಗೆ ವಿಪುಲವಾದ ಮಾತು ಕೇಳಿಬರುತ್ತಿದೆ. ಅದೊಂದು ನೀರಿನ ಮೇಲಿನ ಗುಳ್ಳೆಯಂತೆ. ಯಾವಾಗ ಬೇಕಾದರೂ ಅದು ಒಡೆದು ಹೋಗಬಹುದು. ಅದು ಅನಿವಾರ್ಯದ ಶಿಕ್ಷಣಕ್ರಮವಲ್ಲವಷ್ಟೆ, ಆದರೆ ಆಯ್ಕೆಮಾಡಿಕೊಂಡ ಶಿಕ್ಷಣ.

**ವಿಶ್ವವಿದ್ಯಾನಿಲಯಗಳು**

ಯುಜಿಸಿ ವ್ಯಾಪ್ತಿಯಡಿ ೬೨೧ ವಿಶ್ವವಿದ್ಯಾನಿಲಯಗಳು ನಡೆಯುತ್ತಿದ್ದು, ಈಗ ೭೦೦ರ ಗಡಿ ತಲುಪಿವೆ. ಈ ಪೈಕಿ ಕೇಂದ್ರೀಯ ವಿಶ್ವವಿದ್ಯಾನಿಲಯಗಳು-೪೧, ನ್ಯಾಷನಲ್ ಓಪನ್ ಯುನಿವರ್ಸಿಟಿ-೧, ಸಂಘ-ಸಂಸ್ಥೆಗಳಡಿ-೬೯. ಕರ್ನಾಟಕದಲ್ಲಿ ೨೮೧ ವಿಶ್ವವಿದ್ಯಾನಿಲಯಗಳು ಕಾರ್ಯ ನಿರ್ವಹಿಸುತ್ತಿದ್ದು, ಅದರಲ್ಲಿ ೮೭ ಖಾಸಗಿ ವಿಶ್ವವಿದ್ಯಾನಿಲಯಗಳಿವೆ. ಸರ್ಕಾರಿ ಸ್ವಾಮ್ಯದ ೪೦ ವಿಶ್ವವಿದ್ಯಾನಿಲಯಗಳಿವೆ.

ಭಾರತದಲ್ಲಿ ೧೩ ಸ್ಟೇಟ್ ಓಪನ್ ಯುನಿವರ್ಸಿಟಿಗಳಿದ್ದು, ಭಾರತದಲ್ಲಿ ವಿದೇಶಿ ವಿಶ್ವವಿದ್ಯಾನಿಲಯಗಳು ಪ್ರವೇಶ ಮಾಡಿಬಿಟ್ಟಿವೆ. ಇನ್ನು ಮುಂದೆ ಡೈರೆಕ್ಟೆಡ್ (ನೇರ) ವಿಶ್ವವಿದ್ಯಾನಿಲಯಗಳು ಬರುವ ಕಲ್ಪನೆ ಇದೆ. ಶಿಕ್ಷಣತಜ್ಞರು ಹೇಳುವ ಪ್ರಕಾರ ಭಾರತದಲ್ಲಿ ವಿಶ್ವವಿದ್ಯಾನಿಲಯಗಳಿಗೆ ಆಡಳಿತವಿಲ್ಲ, ನಿಯಮಾವಳಿಗಳಿವೆ. ವಿದೇಶಿ ವಿಶ್ವವಿದ್ಯಾನಿಲಯಗಳಲ್ಲಿ ಆಡಳಿತ ಸರಿಯಾಗಿರುತ್ತದೆ. ಆದರೆ ನಿಯಮಾವಳಿಗಳು ಇರುವುದಿಲ್ಲ.

ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ನಡುವಿನ ಅನುಪಾತವನ್ನು ಲೆಕ್ಕ ಹಾಕಿದರೆ, ಮುಂದಿನ ೧೦ ವರ್ಷಗಳಲ್ಲಿ ೧೫೦೦ ವಿಶ್ವವಿದ್ಯಾನಿಲಯಗಳು ಸ್ಥಾಪನೆಯಾಗಬೇಕು. ಸರ್ಕಾರದ ಮಟ್ಟದಲ್ಲಿ ಜಿಲ್ಲಾವಾರು ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಬೇಕೆಂಬ ಕಲ್ಪನೆ ಇದೆ. ಈಗಾಗಲೇ ೨೧ ಖಾಸಗಿ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಲು ಅನುಮತಿಯನ್ನೇನೋ ನೀಡಲಾಗಿದೆ. ಆದರೆ, ಇದರ ಸಾಧಕ-ಬಾಧಕಗಳ ಬಗ್ಗೆ ಎಲ್ಲೆಡೆ ಚರ್ಚೆ ನಡೆಯಬೇಕಾಗಿದೆ. ಭಾರತದಲ್ಲಿ ಶಿಕ್ಷಣ ಪದ್ಧತಿ ವಿಶಿಷ್ಟವಾಗಿದೆ. ಇತರ ದೇಶಗಳಿಗೆ ಹೋಲಿಸಿದರೆ, ಭಾರತದಲ್ಲಿ ಮಾತ್ರ ಕಟ್ಟಕಡೆಯ ವ್ಯಕ್ತಿಗೂ ಶಿಕ್ಷಣ ಒದಗಿಸಬೇಕೆಂಬ ಶಿಕ್ಷಣ ಪದ್ಧತಿ ಅಳವಡಿಕೆಯಾಗಿದೆ.

ವಿಶ್ವವಿದ್ಯಾನಿಲಯಗಳು, ಶಿಕ್ಷಣ ವ್ಯವಸ್ಥೆಗಳಿಗೆ ಹಣಕಾಸನ್ನು ಒದಗಿಸುವ ನಿಟ್ಟಿನಲ್ಲಿ ಇದುವರೆಗೂ ನಿರ್ದಿಷ್ಟ ರೀತಿ ನೀತಿಗಳನ್ನು ಪರಿಪಾಲಿಸದೆ ನಡೆದು ಬಂದಿರುವ ಪರಿಣಾಮವಾಗಿ ಇಂದು ದಿಕ್ಕುದೆಸೆಯಿಲ್ಲದೆ ಗೊಂದಲದ ವಾತಾವರಣ ಉಂಟಾಗಿದೆ. ಭವಿಷ್ಯದ ಬಗೆಗಿನ ಕಲ್ಪನೆ ಇವರಾರಿಗೂ ಇದ್ದಂತಿಲ್ಲ. ಇಂದಿನ, ಈ ಹೊತ್ತಿನ ಅಗತ್ಯಗಳನ್ನು ಪೂರೈಸಿಕೊಂಡರೆ ಸಾಕು ಎಂಬುದೇ ಸಾಮಾನ್ಯವಾಗಿ ಶಿಕ್ಷಣ ನೀತಿ ಮತ್ತು ವಿದ್ಯಾಸಂಸ್ಥೆಗಳ ಮನೋಧರ್ಮ, ಹಣಕಾಸಿನ ಕೊರತೆಯನ್ನು ನೀಗಿಸಲು ರಾಜ್ಯ ಸರ್ಕಾರಗಳು ವಿಶ್ವವಿದ್ಯಾನಿಲಯಗಳಲ್ಲಿನ ನೌಕರಿಗಳಿಗೆ ಕಡಿವಾಣ ಹಾಕಿರುವುದು ಒಂದು ಮುಖ್ಯ ದೃಷ್ಟಾಂತ. ವಿಶ್ವವಿದ್ಯಾನಿಲಯ ಸಹಾಯಧನ

(೪೯ನೇ ಪುಟಕ್ಕೆ)

# ನೆನಪಿನ ಅಲೆ ಅಪರಂಪಾರ



ನೆನಪು ನನಗೆ ತಿಳಿದಂತೆ ಒಂದು ಅಸಾಧಾರಣ ಮಾನಸಿಕ ಶಕ್ತಿ. ನೆನಪಿನಂಗಳದಲ್ಲಿ ನಲಿದಾಡದ ಮಾನವ ಪ್ರಾಣಿಗಳೇ ಇಲ್ಲ, ಅಥವಾ ಹುಟ್ಟಿಲ್ಲ. ನೆನಪು ಒಂದು ವರವೂ ಹೌದು. ಶಾಪವೂ ಹೌದು. ಸುಖ–ಕಷ್ಟ ಎರಡರದ್ದೂ ಬರಾಬರಿ ಅನುಭವ ಈ ನೆನಪೆಂಬ ಬಲೆಯಲ್ಲಿ ಬಿದ್ದು ವಿಲಿವಿಲಿ ಒದ್ದಾಡುತ್ತಿರುತ್ತದೆ. ನೆನಪಿನ ಶಕ್ತಿ ಕೆಲವರಿಗೆ ಅಷ್ಟಕ್ಕಷ್ಟೆ, ಕೆಲವರಿಗೆ ವ್ಯವಹಾರಕ್ಕೆ ತಕ್ಕಷ್ಟು. ಇನ್ನು ಕೆಲವರಿಗೆ ಘಟನೆ ಸಂಭವಿಸಿದ ಹೊತ್ತಲ್ಲಷ್ಟೆ. ಇನ್ನು ಕೆಲವರದು ಅಗಾಧ ಸ್ಮರಣಶಕ್ತಿಯದು. ನಾವು ಮಾಡುವ ದಿನನಿತ್ಯದ ಕ್ರಿಯೆ ಕೆಲಸಗಳೆಲ್ಲ ರೂಢಿಗತವಾಗಿ ಬರುವಂಥದ್ದೇ. ಆದ್ದರಿಂದ ಅದಕ್ಕೆ ಹೆಚ್ಚು ನೆನಪಿನ ಅವಶ್ಯಕತೆಯೆ ಇರುವುದಿಲ್ಲ. ಬೇರೆಯವರು ಕೇಳಿದ/ಕೇಳುವ ಪ್ರಶ್ನೆಗಳಿಗೆ ನಾವು ಉತ್ತರಿಸಲು ಸಹಾಯಗೈಯ್ಯುವ ನಮ್ಮ ಮಿದುಳ ಶಕ್ತಿಯೆಂದರೆ ನಮ್ಮ ಸ್ವಂತದ್ದಾದ ಕಲ್ಪನೆ/ಪೂರ್ವಾನುಭವಗಳ ಆಧಾರದಿಂದಲೇ ನಾವು ಥಟ್ಟನೆ ಉತ್ತರಿಸಿಬಿಡುತ್ತೇವೆ. ನಮ್ಮ ಉತ್ತರಗಳಿಂದ ನಮಗೆ ಲಾಭವಾಗದಿದ್ದರೂ ನಷ್ಟವಂತೂ ಆಗುವುದಿಲ್ಲ.

ಫಕ್ಕನೆ ನೋಡಿದರೆ ಒಬ್ಬರಂತೆಯೇ ಇನ್ನೊಬ್ಬರು ಯಾವಾಗಲಾದರೊಮ್ಮೆ ಅಲ್ಲಲ್ಲಿ ನಮ್ಮ ಕಣ್ಣಿಗೆ ಬೀಳುವುದುಂಟು, ನಮಗೇ ಪರಮಾಶ್ಚರ್ಯ ಹುಟ್ಟಿಸುವಂತೆ! ಸ್ಮರಣಶಕ್ತಿಯ ಸಹಾಯವಿಲ್ಲದೆ ನಮಗೆ ಈ ಭುವಿಯಲ್ಲಿ ಬದುಕೇ ಇಲ್ಲ ಮತ್ತು ಬದುಕಲಿಕ್ಕೆ ಸಾಧ್ಯವಿಲ್ಲ! ಮಿದುಳಿನ ಈ ಅತ್ಯಮೋಘ ಶಕ್ತಿಯೇ ಸದಾ ನಮ್ಮನ್ನು ದಿಗ್ದರ್ಶಿಸುತ್ತ ಇರುತ್ತದೆ. ನಾವು ಮಾಡಬೇಕಾದ, ಮಾಡಬಹುದಾದ, ನಮ್ಮ ಬುದ್ಧಿ ಚಾತುರ್ಯಕ್ಕೆ, ಅನುಭವ ದ್ರವ್ಯಕ್ಕೆ, ಕಲಿತ ವಿದ್ಯೆಗೆ, ಪಡೆದಿದ್ದ ಅನುಭವಕ್ಕೆ, ಪರಿಸರದ ಪ್ರಭಾವಕ್ಕೆ ಕೌಟುಂಬಿಕ ಹಿನ್ನೆಲೆಯು ಪ್ರಭಾವಿಸಿದ್ದರೂ ನಮ್ಮ ಮಿದುಳಿನ ನಿರ್ದೇಶನ ಎಷ್ಟೇ ಗಂಭೀರತಮವಾಗಿದ್ದರೂ ನೆನಪು ಮಾಡಲಿರುವ ಕೆಲಸದ ಪರಿಣಾಮ – ಫಲಿತಾಂಶಗಳ ಬಗ್ಗೆ ಪೂರ್ವಸೂಚಿಯಾಗಿ ನಿರ್ದೇಶಿಸುವ ಪ್ರಕ್ರಿಯಾ ಪ್ರಭಾವದಿಂದಲೇ ನಾವು ಪ್ರತಿಕ್ರಿಯಿಸುತ್ತೇವೆ. ಈ ಮಾನಸಿಕ ಕ್ರಿಯಾವಿಧಾನವು ನಮಗೇ ಅರಿವಿಲ್ಲದಂತೆ ಸರಾಗವಾಗಿ ಸುಸೂತ್ರವಾಗಿ ನಡೆಯುತ್ತ ಮುನ್ನಡೆಯುವುದು ನಮ್ಮ ಬುದ್ಧಿ ಅಥವಾ ಸ್ಮರಣೆಯ ಹಠಾತ್ ಪ್ರಭಾವದಿಂದ ಮಾತ್ರ ಸಾಧ್ಯ ಅಂತ ಗ್ರಹಿಸಬೇಕಾಗುತ್ತದೆ. ವ್ಯಕ್ತಿಯು ಮಾತಿನ ರೂಪದಲ್ಲಿ ಚಿಮ್ಮಿಸುವ ವಾಗ್ಧಾರೆಯಲ್ಲಿ ಆತನ ಸ್ಮರಣೆ ಹಾಗೂ ನಂಬಿಕೆಯದೇ ಸಾಕ್ಷೀಭೂತವಾಗಿರುತ್ತದೆ.

ನೆನಪಿನ ಅಗಾಧ ಶಕ್ತಿಯ ಮಹಿಮೆ ಮನುಷ್ಯನಿಗೆ ಬರಿಯ ಸದ್ಭಾವನೆ – ಸತ್ಕಾರ್ಯ – ಸದ್ವರ್ತನೆಗಳಿಗೆ ಮಾತ್ರ ಪ್ರಚೋದಕ ಶಕ್ತಿ ಎಂದು ಭಾವಿಸುವುದು ತಪ್ಪು. ಎಷ್ಟೋ ದಿನ – ತಿಂಗಳು – ವರ್ಷಗಳ ಹಿಂದೆ ನಡೆದಿದ್ದ ಘಟನೆಯಿಂದ ಘಾತಿಸಿಕೊಂಡಿದ್ದ ವ್ಯಕ್ತಿ ಹಾಗಾಗಲು ಕಾರಣನಾಗಿದ್ದ, ಆ ವ್ಯಕ್ತಿ ಕಣ್ಮುಂದೆ ಮತ್ತೆ ಪ್ರತ್ಯಕ್ಷನಾದಂತೆ ಕಾಣಿಸಿಕೊಂಡಾಗ ಈತನ ಹತಾಶ ನೆನಪಿನ ಅಗ್ನಿಗೆ ತುಪ್ಪ ಸುರಿದಂತಾಗಿ ಧಗ್ಗನೆ ಉದ್ವಿಗ್ನಗೊಳ್ಳುವ ಸಂಭವವಿದೆ, ಆಗ ಈತ ಮನಸ್ಸಿನಲ್ಲೇ ಕ್ರೋಧಿತನಾಗಿ ವಿರಸ – ಜಗಳದಲ್ಲಿ ಮುಳುಗುತ್ತಾನೆ. ಕ್ರಮೇಣ ಇದೇ ಹಗೆತನವು ಹೊಡೆದಾಟ – ಕೊಲೆ – ಅಗ್ನಿಸ್ಪರ್ಶದಂತಹ ದುರಂತ ಘಟನೆಯಲ್ಲಿ ಪರ್ಯವಸಾನಗೊಳ್ಳುವುದಿದೆ. ಇದಕ್ಕೆಲ್ಲಾ ಅವನ ಆ ಹಿಂದಿನ ನೆನಪೇ ಕಾರಣವಾಗುತ್ತದೆ.

ಹೀಗಾಗಿ ವ್ಯಕ್ತಿಗೆ ನೆನಪು ಸದಾ ಹೀಗೆಯೇ ಪ್ರಚೋದಿಸುತ್ತದೆ ಅಥವಾ ಪ್ರಚೋದಿಸೀತು ಎಂದು ಕರಾರುವಾಕ್ಕಾಗಿ ಮೌಲ್ಯಮಾಪನ ಮಾಡಲಾಗುವುದಿಲ್ಲ. ತನ್ನ ಜೊತೆ ತನ್ನ ಕನಸುಗಾರ್ತಿ ಕನ್ಯೆಯಿಂದ ಪ್ರೇಮಕ್ಕೆ ನಿರಾಕರಣೆ ಮಾಡಿಸಿಕೊಂಡ ಹುಡುಗ ನಂತರ ಇನ್ಯಾವುದೋ ಸಂದರ್ಭದಲ್ಲಿ ಆಕೆಯನ್ನು ಹಿಂಸಿಸಿ, ಮುಖಕ್ಕೆ ಆ್ಯಸಿಡ್ ಎರಚಿ ಭಗ್ನಹೃದಯದ ತನ್ನ ಭಾವೋದ್ವಿಗ್ನತೆಯನ್ನು ಶಮನ ಮಾಡಿಕೊಳ್ಳುವಂತಹ ಹುಚ್ಚು ಸಾಹಸಿಗರಿಗೆ ಅದು ನೆನಪಾಗಿದ್ದಕ್ಕೆ ಹೀಗೆ ಪ್ರತೀಕಾರ ತೀರಿಸಿಕೊಳ್ಳುತ್ತಾರೆ. ಮುಂದಿನ ಪರಿಣಾಮ – ಏನಾಗುತ್ತದೋ ಗೊತ್ತಿಲ್ಲ ಸ್ಮರಣೆ ಮಾತ್ರದಲ್ಲಿ ಭಗವಂತ ಪ್ರತ್ಯಕ್ಷನಾದ. ಇದು ಕೃಷ್ಣನ ಕಥೆ! ಹಾಗಿದ್ದರೆ

**ಬಿ. ಪಿ. ಶಿವಾನಂದರಾವ್**

ನೆನಪಿನ ಅಗಾಧಶಕ್ತಿಯ ಮಹಿಮೆ ಮನುಷ್ಯನಿಗೆ ಬರಿಯ ಸದ್ಭಾವನೆ – ಸತ್ಕಾರ್ಯ – ಸದ್ವರ್ತನೆಗಳಿಗೆ ಮಾತ್ರ ಪ್ರಚೋದಕ ಶಕ್ತಿ ಎಂದು ಭಾವಿಸುವುದು ತಪ್ಪು. ಎಷ್ಟೋ ದಿನ – ತಿಂಗಳು – ವರ್ಷಗಳ ಹಿಂದೆ ನಡೆದಿದ್ದ ಘಟನೆಯಿಂದ ಘಾತಿಸಿಕೊಂಡಿದ್ದ ವ್ಯಕ್ತಿ ಹಾಗಾಗಲು ಕಾರಣನಾಗಿದ್ದ, ಆ ವ್ಯಕ್ತಿ ಕಣ್ಮುಂದೆ ಮತ್ತೆ ಪ್ರತ್ಯಕ್ಷನಾದಂತೆ ಕಾಣಿಸಿಕೊಂಡಾಗ ಈತನ ಹತಾಶ ನೆನಪಿನ ಅಗ್ನಿಗೆ ತುಪ್ಪ ಸುರಿದಂತಾಗಿ ಧಗ್ಗನೆ ಉದ್ವಿಗ್ನಗೊಳ್ಳುವ ಸಂಭವವಿದೆ, ಆಗ ಈತ ಮನಸ್ಸಿನಲ್ಲೇ ಕ್ರೋಧಿತನಾಗಿ ವಿರಸ –ಜಗಳದಲ್ಲಿ ಮುಳುಗುತ್ತಾನೆ. ಕ್ರಮೇಣ ಇದೇ ಹಗೆತನವು ಹೊಡೆದಾಟ – ಕೊಲೆ – ಅಗ್ನಿಸ್ಪರ್ಶದಂತಹ ದುರಂತ ಘಟನೆಯಲ್ಲಿ ಪರ್ಯವಸಾನಗೊಳ್ಳುವುದಿದೆ. ಇದಕ್ಕೆಲ್ಲಾ ಅವನ ಆ ಹಿಂದಿನ ನೆನಪೇ ಕಾರಣವಾಗುತ್ತದೆ.

ಸ್ಮರಿಸಿದವರ ಬಳಿಯಲ್ಲೆಲ್ಲ ಕೃಷ್ಣ ಸದಾ ಹೋಗಿ ಪ್ರತ್ಯಕ್ಷನಾಗುತ್ತಿದ್ದನೆ ? ಅಥವಾ ಸಾಧ್ಯವಿತ್ತೆ ? ಇದು ಅವರವರ ಭಕ್ತಿ – ನಂಬಿಕೆಗೆ ಬಿಟ್ಟ ವಿಚಾರವಾಗಿದೆ. ಸ್ಮರಣೆ ಎಂಬುದೂ ಆ ಅರ್ಥದಲ್ಲಿ ಸುಳ್ಳಿರಲಿ – ನಿಜವಿರಲಿ ಅದು ನಂಬಿಕೆಯ ನೆಲಗಟ್ಟಿನ ಮೇಲೆಯೇ ವ್ಯಕ್ತಿ ತಾನು – ತನ್ನಲ್ಲಿ ಪ್ರಥಮತಃ ಸ್ಥಾಪಿಸಿಕೊಳ್ಳ ಬೇಕಾಗುತ್ತದೆ. ಮಿದುಳಲ್ಲಿನ ನರಕೋಶಗಳ ರಚನೆಯಲ್ಲಿ ಉಂಟಾದ ವ್ಯತ್ಯಾಸಗಳಿಂದಾಗಿ ಈ ಸ್ಮರಣೆಯ ಹಾಗೂ ಮರೆವಿನ ಶಕ್ತಿ ಭಿನ್ನಗೊಳ್ಳುತ್ತದೆ ಎಂಬುದು ವೈದ್ಯರ ಅಂಬೋಣ. ಅಂತೂ ನಾವು ದಿನ ನಿತ್ಯ ಮಾಡುವ / ಮಾಡಬೇಕಾದ ಅನಿವಾರ್ಯದ್ದಾದ ಮುಖ್ಯ ಕೆಲಸಗಳ ಬಗ್ಗೆ ಪೂರ್ವಯೋಜಿತವಾಗಿ ಹೀಗಾಗ ಬೇಕಂತ ನಿರ್ಧರಿಸಿ ಯೋಜನೆ ಕೂಡ ಕೂತಲ್ಲೆ ಸ್ಮರಣೆ ನಿರ್ದೇಶನ ನೀಡಿದಂತೆಲ್ಲ ಸುಸಂಬದ್ಧವೋ– ಅಸಂಬದ್ಧವೋ, ಅವನ್ನು ರೂಪಿಸಿಕೊಂಡು ಅನಂತರ ಆ ಪ್ರಕಾರ ಅನುಷ್ಠಾನಕ್ಕೆ (ಕಾರ್ಯರೂಪ) ತರುತ್ತೇವಲ್ಲ, ಈ ಕ್ರಿಯೆಗೆ ಆಧಾರಸ್ತಂಭವೇ ನಮ್ಮ ನೆನಪಿನ ಶಕ್ತಿ ! ಹೀಗಾಗಿ ಯಾವುದೇ ಕಾರ್ಯಯೋಜನೆ ರೂಪಿಸಿಕೊಳ್ಳುವ ಮುನ್ನ ವಿಚಾರ ವಿಮರ್ಶೆಯನ್ನು ತಾಳ್ಮೆಯಿಂದ ವಿವೇಚಿಸ ಬೇಕಾಗುತ್ತದೆ. ಆಗ ಮಾತ್ರ ಕೈಗೊಂಡ ಕಾರ್ಯ ಬಹುತೇಕವಾಗಿ ಫಲಪ್ರದವಾಗುತ್ತದೆ ಅಂತ ಹಿರಿಯರು ಸೂಚಿಸುತ್ತಾರೆ. ಭಗ್ನಪ್ರೇಮಿಗಳ ಹೃದಯದಲ್ಲಿ ಏಳುವ ಭಾವನಾ ಅಲೆಗಳು ಮುಗಿಲೆತ್ತರ ಜಿಗಿಯುವ ಕನಸುಗಳಲ್ಲಿ ತೇಲುತ್ತಾ ತೇಲುತ್ತಾ ಅದೇನು ಗ್ರಹಚಾರವೋ ಬುಳುಕ್ಕೆಂದು ಮುಳುಗಿದರೆ ಅವರ ಗತಿಯೇನು ? 'ನೆನಪು ಪ್ರಿಯೆ ಮಧುರ... ಮಧುರ' ಅಂತ ನೆನಪಿಸಿಕೊಳ್ಳುವುದಷ್ಟೇ ಅವರಿಗೆ ಉಳಿದಿರುವ ಭಾಗ್ಯ ವಿಶೇಷ ! (ಭಾಗ್ಯಾವಶೇಷವೂ ಹೌದು) ನೆನಪಿನ ಮಾನಸಿಕ ಕ್ರಿಯೆಯ ವಿರುದ್ಧ ಶಬ್ದವೇ ಮರೆವು. ಇದಕ್ಕೆ ಮರಪು, ಮರವೆ, ಒಂದು ಬಗೆಯ ನೇತ್ರ ರೋಗ, ಮರಹು, ವಿಸ್ಮೃತಿ, ವಿಸ್ಮರಣ, ಹೀಗೆ ವಿವಿಧಾರ್ಥಗಳಿವೆ. ಈ ಮರೆವು ಎಂಬುದು ಕೆಲವರಿಗೆ 'ವರ'ವಾಗಿ ಪರಿಣಮಿಸಿದರೆ ಕೆಲವರಿಗೆ 'ಶಾಪ'ವಾಗಿ ಪರಿಣಮಿಸುವುದುಂಟು. ವ್ಯಕ್ತಿಗೆ ಮರೆವು ಆಕಸ್ಮಿಕ ಕ್ರಿಯೆ. ಸಾಮಾನ್ಯವಾಗಿ ಮರೆಗುಳಿಯನ್ನು ಉದಾಹರಿಸಲು ಕಾಲೇಜಿನ ಪ್ರೊಫೆಸರ್ ಅವರನ್ನು ಲೇಖಕರು / ಜನತೆ ಆಯ್ದುಕೊಳ್ಳುವುದುಂಟು. ಹಾಗೆ ವಿಶ್ಲೇಷಿಸಿದರೆ ಮರೆವು ಪ್ರೊಫೆಸರ್ ಅವರಿಗೆ ಒಂದು ಅಪವಾದದ / ವಿಪರ್ಯಾಸದ ಗುಣಾಂಶವೆಂದು ಸಂಕೇತಿಸುತ್ತೇವೆ. ಸತ್ಯಾಂಶವೆಂದರೆ ಜ್ಞಾಪಕಶಕ್ತಿಯು ಸಹಜವಾಗಿ ವಿದ್ಯಾವಂತ, ಸ್ನಾತಕೋತ್ತರ ಪದವಿ ಪಡೆದ ಪ್ರೊಫೆಸರ್‌ಗೆ ಅತ್ಯಧಿಕ ಪ್ರಮಾಣದ್ದಾಗಿರುತ್ತದೆ. ಆದರೆ ಆತನ ಮನೋಲೋಕದಲ್ಲಿ ಮರೆವಿನ ಚಂದ್ರಮನೇ ಸುರಳೀತ ಸುತ್ತಾಡುವುದರಿಂದ ಆತ ಮಾಡಬೇಕಾದ, ನಿರೀಕ್ಷಿಸಿದ ಕೆಲಸ ಎಷ್ಟೇ ಮುಖ್ಯದ್ದಿರಲಿ, ಮರೆತುಬಿಡುತ್ತಾನೆ ! ಜೊತೆಗೆ ಗೊಂದಲ, ಅವಾಂತರ ಎಬ್ಬಿಸಿ ಉಳಿದವರಿಗೆ ಕಂಗಾಲುಮಾಡಿಬಿಡುತ್ತಾನೆ ಎಂಬರ್ಥದಲ್ಲಿ ಹೇಳಲಿಕ್ಕಾಗಿ ಆತನನ್ನು 'ಮರೆಗುಳಿ ಪ್ರೊಫೆಸರ್' ಎಂದು

**ತಿದ್ದುಪಡಿ**

ಅಕ್ಕನ ನುಡಿಗೆ
ಈಗೊಂದು ತಿದ್ದುಪಡಿ
"ಸಾವ, ಕೆಡುವ
ದೇವರನೊಯ್ದು
ಒಲೆಯೊಳಗಿಕ್ಕು !"

ಸಿ. ಪಿ. ಕೆ.
ಮೈಸೂರು

ಶ್ಲಾಘಿಸುತ್ತೇವೆ ! (ಪ್ರೊಫೆಸರ್‌ಗಿಂತ ಬುದ್ಧಿವಂತ ವ್ಯಕ್ತಿ ನಮಗೆ ತೋಚುವುದು ಕಡಿಮೆ ಅನ್ನೋದೂ ಅನರ್ಥದ ಈ ಮರೆವಿನ ಕರ್ಮಾಂತರಕ್ಕೆ ಉದಾಹರಣೆ ಆಗುತ್ತದಲ್ಲ !) ಮಾರ್ಕೆಟ್ಟಿನಿಂದ ತರಕಾರಿ ತನ್ನಿ ಎಂದು ಪ್ರೊಫೆಸರ್‌ಗೆ ಹೇಳಿದ ಹೆಂಡತಿ, ಖಾಲಿ ಕೈನಲ್ಲಿ ಹಿಂದಿರುಗಿದ ಗಂಡನಿಗೆ ತರಾಟೆಗೆ ತೆಗೆದುಕೊಳ್ಳುವ ಹಾಸ್ಯಮಯ ದೃಶ್ಯ ಓದುವವರಿಗೆ ಖುಷಿ ಕೊಡುವುದು ಅವರ ಈ ಮರೆವಿನ ಶ್ರೇಷ್ಠಗುಣಕ್ಕಾಗಿಯೇ ! ಮರೆವು ಭ್ರಮೆಯ ಮತ್ತೊಂದು ಮುಖವೆಂದು ವಿಶ್ಲೇಷಿಸಬಹುದು. ಮರೆತು ಮಾಡುವ ಯಾವುದೇ ತೆರನ ಅಚಾತುರ್ಯದ ಕೆಲಸಗಳು ಉಳಿದವರನ್ನು ನಗೆಯಾಡುವಂತೆ ಪ್ರೇರೇಪಿಸುತ್ತವೆ, ಆ ಸಮಯದಲ್ಲಿ ನಗೆಯಾಡಿದವರು ಜಾಗ್ರತಾವಸ್ಥೆಯಲ್ಲಿ ಇರುವುದರಿಂದ ತಾವು 'ಬುದ್ಧಿವಂತ'ರೆಂದು ಭ್ರಮಿಸಿಕೊಳ್ಳುವವರೂ ಇದ್ದಾರೆ. ಅಚಾತುರ್ಯದ ಕೆಲಸಗಳು ಅವಸರದಲ್ಲಿ ಅರಿವಿನ ಮರೆವಿನಿಂದಾದ ಪ್ರಮೇಯ – ಪ್ರಮಾದ ಪ್ರಸಂಗ ಗಳಾಗಿದ್ದರೂ ಸಹ ಅದು ಅವರ 'ದಡ್ಡತನ'ದ್ದೇ ಪರಮಸಂಕೇತ ಎಂದುಕೊಂಡ ನಾವು ಉಬ್ಬಿಹೋಗುತ್ತೇವೆ ! ಇದು ಸಹಜ ದೃಶ್ಯ.

ಈ ಮರೆವಿನ ಪ್ರತಾಪ ಪ್ರಭಾವದಿಂದ ವ್ಯಕ್ತಿಗೆ ಜೀವನದಲ್ಲಿ 'ನಷ್ಟ'ವೇ ಹೊರತು 'ಲಾಭ'ವಾಗುವ ಸನ್ನಿವೇಶಗಳು (ನಿದರ್ಶನಗಳು) ಕಡಿಮೆಯೇ. ವೇಳೆ ಆಗುತ್ತದೆಂದು ಧಾವಂತದಲ್ಲಿ ರೈಲ್ವೆ – ಬಸ್ ನಿಲ್ದಾಣ ತಲುಪಿದ ನಂತರ ಮನೆಯಲ್ಲಿ ಮೊಬೈಲ್ – ಪರ್ಸ್ – ಮುಖ್ಯಪತ್ರ, ಎ.ಟಿ.ಎಂ. ಕಾರ್ಡ್ ವಗೈರೆ ಮರೆತು ಬಂದಾಗ ಒದ್ದಾಡುವ ನಮ್ಮವರ ಪರಿಪಾಟಲು (ಸಂಕಟ) ದೇವರಿಗೇ ಪ್ರೀತಿ ! ನಮ್ಮ ಇಂತಹ ಮರೆವನ್ನು ಲಘುವಾಗಿ ಕಂಡ ಯಾರಿಗೆ ತಾನೆ ಖುಷಿ ಕೊಡುವುದಿಲ್ಲ ? ವ್ಯಕ್ತಿ ಸಾಮಾನ್ಯವಾಗಿ ತನ್ನ ಮನಸ್ಸಿನ ಮೇಲೆ ತೀವ್ರ ಪರಿಣಾಮಬೀರುವ ಸಂಗತಿಗಳು, ಅವು ಯಾವುದೇ ರೀತಿ – ಸ್ಥಿತಿಯದ್ದಾಗಿರಬಹುದು, ಆತನ ನೆನಪಿಗೆ ಮತ್ತೆ ಮತ್ತೆ ಬಂದು ಅಪ್ಪಳಿಸಿ ಹಿಂಡುವ ಸಂಗತಿಗಳೆಂದರೆ ತಾನು ಕಂಡುಂಡ ಒಳ್ಳೆಯ ಮತ್ತು ಕೆಟ್ಟ ಪ್ರಸಂಗಗಳದ್ದು ಮಾತ್ರ ಎನ್ನಬಹುದು.

ಇನ್ನು ಕೆಲವರ ಗುಣವಿಶೇಷತೆಗಳನ್ನು ನೋಡಿರಿ. ಈಗ ಇಲ್ಲಿಟ್ಟ ವಸ್ತುವನ್ನು ಇನ್ನೊಂದು ಕ್ಷಣದಲ್ಲಿ ಮರೆತು ಇನ್ನೆಲ್ಲೋ ಹುಡುಕುತ್ತಾರೆ. ಅಡ್ಡ ಬಂದು ನಿರ್ದೇಶಿಸಿದವರ ಮೇಲೆ ಹರಿಹಾಯುತ್ತಾರೆ (ಸಿಟ್ಟಿಗೇಳುತ್ತಾರೆ). ಅನೇಕರು ತಾವು ಮಾಡಬೇಕಾದ ಕೆಲಸಗಳನ್ನು ಮರೆತು ಅನಗತ್ಯ ಕಾರ್ಯ–ಮಾತುಗಳಲ್ಲಿ ತಲ್ಲೀನರಾಗಿ ಕೊನೆಗೆ ಅನ್ಯರ ಟೀಕೆ–ಟಿಪ್ಪಣಿಗಳಿಗೆ ಗುರಿಯಾಗುವುದುಂಟು.

ಅರವತ್ತು ವಯಸ್ಸು ದಾಟಿದ ನಂತರ ವ್ಯಕ್ತಿಗೆ ಬಹುತೇಕ ಜ್ಞಾಪಕಶಕ್ತಿ ಕುಂದುತ್ತ ಹೋಗುತ್ತದೆ. ಅರ್ಥಾತ್ ಮರೆವಿನ ರೋಗ ಹೆಚ್ಚಾಗುತ್ತ ಹೋಗುತ್ತದೆ. 'ಅರವತ್ತಕ್ಕೆ ಅರುಳು ಮರುಳು' ಎಂತಂದು ಉಳ್ಳವರು ಹಾಸ್ಯಮಾಡುವುದುಂಟು. ಅಂತಹವರಿಗೆ ತಾವು ಮಾಡಬೇಕಾದ ಕೆಲಸಗಳ ಬಗ್ಗೆ ಪೂರ್ವನಿರ್ಧಾರಿತ ವಿಚಾರ – ವಿಮರ್ಶೆ ಗಳಿರುವುದಿಲ್ಲ. ಆ ಕ್ಷಣದಲ್ಲಿ ಮನಸ್ಸಿಗೆ ತೋಚಿದಂತೆ ಮಾಡಿ ಮುಗಿಸಿಬಿಡುತ್ತಾರೆ. ನಂತರವೇ ತಾವು ಇಂಥಾದ್ದು ಮಾಡಬೇಕಾದ್ದನ್ನು ಮರೆತುಬಿಟ್ಟೆನಲ್ಲ ಅಂತಂದುಕೊಂಡು ಪರಿತಪಿಸುವವರೂ ಉಂಟು ! ಇನ್ನೂ ಕೆಲವರು ರೋಗ ಉಲ್ಬಣಿಸಿದಾಗ, ಏಕಾಂತ ಪ್ರಿಯರಿಗೆ, ಸುಮ್ಮನೆ ಚಿಂತಿಸುತ್ತಾ ಕುಳಿತವರಿಗೆ, ಒಂದೇ ವಿಷಯದ ಕುರಿತಾಗಿ ಯೋಚಿಸಿ ಹಣ್ಣಾದಾಗ, ಅನ್ಯರ ತಿರಸ್ಕಾರಕ್ಕೆ ಗುರಿಯಾದಾಗ ಅಥವಾ ಹಾಗೆ ಭ್ರಮಿಸಿಕೊಂಡಾಗ ಏಕಾಂತತೆಯ ದಟ್ಟ ಪ್ರಭಾವಕ್ಕೆ, ಅವರು ಗಂಡಿರಲಿ ಹೆಣ್ಣಿರಲಿ, ಮುಪ್ಪಿನಲ್ಲಿ ವ್ಯಕ್ತಿ ಮರೆವಿನ ರೋಗಕ್ಕೆ ತುತ್ತಾಗುವುದುಂಟು. ಅವರಿಗೆ ಮರೆವಿನ ರೋಗ ಎಷ್ಟು ತೀವ್ರವಾಗಿ ಪೀಡಿಸುತ್ತಿರುತ್ತದೆ ಎಂದರೆ ಅವರು ತಮ್ಮಷ್ಟಕ್ಕೆ ತಾವೇ ಗೊಣಗಾಡುವುದು, ತಾವೇ ಏಕಾಂಗಿಯಾಗಿ ಮಾತನಾಡುವುದು, ನಿದ್ರೆಯಿಂದೆದ್ದು ಧಡ್ಡನೆ ಕೂತು ಸುತ್ತ ನೋಡಿ ತಮ್ಮ ಇಹಸ್ಥಿತಿ ಬಗ್ಗೆ ಅನ್ಯರೊಡನೆ ಆಡಿಕೊಳ್ಳದೆ ದುಃಖಿತ ರಾಗುವುದು, ವೈರಾಗ್ಯಭಾವ ತಾಳುವುದು, ಏಕಾಂತತೆ ಬಯಸುವುದು, ಕಿರಿಯರನ್ನು ದ್ವೇಷಿಸುವುದು, ಇವೆಲ್ಲಾ ತೀವ್ರಾವಸ್ಥೆ ಪಡೆಯುವುದುಂಟು. ಅವರಿಗೆ ಹೊತ್ತು ಹೊತ್ತಿಗೆ ಅನ್ನ, ನಿದ್ರೆ, ಉಡುಪಿನ ಬಗೆಗೆ ಕಾಳಜಿ ಅಥವಾ ಕೊರತೆ, ಯಾವುದೂ ಬಾಧಿಸುವುದಿಲ್ಲ !

ಹೀಗೆ ತೀವ್ರತಮ ಮರೆವಿನ ವ್ಯಕ್ತಿಗಳು ಗಂಡಿರಲಿ, ಹೆಣ್ಣಿರಲಿ ಪ್ರಾಪಂಚಿಕ ವಿದ್ಯಮಾನಗಳತ್ತ ಗಮನ – ಆಸಕ್ತಿ ಇರುವುದಿಲ್ಲ, ಅವರ ಈ ತೆರನಾದ (ತೀವ್ರ ಮರೆವಿನಿಂದಾಗಿ ಅವರು ತಾನು ಯಾರು ಎಂಬುದನ್ನೇ ಮರೆತುಬಿಡುವುದುಂಟು !) ಮರೆವಿನ ಇಂತಹ ತೀವ್ರತಮ ರೋಗಕ್ಕೆ 'ಆಲ್ ಸೈಮರ್ಸಿನ್' ಎಂದು ವೈದ್ಯ ವಿಜ್ಞಾನ ಹೆಸರಿಸಿದೆ. ನೆನಪು ಒಂದು ವಿಚಿತ್ರ ಸ್ಥಿತಿಯ ಮಾನಸಿಕ ಕ್ರಿಯೆಯಾಗಿದ್ದಕ್ಕೇ ಈ ಸ್ಮರಣೆಯು ಆತನ ದೈನಂದಿನ ಕೆಲಸವನ್ನು ರೂಢಿಗತ ಮಾಡಿಕೊಟ್ಟಿದೆ. ಈ ರೂಢಿಗತ ಕೆಲಸಗಳ ಮಧ್ಯೆಯೇ ಮಿದುಳಿನ ಯಾಂತ್ರಿಕ ಕ್ರಿಯೆ ಥಟ್ಟನೆ ಬ್ರೇಕ್ ಹಾಕುತ್ತ ಜ್ಞಾಪಕವನ್ನು ಮುಂದೂಡಿ ಆತನ ಚಟುವಟಿಕೆಗಳನ್ನು ಥಟ್ಟನೆ ಏರುಪೇರು ಮಾಡುತ್ತದೆ. ಅಷ್ಟೇ ವೇಗದಲ್ಲಿ ಮಿದುಳು 'ಇದಲ್ಲ... ಹೀಗೆ ಮಾಡು' – ಅಂತಾ ಪುನಃ ನಿರ್ದೇಶಿಸಿದಾಗ ನಾವು ಮಾಡಿದ ತಪ್ಪನ್ನು (ಮರೆವಿನ ಕೆಲಸವನ್ನು) ತಿದ್ದಿಕೊಂಡು ಸರಿಪಡಿಸಿಕೊಂಡು ತೃಪ್ತರಾಗುತ್ತೇವೆ. ನೆನಪಿನ ಮರುಚಿಂತನೆಗಳಿಂದಾಗಿ

ವ್ಯಕ್ತಿ ಯಾವ ಬಗೆಯ ಅಭಿಪ್ರಾಯದ ದಡಕ್ಕೆ ಹೋಗಿ ಮುಟ್ಟುತ್ತಾನೆಂದು ಊಹಿಸುವುದೂ ಕಷ್ಟವೇ ! ಆದರೆ ವ್ಯಕ್ತಿಯ ಏನೇ ಚಟುವಟಿಕೆಗಳಿಗೂ ಮನಸ್ಸು ನಿರ್ದೇಶಿಸಲೇಬೇಕು. ವ್ಯಕ್ತಿಗೆ ಈ ಮನಸ್ಸು ಎಷ್ಟೇ ಚಂಚಲಶೀಲದ್ದಾಗಿದ್ದರೂ ನಂಬಿಕೆ – ಅನುಭವಗಳ ದ್ರವ್ಯದ ಮೇಲೆ ಅವಲಂಬಿತಗೊಂಡಿದ್ದರಿಂದ ಪೂರ್ವಾನುಭವವೇ ವರ್ತಮಾನದ ಆಗುಹೋಗುಗಳ ಮೇಲೆ ಮತ್ತು ಭವಿಷ್ಯದಲ್ಲಾಗುವ ಫಲಾಫಲಗಳಿಗಾಗಿ ನೇರ ಪ್ರಭಾವ–ಪರಿಣಾಮ ಬೀರುತ್ತದೆ.

ಸ್ಮರಣೆಯ ದಿವ್ಯಕೃಪೆಯಿಂದಾಗಿಯೇ ಕಲೆಯ ಸಕಲ ಚಟುವಟಿಕೆಗಳಿಗೂ ಅದು ಸಾಹಿತ್ಯ, ಸಂಗೀತ, ಚಿತ್ರ, ಶಿಲ್ಪ, ಲಲಿತಕಲೆ, ನೃತ್ಯ ಯಾವುದಿದ್ದರೂ ಅದು ಅನುಭವಜನ್ಯದ್ದೇ ಪ್ರತಿಫಲವಾಗಿರುತ್ತದೆ. ಸಂಗೀತವನ್ನೇ ಉದಾಹರಣೆಗೆ ಎತ್ತಿಕೊಂಡರೆ ರಾಗಜ್ಞಾನವು ಆತನ/ಆಕೆಯ ನಡೆಸಿದ್ದ 'ರಿಯಾಜ್'ನಿಂದಾಗಿ ಧ್ವನಿ ಸಂಚಾರ, ಶ್ರುತಿ, ಲಯ, ತಾಳಗಳ ಏರಿಳಿತಗಳಲ್ಲಿ ಮೇಳೈಸುತ್ತಾ ನಡೆಸುವ ನಾದಮಾಧುರ್ಯದ ಹುಟ್ಟಿಗೆ ಕಾರಣಶಕ್ತಿ ಆದಾಗ ಮಾತ್ರ ಆ ಸಂಗೀತವು ಇಂಪಿನ ಕಂಪು ಬೀರಿ ಶ್ರೋತೃಗಳಿಗೆ ಸಂತಸವೃಷ್ಟಿಯಲ್ಲಿ ಮಿಂದಂತಹ ತೃಪ್ತ್ಯಾನುಭವ ಉಂಟಾಗುತ್ತದೆ. ಇಲ್ಲದಿದ್ದರೆ ಹಣ–ವೇಳೆ–ಶ್ರಮ ಎಲ್ಲವೂ ವ್ಯರ್ಥವೇ. ಇವೆಲ್ಲವೂ ಕಲಾವಿದನಿಗೆ ಆತನ ಪೂರ್ವಾನುಭವ ಚಿಮ್ಮಿಸಿಕೊಡುವುದು ಆತನ ಸ್ಮೃತಿಶಕ್ತಿ ಭಂಡಾರದಿಂದಾಗಿಯೇ ಸಾಧ್ಯವಾಗುವಂತಹ ಸಾರ್ಥಕದ ಕೆಲಸ ಎನಿಸಿಕೊಳ್ಳುತ್ತದೆ.

ಸ್ಮರಣಶಕ್ತಿಯು ವ್ಯಕ್ತಿಯ ಮನೋಬಲ ನೀಡುವ ಬುದ್ಧಿವಂತಿಕೆಯ ಮೊತ್ತದ ಪ್ರಮಾಣಬದ್ಧತೆಗೆ ಅನುಗುಣವಾಗಿ ಹೊಂದಿಕೊಂಡು ಕೆಲಸ ನಿರ್ವಹಿಸುತ್ತದೆ – ಬಾಹ್ಯ ಪ್ರಭಾವಕ್ಕೆ ಒಳಪಟ್ಟೇ. ಈ ಬುದ್ಧಿ ಕೌಶಲ್ಯಕ್ಕೆ ಬೆಲೆ ಕಟ್ಟಲಾಗುವುದಿಲ್ಲ. ಈ ಬಗೆಯ ಕಾರ್ಯನಿರ್ವಹಣೆಗಾಗಿಯೇ, ವಚನಕಾರ ಸರ್ವಜ್ಞನು,

*ವಿದ್ಯಕ್ಕೆ ಕಡೆಯಿಲ್ಲ ಬುದ್ಧಿಗೆ ಬೆಲೆಯಿಲ್ಲ,*
*ಛಿದ್ರಿಸುವವಗೆ ಗತಿಯಿಲ್ಲ ಮರಣಕ್ಕೆ*
*ಮದ್ದುಗಳಿಲ್ಲ ಸರ್ವಜ್ಞ*

– ಎಂತಂದು ಎಚ್ಚರಿಸುತ್ತಾನೆ.

ವ್ಯಕ್ತಿಯ ಅಸಾಧಾರಣ ಬುದ್ಧಿಶಕ್ತಿಯ ಪ್ರಯೋಗದಿಂದಾಗಿಯೇ ನಿರ್ಮಾಣಗೊಳ್ಳುವ ಮೌಲಿಕ ದೇಣಿಗೆಗಳು ಎಂದರೆ ಅಣೆಕಟ್ಟು, ತಂತ್ರಜ್ಞಾನ, ವಿಜ್ಞಾನ, ಯಂತ್ರ, ದೂರಸಂವೇದಿ, ರಾಕೆಟ್, ಭಾರೀ ಕಟ್ಟಡ, ಸೇತುವೆ ರಚನೆ, ಯಂತ್ರೋಪಕರಣಗಳ ನಿರ್ಮಾಣದ ಅನುಪಮ ಕ್ರಿಯಾಕೌಶಲ್ಯಕ್ಕೆ ಅಪ್ರತಿಭನಾದರೂ, ಬೆಲೆ ಕಟ್ಟಲಾಗದು ಎಂಬುದಕ್ಕೆ ಆತನ/ಆಕೆಯ ನೆನಪು ಸ್ಮರಿಸಿಕೊಡುವ ಅಗಾಧ ಬುದ್ಧಿಮತ್ತೆಯೇ ಕಾರಣವಾಗುತ್ತದೆ ಎಂದು ಅರ್ಥೈಸುತ್ತೇವೆ. ಹೀಗಾಗಿ ಸ್ಮರಣೆ ಅಥವಾ ನೆನಪಿನ ಶಕ್ತಿ ಮನುಕುಲಕ್ಕೆ, ಪ್ರಗತಿಪಥಕ್ಕೆ ನಿಜಕ್ಕೂ 'ದಾರಿದೀಪ'ದಂತೆ ಸದಾ ಉಪಕರಿಸುತ್ತದೆ.

**ಬಿ. ಪಿ. ಶಿವಾನಂದರಾವ್**
ನಂ. ೭೯೫, ಶಶಿಕಿರಣ, ೬ನೇ ಮುಖ್ಯರಸ್ತೆ
೧೨ನೇ ಅಡ್ಡರಸ್ತೆ, ಎಂ.ಸಿ.ಇ.ಸಿ.ಎಚ್.ಎಸ್. ಬಡಾವಣೆ
ಡಾ॥ ಶಿವರಾಮ ಕಾರಂತ ನಗರ, ಬೆಂಗಳೂರು – ೫೬೦ ೦೭೭

*(೪೬ನೇ ಪುಟದಿಂದ)*

ಆಯೋಗವು ಮೊದಲ ಐದು ವರ್ಷಗಳ ಅವಧಿಗೆ ಹೊಸದಾಗಿ ಪ್ರಾಧ್ಯಾಪಕರನ್ನು ನೇಮಿಸಿಕೊಳ್ಳಲು ಅನುಮತಿ ನೀಡಿದ್ದರೂ ರಾಜ್ಯ ಸರ್ಕಾರಗಳು ಅಡ್ಡಗಾಲು ಹಾಕಿದ ಉದಾಹರಣೆಗಳೂ ಸಾಕಷ್ಟಿವೆ.

**ಯಾರ್‍ಯಾರು ಎಷ್ಟೆಷ್ಟು ಶಿಕ್ಷಣ ಪಡೆಯುತ್ತಿದ್ದಾರೆ ?**

ಶೇ. ೬ರಷ್ಟು ಜನರಲ್ ಮೆರಿಟ್‌ನವರು ಉನ್ನತ ಶಿಕ್ಷಣ ಪಡೆಯುತ್ತಿದ್ದಾರೆ. ಶೇ. ೧೭.೭ರಷ್ಟು ಪರಿಶಿಷ್ಟ ಜಾತಿಯವರು, ಶೇ. ೬.೨ರಷ್ಟು ಪರಿಶಿಷ್ಟ ಪಂಗಡದವರು, ಶೇ. ೭.೬ರಷ್ಟು ಪ್ರವರ್ಗ–೧ಕ್ಕೆ ಸೇರಿದವರು, ಶೇ. ೧೬.೬ರಷ್ಟು ೨ಎ ವರ್ಗದವರು, ಶೇ. ೫ರಷ್ಟು ೨ಬಿ ವರ್ಗದವರು, ಶೇ. ೨೩.೩ರಷ್ಟು ೩ಎ ವರ್ಗದವರು, ಶೇ. ೧೭.೧ರಷ್ಟು ೩ಬಿ ವರ್ಗದವರು ರಾಜ್ಯದಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿದ್ದಾರೆ. ಶೇ. ೪೭.೫ರಷ್ಟು ಬಾಲಕರು ಹಾಗೂ ಶೇ. ೫೨.೪ರಷ್ಟು ಬಾಲಕಿಯರು ಪದವಿಪೂರ್ವ ಮತ್ತು ಪದವಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಭಾರತದಲ್ಲಿ ವಿದೇಶಿ ಶಿಕ್ಷಣ ಪದ್ಧತಿ ಬೇರುಬಿಟ್ಟಿದ್ದರಿಂದ ಸೆಮಿಸ್ಟರ್ ಮತ್ತು ಸಿಬಿಎಸ್‌ಇ ಪಠ್ಯಕ್ರಮವನ್ನು 'ಕೆಫ್ಟೇರಿಯಾ ಸಿಸ್ಟಮ್' ಎಂದು ಬಿಂಬಿಸಲಾಗಿದೆ. ಅಮೆರಿಕದ ಶಿಕ್ಷಣ ಪದ್ಧತಿಯಂತೆ ವಿದ್ಯಾರ್ಥಿಗಳು ಯಾವುದರ ಬಗ್ಗೆ ಆಸಕ್ತಿ ಇರುತ್ತೋ ಆ ಕಡೆ ಓದುವ ಪರಿಚಯಾತ್ಮಕ ನಿಲುವು ಹೊಂದಿದೆ. ಇದು 'ಮಲ್ಟಿ ಸಿಸ್ಟಮ್ ಬ್ಯುಸಿನೆಸ್' ಆಗಿದೆ ಎನ್ನುವುದು ಶಿಕ್ಷಣ ತಜ್ಞರ ಅಭಿಪ್ರಾಯ.

**ಸಾಫ್ಟ್‌ವೇರ್ ಕೂಲಿಗಳು**

ಭಾರತದಲ್ಲಿ ಅತಿ ಹೆಚ್ಚು ಸಾಫ್ಟ್‌ವೇರ್ ಕೂಲಿಗಳು ಸಿಗುತ್ತಾರೆ. ಇಷ್ಟು ಕೆಲಸ ಮಾಡಿ ಕೂಲಿ ತೆಗೆದುಕೊ, ಸಾಫ್ಟ್‌ವೇರ್ ರೆಡಿ ಮಾಡಿ, ಹಣವನ್ನು ತೆಗೆದುಕೊ ಎಂಬ ಕಟ್ಟಪ್ಪಣೆ. ಇಲ್ಲಿ ಯಾವ ವ್ಯಕ್ತಿತ್ವ ವಿಕಸನವೂ ಆಗದೆ ಕೇವಲ ಔದ್ಯೋಗಿಕ ಉತ್ಪನ್ನಕ್ಕಾಗಿ, ಲಾಭಕ್ಕಾಗಿ ನೀಡುವ ಶಿಕ್ಷಣವಾಗುತ್ತದೆ. ಆದರೆ, ಯಾವ ಶಿಕ್ಷಣದ ಗುಣಮಟ್ಟವೂ ಇಲ್ಲಿ ಸಿಗದು. ಇಂದು ವ್ಯಕ್ತಿತ್ವ ವಿಕಸನ, ಪ್ರಜಾಪ್ರಭುತ್ವ ನಿಲುವು, ಸಾಮಾಜಿಕ ನಿಲುವು ಬೇಕೇ ಹೊರತು ಹೊರಗಿನ ಒತ್ತಡಕ್ಕೆ ವಿಶ್ವವಿದ್ಯಾನಿಲಯಗಳು ಬೇಕಾಗಿಲ್ಲ ಎನ್ನುವ ವಾದ ಶಿಕ್ಷಣ ಪರಿಚಾರಕರದ್ದಾಗಿದೆ.

ಸಾಮಾಜಿಕ, ನೈತಿಕ ಪ್ರಜ್ಞೆ ಬೆಳೆಸುವ ವಿಶ್ವವಿದ್ಯಾನಿಲಯಗಳು ಬೇಕು. ಕೇವಲ ವ್ಯವಹಾರಕ್ಕೆ, ಲಾಭಕ್ಕೆ ವಿಶ್ವವಿದ್ಯಾನಿಲಯಗಳು ರೂಪುಗೊಳ್ಳಬಾರದು. ಮಾನವೀಯ ಮೌಲ್ಯ ಎತ್ತಿ ಹಿಡಿಯುವ ಶಿಕ್ಷಣ ಪದ್ಧತಿ ವಿಶ್ವವಿದ್ಯಾನಿಲಯಗಳಲ್ಲಿ ಬೇಕು. ಯುನಿವರ್ಸಿಟಿಯಿಂದ ಯೂನಿವರ್ಸಲ್ ನಾಲೆಡ್ಜ್‌ನಂತಹ ಬೇಕು–ಬೇಡಗಳ ಮಧ್ಯೆ ವಿದ್ಯಾರ್ಥಿಗಳು ಮೈದಳವಿಕೊಂಡಿದ್ದಾರೆ. ಕೇವಲ ಸಂಬಳಕ್ಕಾಗಿ ಹಾತೊರೆಯುವ ಶಿಕ್ಷಕರಿಂದ ಉನ್ನತಮಟ್ಟದ ಶಿಕ್ಷಣವನ್ನು ನಿರೀಕ್ಷಿಸಲಾಗದು. ಮನಸಾರೆ ಪಾಠ ಮಾಡಿದಾಗ ಮಾತ್ರ ಗುಣಮಟ್ಟದ ಶಿಕ್ಷಣಕ್ಕೆ ಅರ್ಥ ಬರಬಹುದು.

**ಮೀಸಲಾತಿ**

ಶಿಕ್ಷಣ ಕ್ರಮದಲ್ಲಿ ಮೀಸಲಾತಿಯನ್ನು ಗಮನಿಸಿದರೆ, ಶೇ. ೫೦ರಷ್ಟು ಜನರಲ್ ಮೆರಿಟ್‌ನವರು ಮೀಸಲಾತಿಯನ್ನು ಪಡೆದರೆ, ಉಳಿದವರು ಶೇ. ೫೦ರಷ್ಟು ಮೀಸಲಾತಿ ಪಡೆದಿರುತ್ತಾರೆ. ಶೇ. ೬ರಷ್ಟು ಜನರು ಮಾತ್ರ ಉನ್ನತ ಶಿಕ್ಷಣವನ್ನು ಪಡೆದಿದ್ದಾರೆ. ಅತ್ಯಂತ ಕಡಿಮೆ ಅಂದರೆ ಶೇ. ೯೫ರಷ್ಟು ಜನ ಮುಸ್ಲಿಂ ಸಮುದಾಯದವರು ಶಿಕ್ಷಣ ಪಡೆಯದೆ, ಶಿಕ್ಷಣಕ್ಕೆ ಒಳಗಾಗದಿರುವುದು ದುರಂತಮಯ ವಿಷಯ. ಮುಸ್ಲಿಂ ಸಮುದಾಯದವರಿಗೆ ಶಿಕ್ಷಣ ನೀಡಿ, ಅದರ ಮೌಲ್ಯವನ್ನು ಕಾಪಾಡುವ ಹಿನ್ನೆಲೆಯಲ್ಲಿ ಅವರನ್ನು ಬೆಳೆಸುವ ನಿಟ್ಟಿನಲ್ಲಿ ಶಿಕ್ಷಣ ಕೊಡಬೇಕು ಎನ್ನುವುದು ಮುಸ್ಲಿಂಪರರ ವಾದ. ದೇಶದಲ್ಲಿ ಸಾಚಾರ್ ಸಮಿತಿಯ ವರದಿಯೂ ಇದನ್ನೇ ಹೇಳಿದೆ.

ಹೊಟ್ಟೆಪಾಡಿಗಾಗಿ ಉದ್ಯೋಗ ಬೇಕು. ಉದ್ಯೋಗಕ್ಕಾಗಿ ಶಿಕ್ಷಣ ಬೇಕು. ಶಿಕ್ಷಣವೇ ಬದುಕಿಗೆ ಅಗತ್ಯವಾದ್ದರಿಂದ ಮುಸ್ಲಿಮರು ಶಿಕ್ಷಣ ಪಡೆಯುವುದಕ್ಕೆ ಪ್ರೇರೇಪಿಸುವ ವಾತಾವರಣವನ್ನು ವಿಶ್ವವಿದ್ಯಾನಿಲಯಗಳು ನಿರ್ಮಿಸಬೇಕು. ಇಂದಿನ ವಿಶ್ವವಿದ್ಯಾನಿಲಯಗಳಿಂದ, ಉನ್ನತ ಶಿಕ್ಷಣದಿಂದ ಗುಣಮಟ್ಟದ ಶಿಕ್ಷಣ ದೊರೆಯುತ್ತಿದೆಯೇ ಎಂಬ ಅನುಮಾನ ಮೂಡುತ್ತಿರುವುದು ಸಹಜವೇ ಆದರೂ ವಿದೇಶಿ ವಿಶ್ವವಿದ್ಯಾನಿಲಯಗಳ ಕುಟಿಲ ನೀತಿಗೆ ಭಾರತದ ವಿಶ್ವವಿದ್ಯಾನಿಲಯಗಳು ಜೋತುಬಿದ್ದರೆ ಗುಣಮಟ್ಟದ ಶಿಕ್ಷಣವನ್ನು ಎಷ್ಟರಮಟ್ಟಿಗೆ ನಿರೀಕ್ಷಿಸಲು ಸಾಧ್ಯ ? ಡೈರೆಕ್ಟೆಡ್ ವಿಶ್ವವಿದ್ಯಾನಿಲಯಗಳು ಸ್ಥಾಪನೆಯಾದರೆ ಅವುಗಳು ವ್ಯಕ್ತಿಗತವಾಗಿ ಸಂಬಂಧಪಟ್ಟವುಗಳಾಗುತ್ತವೆಯೇ ವಿನಾ ಯಾವುದೇ ವ್ಯಕ್ತಿತ್ವ ವಿಕಸನಕ್ಕೆ ದಾರಿ ಮಾಡಿಕೊಡದು. ದುಡಿಯಲು ಅರ್ಹರಾಗಿರುವ ಯುವಜನರನ್ನು ರೂಪಿಸುವಂತಹ ವಿಶ್ವವಿದ್ಯಾನಿಲಯಗಳು ಸಮಾಜದ ಸವಾಲುಗಳನ್ನು ಎದುರಿಸಬೇಕಾಗುತ್ತವೆ. ಮಳೆಗಾಲದಲ್ಲಿ ನಾಯಿಕೊಡೆಗಳು ಹುಟ್ಟುವ ರೀತಿಯಲ್ಲಿ ಶೈಕ್ಷಣಿಕ ವರ್ಷದಲ್ಲಿ ವಿಶ್ವವಿದ್ಯಾನಿಲಯಗಳು ಜನ್ಮತಳೆಯುತ್ತಿರುವುದನ್ನು ಗಮನಿಸಿದರೆ ಶಿಕ್ಷಣ ವ್ಯವಸ್ಥೆ ಎಲ್ಲಿ ಅಡಗುತ್ತದೋ ಎಂಬ ಭಯ ಮನೆಮಾಡಿದೆ.

**ಸಂಗಮನಾಥ ರೇವತಗಾಂವ**
ಕೃತಿಲೇಖ, ಪ್ಲಾಟ್ ಸಂಖ್ಯೆ : ೫೭, ಬಿದ್ದಾಪುರ ಕಾಲೋನಿ, ಗುಲಬರ್ಗಾ – ೫೮೫ ೧೦೩



# ಅವ್ವ

'ಅವ್ವ' ಎಂದರೆ ತಾಯಿ, ಜನನಿ, ಮಾತೆ, ಜನ್ಮದಾತೆ, ಅಂಬೆ, ಅಬ್ಬೆ, ಅಮ್ಮಾ, ಹೆತ್ತವಳು, ಹಡೆದವಳು, ಎಂದರ್ಥ. ಅವ್ವಳನ್ನು ಹಿಂದಿಯಲ್ಲಿ 'ಮಾ' ಎಂದು ಕರೆದರೆ, ಮರಾಠಿಯಲ್ಲಿ 'ಆಯಿ' ಎಂದು ಕರೆಯುತ್ತಾರೆ. ತೆಲುಗಿನಲ್ಲಿ ಅವಳು 'ತಲ್ಲಿ' ಎಂಬ ಹೆಸರಿನಿಂದ ಕರೆಸಿಕೊಂಡರೆ ಇಂಗ್ಲಿಷ್‌ನಲ್ಲಿ 'ಮದರ್' ಎಂಬ ಹೆಸರಿನಿಂದ ಕರೆಸಿಕೊಳ್ಳುತ್ತಾಳೆ. ಇತ್ತೀಚೆಗೆ ನಮ್ಮ ಮಕ್ಕಳು ಇಂಗ್ಲಿಷ್‌ನ ಮೋಡಿಗೆ ಒಳಗಾಗಿ ಅವಳನ್ನು 'ಮಮ್ಮಿ' ಎಂದು ಕರೆಯುತ್ತಿವೆ.

'ಅವ್ವ' ಎಂಬ ಶಬ್ದ ಕೇವಲ ಎರಡೇ ಅಕ್ಷರಗಳಿಂದ ಕೂಡಿದೆ. ಆದರೆ ಅದಕ್ಕಿರುವ ತೂಕ ತುಂಬ ಅಪಾರ. ಅದರಷ್ಟು ತೂಕ ಹೊಂದಿರುವ ಪದಗಳು ಕನ್ನಡವೇಕೆ, ವಿಶ್ವದ ಪದಕೋಶದಲ್ಲಿಯೇ ಸಿಗುವುದಿಲ್ಲ. 'ಶಿವ' – ದೇವರು, ಪರಮಾತ್ಮ ಎಂಬ ಶಬ್ದಗಳಿಗೂ ಅಂತಹ ತೂಕವಿಲ್ಲ. ಏಕೆಂದರೆ ಆ ಹೆಸರಿನಿಂದ ಕರೆಸಿಕೊಳ್ಳುವ ವ್ಯಕ್ತಿಯ ವ್ಯಕ್ತಿತ್ವವೇ ಅಂಥದ್ದು. ಯಾರಿಗೂ ಸರಿದೂಗದಂಥ ಅತ್ಯಂತ ಘನವಾದ ವ್ಯಕ್ತಿತ್ವ ಅದು. ಅಂತೆಯೇ ಬಸವಣ್ಣನವರು ದೇವರೊಂದಿಗೆ ತಾಯಿಯನ್ನು ಹೋಲಿಸಲಿಲ್ಲ. 'ತಾಯಿ ನೀನು' ಎಂದು ದೇವರನ್ನೇ ತಾಯಿಯೊಂದಿಗೆ ಹೋಲಿಸಿದ್ದಾರೆ. ಭಾಸ ಕವಿ 'ಮಾತಾ ಕಿಲ ಮನುಷ್ಯಾಣಾಂ ದೇವತಾನಾಂ ಚ ದೈವತಂ' ಎಂದರೆ, 'ತಾಯಿ ಮಾನವರಿಗೆ ದೇವರಿಗಿಂತ ಮಿಗಿಲಾದ ದೇವರು' ಎಂದಿದ್ದರೆ ಕವಿ ದಿನಕರ ದೇಸಾಯಿ, 'ತಾಯಿ ದೇವರಿಗಿಂತಲೂ ಮೇಲು। ದೇವರ ಮೊಲೆಯಲ್ಲಿ ದೊರಕುವುದೇ ಹಾಲು?' ಎನ್ನುತ್ತಾರೆ. ಇದೇ ಜಾಡಿನಲ್ಲಿ ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪನವರು :

*ತಾಯೊಲವೆ ತಾಯೊಲವು ಈ ಲೋಕದೊಳಗೆ*
*ಕಡಲಿಗೆ ಕಡಲಲ್ಲದುಂಟೆ ಹೋಲಿಕೆಗೆ*

– ಎಂದು ಅಭಿಪ್ರಾಯಪಟ್ಟಿದ್ದರೆ, ಜಾನಪದ ಗರತಿಯೋರ್ವಳು :

*ಯಾರ ಇದ್ದರೂ ನನ್ನ ತಾಯವ್ವನೋಲರ।*
*ಸಾವಿರ ಕೊಳ್ಳಿ ಒಲಿಯಾಗ ಇದ್ದರ।*
*ಜ್ಯೋತಿ ನಿನ್ಯಾರ ಹೋಲರ।*

– ಎಂದು ಅಭಿಪ್ರಾಯಪಟ್ಟಿದ್ದಾಳೆ. ನದಿ, ಹಳ್ಳ, ಕೊಳ್ಳಗಳು ಹಲವಾರು. ಆದರೆ ಅವೆಷ್ಟಿದ್ದರೂ ಸಮುದ್ರಕ್ಕೆ ಸಮ ಬರುತ್ತವೆಯೇ? ಖಂಡಿತ ಸಮ ಬರುವುದಿಲ್ಲ. ಅದೇ ರೀತಿ ಒಲೆಯಲ್ಲಿ ಕೊಳ್ಳಿಗಳು ನೂರು–ಸಾವಿರ–ಎಷ್ಟಿದ್ದರೂ ಅವು ಜ್ಯೋತಿಯ ಎತ್ತರಕ್ಕೆ ನಿಲ್ಲಲಾರವು. ಅಂತೆಯೇ ತಾಯಿ. ಅವಳನ್ನು ಯಾರೊಂದಿಗೂ ಹೋಲಿಸಲು ಸಾಧ್ಯವಿಲ್ಲ. ಆಕೆಯಲ್ಲಿರುವ ಜೀವನಪ್ರೀತಿ, ಜೀವನೋತ್ಸಾಹ, ಕಾರ್ಯತತ್ಪರತೆ ಬೇರೆ ಯಾರಲ್ಲೂ ಸಿಗುವುದಿಲ್ಲ. ತ್ಯಾಗ, ಸಹನೆ, ಅಂತಃಕರಣ, ಪ್ರೀತಿ–ವಾತ್ಸಲ್ಯ, ನಿಸ್ವಾರ್ಥ, ನಿಸ್ಪೃಹತೆ–ಸರಳತೆ ಮೊದಲಾದ ಮಾನವೀಯ ಆದರ್ಶಗಳ ಒಟ್ಟು ಮೊತ್ತ ಅವಳು.

ಅವ್ವಳ ಕಾರ್ಯ ಮಗುವನ್ನು ಹಡೆಯುವುದು, ಸಂಗೋಪನೆ ಮಾಡುವುದಷ್ಟಕ್ಕೇ ಸೀಮಿತವಾಗಿಲ್ಲ. ಇಡೀ ವಿಶ್ವಕ್ಕೆ ರೂಪಕೊಡುವ ಶಕ್ತಿ ಅವಳಿಗಿದೆ. ದೇವರು, ಗುರು ಈ ಇಬ್ಬರನ್ನೂ ನಾವು ಅವಳೊಬ್ಬಳಲ್ಲಿಯೇ ಕಾಣುತ್ತೇವೆ. ಅಂತೆಯೇ ಅವಳ ಬಗ್ಗೆ –

'ತೊಟ್ಟಿಲ ತೂಗುವ ಕೈ ಜಗತ್ತನ್ನೇ ಆಳುತ್ತದೆ' ಎಂಬಂಥ ಸೂಕ್ತಿಗಳೇ ಅಲ್ಲದೆ,

*ಮನೆಯೆ ಮೊದಲ ಪಾಠಶಾಲೆ*
*ಜನನಿ ತಾನೆ ಮೊದಲ ಗುರುವು*
*ಜನನಿಯಿಂದ ಪಾಠ ಕಲಿತ ಜನರೆ ಧನ್ಯರು*
*ಘನತೆಯಿಂದಲವರು ಬಾಳ್ವರೆನುತ ನುಡಿವರು*

– ಎಂಬಂಥ ಕವಿತೆಗಳೂ ಹುಟ್ಟಿಕೊಂಡಿವೆ.

ತಾಯಿಯು ರಕ್ತ, ಮಾಂಸ ಮಾತ್ರವಲ್ಲ ತನ್ನ ಇಡೀ ವ್ಯಕ್ತಿತ್ವವನ್ನೇ ನಮಗೆ ಎರಕಹೊಯ್ದು ಕೊಡುತ್ತಾಳೆ. ಸಮಾಜದಲ್ಲಿ ಘನತೆ, ಗೌರವ ಸಿಗುವಂಥ ಬಾಳು ನಮ್ಮದಾಗಬೇಕೆಂಬ ಘನ ಉದ್ದೇಶ ಅವಳದ್ದು. ಆ ನಿಟ್ಟಿನಲ್ಲಿಯೇ ನಮ್ಮ ಜೀವನದಲ್ಲಿ ಅವಳ ಬೋಧನೆ ನಡೆದಿರುತ್ತದೆ. ಉದಾಹರಣೆಗೆ, ವಿಜಯನಗರದ ಪ್ರೌಢ ಪ್ರತಾಪದೇವ ಅರಸನ ಮಂತ್ರಿ ಲಕ್ಷ್ಮೀಧರಾಮಾತ್ಯನು ಮಗುವಾಗಿದ್ದಾಗ ಅವನ ತಾಯಿ ಅವನಿಗೆ ಹಾಲೆರೆಯುತ್ತ ಅದರೊಂದಿಗೆ ಉದಾತ್ತ ವಿಚಾರದ ಸಂಸ್ಕೃತಿಯನ್ನು ರಕ್ತಗತವಾಗುವಂತೆ ಧಾರೆ ಎರೆದಳೆಂಬ ಸಂಗತಿಯನ್ನು ಹೇಳುವ ಶಾಸನ ಪದ್ಯವೊಂದನ್ನು ನಾವಿಲ್ಲಿ ಗಮನಿಸಬಹುದು :

*ಕೆಱೆಯಂ ಕಟ್ಟಿಸು ಬಾವಿಯಂ ಸವಸು ದೇವಾಗಾರಮಂ ಮಾಡಿಸ*
*ಜ್ಜೆಱೆಯೊಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕಯ್ ನಂಬಿದ*
*ರ್ಗಱೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾ*
*ಯೆಱೆದಳ್ದಾಲೆಱೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯಾನಾ*

– ಕೆರೆಯನ್ನು ಕಟ್ಟಿಸು, ಬಾವಿಯನ್ನು ತೋಡಿಸು, ದೇವಾಲಯಗಳನ್ನು ನಿರ್ಮಿಸು, ಅನಾಥರನ್ನು ಬಿಡಿಸು, ಸ್ನೇಹಿತರೊಂದಿಗೆ ಸಹಕರಿಸು, ನಂಬಿದವರಿಗೆ ಆಶ್ರಯ ನೀಡು, ಸತ್ಪುರುಷನನ್ನು ರಕ್ಷಿಸು ಎಂದು ಮುಂತಾಗಿ ಲಕ್ಷ್ಮೀಧರಾಮಾತ್ಯನಿಗೆ ಅವನ ತಾಯಿ ನೀಡಿದ ಈ ಬೋಧನೆ ಅದೆಷ್ಟು ಉದಾತ್ತವಾಗಿದೆಯಲ್ಲವೆ? ಛತ್ರಪತಿ ಶಿವಾಜಿಯ ತಾಯಿ ಜೀಜಾಬಾಯಿ ಕೂಡ ಶಿವಾಜಿಗೆ ಇಂತಹ ಪಾಠವನ್ನೇ ಕಲಿಸಿದ್ದಳು. ಅಂತೆಯೇ ಶಿವಾಜಿ ದುಷ್ಟ ಆಳ್ವಿಕೆಯನ್ನು ಸದೆಬಡೆದು ಸುಖೀ ಸಾಮ್ರಾಜ್ಯವನ್ನು ಕಟ್ಟಿದ. ಹೀಗೆ ತಾಯಿಯು ಮಕ್ಕಳ ಮೂಲಕ ದೇಶ ಆಳುವುದಷ್ಟೇ ಅಲ್ಲ ಅದಕ್ಕೆ ಉದಾತ್ತತೆಯ, ಸುಭದ್ರತೆಯ ನೆಲೆಗಟ್ಟನ್ನು ಒದಗಿಸಿ ಅದನ್ನು ಸುಂದರವಾಗಿ ರೂಪುಗೊಳಿಸುವ ಘನವಾದ ಸಂಕಲ್ಪ ಹೊಂದಿರುತ್ತಾಳೆ.

'ಹೆಣ್ಣು' ಎಂಬ ವ್ಯಕ್ತಿಗೆ ಸಾವಿದೆ. ಆದರೆ ಅವಳೊಳಗಿನ ಅವ್ವತನಕ್ಕೆ ಸಾವಿಲ್ಲ. ಅದು ಅಮರ. ಅಂತೆಯೇ ಅವ್ವ ಜೀವಂತ ಇದ್ದವರು ಮಾತ್ರವಲ್ಲ ಕಳೆದುಕೊಂಡವರು ಸಹ ಅವಳನ್ನು ತಮ್ಮ ಜೀವನದ ಪ್ರತಿ ಹೆಜ್ಜೆಯಲ್ಲೂ ನೆನೆಸುತ್ತಾರೆ. ತಮಗೆ ಬೇನೆ–ಬೇಸರಿಕೆ ಯಾವುದೇ ಬರಲಿ, ಅವುಗಳ ಪರಿಹಾರಕ್ಕೆ ಬೇರೆ ಯಾರನ್ನೂ ಆಹ್ವಾನಿಸುವುದಿಲ್ಲ. ಆ ದೇವರನ್ನು ಕೂಡ ಕರೆಯುವುದಿಲ್ಲ. ಅವಳನ್ನೇ ಕರೆಯುತ್ತಾರೆ. ಒಂದು ಸಣ್ಣ ಇರುವೆ ಕಚ್ಚಿದರೂ, ಕಾಲಿಗೆ ಕಲ್ಲು ಬಡಿದರೂ, ಅಷ್ಟೇ ಏಕೆ ಸೀನು, ಆಕಳಿಕೆ ಬಂದರೂ ಥಟ್ಟನೆ ಅವ್ವಳ ನೆನಪು ಬರುತ್ತದೆ. 'ಅವ್ವ' ಎಂಬ ಶಬ್ದ ನಮ್ಮ ಒಡಲಾಳದಿಂದ ನಮಗೆ ಅರಿವಿಲ್ಲದಂತೆ ಹೊರಬರುತ್ತದೆ.

ಅವ್ವತನಕ್ಕೆ ತುಂಬ ಶಕ್ತಿ ಇದೆ. ಅದರಲ್ಲಿ ಜೀವ ಸಂಜೀವಿನಿ ಇದೆ. ಅಲ್ಲಿ ರೋಗ–ರುಜಿನಗಳಿಗೆ ದಿವ್ಯ ಔಷಧವಿದೆ, ಧೈರ್ಯವಿದೆ, ಪ್ರೀತಿ ಇದೆ, ರಕ್ಷಣೆ ಇದೆ; ಸಾಂತ್ವನ ಇದೆ; ಸುಖ–ಶಾಂತಿ–ನೆಮ್ಮದಿ ಇದೆ. ಅಂತೆಯೇ 'ಜನನಿ ಜನ್ಮಭೂಮಿ ಸ್ವರ್ಗಕ್ಕಿಂತ ಮೇಲು' ಎನ್ನುವುದು. ಆದರೆ ಇಂದು ಇಂಥ ಸ್ವರ್ಗಾದಪಿ ತಾಯಿಯ ಪರಿಸ್ಥಿತಿ ತುಂಬ ಗಂಭೀರವಾಗಿದೆ. ಇದಕ್ಕೆ ವೃದ್ಧಾಶ್ರಮಗಳು ಹುಟ್ಟಿಕೊಳ್ಳುತ್ತಿರುವುದೇ ದಟ್ಟ ಸಾಕ್ಷಿಯಾಗಿದೆ. ಅದೆಷ್ಟೋ ಮಕ್ಕಳು ಅವಳನ್ನು ನೋಡಿಕೊಳ್ಳುವ ರೀತಿಯನ್ನು ನೋಡಿದರೆ ಅಯ್ಯೋ ಪಾಪದ ಜನವೇ! ಎಂದೆನಿಸುತ್ತದೆ.

**ಡಾ॥ ಗುರುಲಿಂಗಪ್ಪ ಧಬಾಲೆ**
ಮುಖ್ಯಸ್ಥರು, ಕನ್ನಡ ವಿಭಾಗ, ಸಿ. ಬಿ. ಖೇಡಗಿ
ಬಸವೇಶ್ವರ ಮಹಾವಿದ್ಯಾಲಯ, ಅಕ್ಕಲಕೋಟ, ಸೋಲಾಪುರ ಜಿಲ್ಲೆ

# ಥಾಯ್‌ಲೆಂಡ್ ಮತ್ತೆ ಮಿಲಿಟರಿ ತೆಕ್ಕೆಗೆ



*ಯಿಂಗ್ಲುಕ್ ಶಿನಾವತ್ರ*

**ಥಾ**ಯ್‌ಲೆಂಡ್ ಆಗ್ನೇಯ ಏಶಿಯಾದ ಒಂದು ದೇಶ. ಈಚಿನ ದಿನಗಳಲ್ಲಿ ಸಾಕಷ್ಟು ಸುದ್ದಿ ಮಾಡಿತು. ಹಿಂದೂ ಮಹಾಸಾಗರ ತೀರದಲ್ಲಿರುವ ಈ ದೇಶ ಸುಮಾರು ೫೭೭ ಲಕ್ಷ ಜನಸಂಖ್ಯೆ ಹೊಂದಿದ್ದು ಆಯಕಟ್ಟಿನ ಸ್ಥಳದಲ್ಲಿದೆ. ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳ ಪರಮ ಮಿತ್ರನಾಗಿರುವ ಥಾಯ್‌ಲೆಂಡ್ ಅಮೆರಿಕಕ್ಕೆ ಸೇನಾ ನೆಲೆಯನ್ನೂ ಒದಗಿಸಿದೆ. ವಿಯೆಟ್ನಾಮ್ ಯುದ್ಧದ ಕಾಲದಲ್ಲಿ ಅಮೆರಿಕಕ್ಕೆ ಎಲ್ಲ ಬಗೆಯಲ್ಲೂ ಸಹಕಾರ ನೀಡಿದ ದೇಶಗಳಲ್ಲಿ ಒಂದು. ವಿಶೇಷ ಎಂದರೆ ಈ ದೇಶ ಯೂರೋಪಿಯನ್ನರ ವಸಾಹತಾಗದೆ ಸ್ವತಂತ್ರ ರಾಷ್ಟ್ರವಾಗಿದ್ದುದು. ಥಾಯ್‌ಲೆಂಡ್‌ನಲ್ಲಿ ನಿರಂಕುಶಾಡಳಿತೆ ಅಂತ್ಯಗೊಂಡಿದ್ದು ೧೯೩೨ರಲ್ಲಿ. ಆದರೂ ದೇಶದ ಆಗು-ಹೋಗುಗಳಲ್ಲಿ ರಾಜಮನೆತನದ ಕೈವಾಡವೇ ಅಧಿಕ. ೧೯೪೨ರಲ್ಲಿ ಜಪಾನೀಯರ ಆಕ್ರಮಣಕ್ಕೀಡಾದ ಥಾಯ್‌ಲೆಂಡ್ ಬಹುಬೇಗ ಅದರ ಮಿತ್ರರಾಷ್ಟ್ರವಾಗಿ ಯುದ್ಧದಲ್ಲಿ ಭಾಗವಹಿಸಿತು. ಯುದ್ಧ ಮುಗಿದ ಮೇಲೆ ಪಶ್ಚಿಮ ರಾಷ್ಟ್ರಗಳ ಬಾಲಂಗೋಚಿಯಾಯಿತು. ಪ್ರಜಾಪ್ರಭುತ್ವ ರಾಷ್ಟ್ರವಾಗಿದ್ದರೂ ಮಿಲಿಟರಿ ಪ್ರಾಬಲ್ಯವೇ ಪ್ರಾಮುಖ್ಯ ಈ ದೇಶದಲ್ಲಿ. ಹಾಗಾಗಿ ಚುನಾಯಿತ ಸರಕಾರ ಮತ್ತು ಸೇನಾಡಳಿತ ಇಲ್ಲಿ ಅಪರೂಪವೇನಲ್ಲ.

ಶಿನಾವತ್ರ ಕುಟುಂಬದವರೇ ಸುಮಾರು ಒಂದು ದಶಕಕ್ಕೂ ಹೆಚ್ಚು ಕಾಲದಿಂದ ಆಳ್ವಿಕೆ ನಡೆಸುತ್ತ ಬಂದಿದ್ದಾರೆ. ಚುನಾಯಿತ ಸರಕಾರವನ್ನು ಪಲ್ಲಟಗೊಳಿಸುವುದರಲ್ಲಿ ನ್ಯಾಯಾಲಯಗಳು ಹಾಗೂ ಮಿಲಿಟರಿ ಎರಡೂ ಶಾಮೀಲಾಗಿರುವುದು ಥಾಯ್‌ಲೆಂಡಿನ ವಿಶಿಷ್ಟತೆ. ಈ ಭೂಭಾಗದಲ್ಲಿ ಇಂಥ ಪ್ರಕರಣಗಳು ಹೊಸದೇನಲ್ಲ. ೨೦೧೧ರಲ್ಲಿ ಪ್ರಜಾಪ್ರಭುತ್ವ ರೀತಿಯಲ್ಲಿ ಆಯ್ಕೆಗೊಂಡ ಪ್ರಧಾನಿ ಯಿಂಗ್ಲುಕ್ ಶಿನಾವತ್ರ ಸರಕಾರವನ್ನು ಪದಚ್ಯುತಗೊಳಿಸಿ ಕಳೆದ ಮೇ ತಿಂಗಳ ೨೦ರಂದು ಸೇನೆ ಅಧಿಕಾರ ವಹಿಸಿಕೊಂಡಿತು. ಜನರ ಪ್ರತಿಭಟನೆ ಹತ್ತಿಕ್ಕಲು ದೇಶದಲ್ಲಿ ತುರ್ತು ಪರಿಸ್ಥಿತಿ ಘೋಷಣೆ ಮಾಡಿ ಎಲ್ಲೆಲ್ಲೂ ಮಿಲಿಟರಿ ಪಹರೆಯನ್ನು ಇರಿಸಲಾಗಿದೆ. ಅಧಿಕಾರ ವಹಿಸಿಕೊಂಡಮೇಲೆ ಆಕೆ ತನಗೆ ಬೇಕಾದವನನ್ನು ರಾಷ್ಟ್ರೀಯ ಭದ್ರತಾ ಸಲಹೆಗಾರನನ್ನಾಗಿ ನೇಮಕ ಮಾಡಿಕೊಂಡದ್ದು ಮಹಾಪರಾಧವಾಯಿತು. ಈ ಪ್ರಕರಣದ ಕುರಿತು ವಿಚಾರಣೆ ನಡೆಸಿದ ನ್ಯಾಯಾಲಯದ ಸಂವಿಧಾನ ಪೀಠ ಮೇ ೭ರಂದು ಪ್ರಧಾನಿ ಶಿನಾವತ್ರ ಮತ್ತು ಅವರ ಸಂಪುಟದ ಒಂಬತ್ತು ಸಚಿವರನ್ನು ಅಧಿಕಾರದ ದುರುಪಯೋಗದ ಆಪಾದನೆಯ ಮೇಲೆ ಅಧಿಕಾರ ತ್ಯಜಿಸುವಂತೆ ಆಜ್ಞೆ ನೀಡಿತು. ನ್ಯಾಯಾಲಯದ ಈ ಆಜ್ಞೆಯನ್ನು ವಿರೋಧಿಸಿದ ಸರಕಾರವನ್ನು ಪದಚ್ಯುತಗೊಳಿಸಲು ಸೇನೆ ಪ್ರವೇಶಿಸಿತು. ಜನತೆ ನಡೆಸಿದ ಪ್ರತಿಭಟನೆ ಹಾಗೂ ಸರಕಾರದ ಪರ ಮತ್ತು ವಿರೋಧಿಗಳ ಮಧ್ಯೆ ಘರ್ಷಣೆ 'ಮಾರ್ಷಲ್ ಲಾ' ಜಾರಿಗೆ ನೆಪವಾಯಿತು. ಥಾಯ್‌ಲೆಂಡಿನ ಕಾನೂನು ಪರಿಣತರು ನ್ಯಾಯಾಲಯದ ಕ್ರಮವನ್ನು 'ನ್ಯಾಯಾಲಯದ ಸರ್ವಾಧಿಕಾರ' ಎಂದು ಕರೆದು 'ನ್ಯಾಯಾಧೀಶರ ಆಳ್ವಿಕೆಯ ಸರಕಾರ' ಎಂದು ಖಂಡಿಸಿದ್ದಾರೆ. ಸಂವಿಧಾನ ಪೀಠ ತನ್ನ ತೀರ್ಪಿಗೆ ನೀಡಿರುವ ಸಮರ್ಥನೆ ವಿಚಿತ್ರವಾಗಿದೆ. ರಾಷ್ಟ್ರೀಯ ಭದ್ರತಾ ಸಲಹೆಗಾರನ ನೇಮಕ ಮಾಡಿಕೊಳ್ಳಲು ಪ್ರಧಾನಿಗೆ ಹಕ್ಕು ಇದ್ದಾಗ್ಯೂ, ಇದರ ಹಿಂದೆ ಏನೋ ಪಿತೂರಿ ಇದ್ದಂತೆ ತೋರುತ್ತದೆ ಎಂದು ಹೇಳಿರುವುದು ಹಾಸ್ಯಾಸ್ಪದ.



ಸೀಯಾರ್ಕೆ

ಥಾಯ್‌ಲೆಂಡ್ ನ್ಯಾಯಾಲಯ ಈ ರೀತಿ ವರ್ತಿಸಿರುವುದು ಇದೇ ಮೊದಲ ಸಲವೇನಲ್ಲ. ೨೦೦೮ರಲ್ಲಿ ಕ್ಷುಲ್ಲಕ ಕಾರಣದ ಮೇಲೆ ಇಬ್ಬರು ಪ್ರಧಾನಿಗಳನ್ನು ಅಧಿಕಾರದಿಂದ ಕೆಡವಿತ್ತು. ಟೆಲಿವಿಷನ್‌ನ ಅಡುಗೆ ಕಾರ್ಯಕ್ರಮದಲ್ಲಿ ಭಾಗವಹಿಸಿ ಸಂಭಾವನೆ ಪಡೆದದ್ದೇ ಘೋರ ಅಪರಾಧವೆನಿಸಿದರೆ, ಚುನಾವಣೆಯ ಅಕ್ರಮದ ಆರೋಪ ಇನ್ನೊಂದು. ನ್ಯಾಯಾಲಯ ಈ ದೇಶದಲ್ಲಿ ಯಾವತ್ತೂ ಸೇನೆಯ ಪರವಾಗಿದೆ. ನ್ಯಾಯಾಧೀಶರುಗಳು ಕೂಡ ಶ್ರೀಮಂತ ವರ್ಗದಿಂದ ಬಂದವರು. ದೇಶದಲ್ಲಿ ಶಾಂತಿ ಸುವ್ಯವಸ್ಥೆ ಕಾಪಾಡಲು ಸೇನಾಡಳಿತ ೧೫,೦೦೦ ಯೋಧರನ್ನೂ ಜಮಾಯಿಸಿದೆ. ಅಮೆರಿಕ ಥಾಯ್‌ಲೆಂಡಿನ ವಿದ್ಯಮಾನಗಳ ಬಗ್ಗೆ ತಲೆಕೆಡಿಸಿಕೊಂಡಿಲ್ಲ. ಬಿಕ್ಕಟ್ಟಿನ ಪರಿಸ್ಥಿತಿ ನಿವಾರಿಸಲು ಆದಷ್ಟು ಶೀಘ್ರವಾಗಿ ಚುನಾವಣೆಗಳು ನಡೆಯಬೇಕು ಎಂದಷ್ಟೇ ಹೇಳಿದೆ. ದೇಶದಲ್ಲಿ ಹಲವು ಭಾಗಗಳಲ್ಲಿ ಉಗ್ರಗಾಮಿಗಳ ಅಟ್ಟಹಾಸ ಮುಂದುವರಿದಿದೆ. ೨೦೦೪ರಿಂದ ಈವರೆಗೆ ಉಗ್ರಗಾಮಿಗಳ ವಿರುದ್ಧವಾಗಿ ಸೇನಾ ಕಾರ್ಯಾಚರಣೆಯಲ್ಲಿ ಈವರೆಗೆ ೫೭೦೦ ಜನರ ಹತ್ಯೆಯಾಗಿದೆ ಎಂದು ಅಂದಾಜು, ಬಿಗಿಭದ್ರತೆ ಇದ್ದರೂ ದೇಶದಲ್ಲಿ ಅತೃಪ್ತಿಯ ಹೊಗೆಯಾಡುತ್ತಿದೆ. ಈಗಾಗಲೆ ಸೇನೆ ಸಾಕಷ್ಟು ಪ್ರತಿಭಟನಾಕಾರರನ್ನು ಬಂಧನದಲ್ಲಿರಿಸಿದೆ.



* * *

# 'ಸಾರ್ಕ್' ದೇಶಗಳು ಮತ್ತು ಭಾರತ

**ಚು**ನಾವಣೆಗಳಲ್ಲಿ ಭರ್ಜರಿ ಜಯಗಳಿಸಿ ಅಧಿಕಾರಕ್ಕೇರಿರುವ ನರೇಂದ್ರ ಮೋದಿ ನೇತೃತ್ವದ ಭಾಜಪ ಸರಕಾರ ಹುಟ್ಟುಹಾಕಿರುವ ಭ್ರಮೆ ಗಾಳಿಪಟದಂತೆ ಹಾರಾಡುತ್ತಿದೆ. ಹೆಸರಿಗೆ ಎನ್‌ಡಿಎ ಸಮ್ಮಿಶ್ರ ಸರಕಾರ ಅಸ್ತಿತ್ವಕ್ಕೆ ಬಂದಿದ್ದರೂ ಭಾಜಪದ್ದೇ ಪಾರುಪತ್ಯ. ಹತ್ತು ವರ್ಷಗಳ ಹಿಂದೆಯೂ ಅಧಿಕಾರದಲ್ಲಿದ್ದಾಗ ಈ ಪಕ್ಷದ ಸಾಧನೆ ಏನು ಎನ್ನುವುದು ತಿಳಿದಿರುವ ವಿಷಯ. ಈಗ ನರೇಂದ್ರ ಮೋದಿಯ 'ಮಾಂತ್ರಿಕ ದಂಡ' ಏನೋ ಪವಾಡಸದೃಶ ಅಭಿವೃದ್ಧಿ ಸಾಧಿಸುವುದೆಂಬ ಕನಸು ಕಟ್ಟಲಾಗಿದೆ. ಅಧಿಕಾರ ಸ್ವೀಕರಿಸಿದ ಮೇಲೆ ಈ ಗುಂಗು ಕೆಲಕಾಲ ಇರುವುದು ಸಹಜ. ಅದು ಕರಗಿ ಹೋಗದಂತೆ ನೋಡಿಕೊಳ್ಳುವುದು ಹೊಸ ಸರಕಾರದ ಜವಾಬ್ದಾರಿ.

ಪ್ರಮಾಣ ವಚನ ಸಮಾರಂಭದ ಅದ್ದೂರಿ ಏರ್ಪಾಟಿಗೆ ಭಾರತದ ನೆರೆರಾಷ್ಟ್ರಗಳ, ಮುಖ್ಯವಾಗಿ 'ಸಾರ್ಕ್' ಸದಸ್ಯ ರಾಷ್ಟ್ರಗಳ ಅಧಿಪತಿಗಳಿಗೆ ನೀಡಿದ ಆಹ್ವಾನ, ಸ್ವೀಕಾರ ಎಲ್ಲ ಮಾಧ್ಯಮಗಳಲ್ಲಿ ದೊಡ್ಡ ಸುದ್ದಿಯಾಯಿತು. ವಿದೇಶಾಂಗ



ವ್ಯವಹಾರದಲ್ಲಿ, ಅದರಲ್ಲೂ ನೆರೆ ರಾಷ್ಟ್ರಗಳ ಜೊತೆ ಸಂಬಂಧ ಕುದುರಿಸಲು ಸದವಕಾಶ, ಹೊಸ ಹೆಜ್ಜೆ ಎಂದು ಬಣ್ಣಿಸಲಾಯಿತು. ಇನ್ನೇನು ಸಮಸ್ಯೆಗಳೆಲ್ಲ ಬಗೆಹರಿದು ಸಂಬಂಧಗಳು ಸುಧಾರಿಸುವುದೆಂಬ ಸದಾಶಯವನ್ನು ಬಿತ್ತಲಾಯಿತು. ಪ್ರಚಾರಪ್ರಿಯತೆ ಮೋದಿಗೆ ಮತ್ತು ಭಾಜಪಗೆ ಹೊಸದೇನಲ್ಲ. ಕಾರ್ಪೊರೇಟ್‌ಗಳಿಗೆ ಪ್ರಿಯವಾಗಿರುವ ಹೊಸ ಸರಕಾರದ ಸುತ್ತ ದಟ್ಟವಾದ ಪ್ರಭಾವಳಿ ನಿರ್ಮಿಸುವ ತಂತ್ರದಲ್ಲಿ ಇದೂ ಒಂದು. ಸಾರ್ಕ್ ವರಿಷ್ಠರ ಜೊತೆ ಪ್ರಧಾನಿ ಮೋದಿಯವರ ಮಾತುಕತೆ ಮತ್ತು ಅವರುಗಳೊಂದಿಗೆ ತೆಗೆದ ಛಾಯಾಚಿತ್ರಗಳು ಸಾಕಷ್ಟು ಪ್ರಚಾರ ಗಿಟ್ಟಿಸಿದುವು. ಸಾರ್ಕ್ ದೇಶಗಳ ಅಧಿಪತಿಗಳಿಗೆ ನೀಡಿದ ಆಮಂತ್ರಣ, ಅವರ ಆಗಮನ ಒಳ್ಳೆಯ ಬೆಳವಣಿಗೆಯೇ. ಆದರೆ ಅದರ ಸುತ್ತ ನಿರ್ಮಿಸಲು ಹೊರಟಿರುವ ಗಾಳಿಗೋಪುರ ಮಾತ್ರ ಸಲ್ಲದ್ದು.

ಮೂರು ದಶಕಗಳ ಹಿಂದೆ ಅಸ್ತಿತ್ವಕ್ಕೆ ಬಂದ ಈ 'ಸಾರ್ಕ್' ಸಂಘಟನೆ ಏಳು ನೆರೆರಾಷ್ಟ್ರಗಳನ್ನೊಳಗೊಂಡಿದೆ. ಅವು ನೇಪಾಳ, ಬಂಗ್ಲಾದೇಶ, ಶ್ರೀಲಂಕಾ, ಪಾಕಿಸ್ತಾನ, ಭೂತಾನ್, ಮಾಲ್ಡಿವ್ಸ್ ಮತ್ತು ಭಾರತ. ಈ ಸಂಸ್ಥೆ ಅಸ್ತಿತ್ವಕ್ಕೆ ಬರಲು ಐದು ವರ್ಷ ಹಿಡಿಯಿತು. ೧೯೮೧ರಲ್ಲಿ ಆರ್ಥಿಕ, ಸಾಂಸ್ಕೃತಿಕ ಹಾಗೂ ವಾಣಿಜ್ಯ ಸಂಬಂಧಗಳ ವರ್ಧನೆಗೆ ಪ್ರಾದೇಶಿಕ ವ್ಯವಸ್ಥೆ ಸೂಕ್ತ ಎಂದು ಪರಿಗಣಿಸಿ ಅಧಿಕಾರಿಗಳ ಮಟ್ಟದ ಸಮಾಲೋಚನೆಯಿಂದ ಪ್ರಾರಂಭವಾಗಿ ೧೯೮೫ರ ಡಿಸೆಂಬರ್‌ನಲ್ಲಿ ಬಂಗ್ಲಾ ದೇಶದ ರಾಜಧಾನಿ ಢಾಕ್ಕಾದಲ್ಲಿ ನಡೆದ ಶೃಂಗಸಭೆಯಲ್ಲಿ ಪರ್ಯವಸಾನ ಕಂಡಿತು. ಆಗ್ನೇಯ ಏಶಿಯದಲ್ಲಿ 'ಅಸಿಯಾನ್' ಸಂಘಟನೆ ಯೂರೋಪಿನಲ್ಲಿ ಸಾಮಾನ್ಯ ಮಾರುಕಟ್ಟೆ, ಆಫ್ರಿಕಾ ದೇಶಗಳ ಸಂಘಟನೆ ಮುಂತಾದುವುಗಳ ಮಾದರಿಯಲ್ಲೇ ಇದೆ ಸಾರ್ಕ್. ಸಾಧನೆಯ ದೃಷ್ಟಿಯಿಂದ ಮಹತ್ತರವಾದ ಪ್ರಗತಿಯೇನೂ ಕಾಣದಿದ್ದರೂ ತಪ್ಪದೆ ಶೃಂಗ ಸಮಾವೇಶಗಳು ಮಾತ್ರ ಜರುಗುತ್ತಿವೆ. ಇದರಿಂದ ಪರಸ್ಪರ ವಿಚಾರ ವಿನಿಮಯಕ್ಕೆ ದ್ವಿಪಕ್ಷೀಯ, ಬಹುಪಕ್ಷೀಯ ಸಂಬಂಧಗಳ ಸುಧಾರಣೆಗಳಿಗೆ ಅವಕಾಶವಾದರೂ ಸಮಸ್ಯೆಗಳು ಮಾತ್ರ ಬಗೆಹರಿಯದೇ ಉಳಿದುಕೊಂಡಿವೆ. ಈ ಭೂಭಾಗದಲ್ಲಿ ಹಿರಿಯಣ್ಣನಂತೆ ಇರುವ ದೊಡ್ಡ ರಾಷ್ಟ್ರ ಭಾರತ. ಸಂಬಂಧಗಳ ಸುಧಾರಣೆಗೆ ರಾಜಕೀಯ ಮುತ್ಸದ್ದಿತನ ತೋರಬೇಕಾಗಿದೆ. ನೆರೆಯ ರಾಷ್ಟ್ರಗಳೊಂದಿಗೆ ಇರುವ ಸಮಸ್ಯೆಗಳೂ ಕೂಡ ಇಂದು ನಿನ್ನೆಯವಲ್ಲ. ಹಲವು ದಶಕಗಳಿಂದ ಬೆಳೆದುಕೊಂಡು ಬಂದಿರುವಂಥವು. ಕೇವಲ ಸದಾಶಯಗಳಿಂದ ಬಗೆಹರಿಯುವಂಥವಲ್ಲ. ಹಾಗಾಗಿ ಒಂದು ಸಮಾರಂಭದಲ್ಲಿ ಭಾಗವಹಿಸುವಿಕೆಯಿಂದ ಗಾಳಿಗೋಪುರ ಕಟ್ಟುವುದು ಸರಿಯಲ್ಲ. ಇದು ಮೋದಿಗೂ ಭಾಜಪಕ್ಕೂ ತಿಳಿದಿರಬೇಕು.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೭ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

ಕಾವ್ಯಲೋಕ

# ಸಾವಿನ ಮಳೆ

**ಮೋ**ಡ ಹೊತ್ತಿ ಉರಿದು
ಬಾನಲ್ಲಿ ಜಲ ಕಂಪನ
ಹಿಮ ಕರಗಿ ಹರಿದು
ದೇವ ಧರೆಯಲ್ಲಿ ಭೂಕಂಪನ

ಭಕ್ತಗಣ ಶವರಾಶಿಯ ಮೇಲಿ
ಕಾಡು ಹಕ್ಕಿಯ ಸವಾರಿ
ಪುಕ್ಕಲು ಪರಮಾತ್ಮ
ದಿಕ್ಕೆಟ್ಟು ಪರಾರಿ

ಸುನಾಮಿಯ ಸೆಳವಿಗೆ
ಕೊಚ್ಚಿ ಹರಿದವರ ಸುಳಿವಿಲ್ಲ

ಕಫನ್ನಿಲ್ಲದೆ ದಫನ್ನಾದವರ
ಲೆಕ್ಕ ಸಿಕ್ಕಿಲ್ಲಾ

ಉಳಿದವರಿಗಿಲ್ಲ ಅಳಿದವರ
ಧ್ಯಾನ
ದೇವನಾಡಿನಲ್ಲಿಂದು ಸ್ಮಶಾನ
ಮೌನ

ನನಗೀಗ ದೇವರನ್ನುಳಿಸುವ
ದೇವರ ತಲಾಷಿ
ವಿಳಾಸವಿದ್ದರೆ ದಯವಿಟ್ಟು
ತಲುಪಿಸಿ.

**ಮೆಹಬೂಬ ನದಾಫ**
ಪ್ಲಾಟ್ ನಂ. ೩೨, 'ಬಿ' ಬ್ಲಾಕ್, ವಿನಯ್ ಕುಲಕರ್ಣಿ ಬಡಾವಣೆ
ಚರಂತಿ ಮಠ ಗಾರ್ಡನ್ಸ್, ಹೊಸಯಲ್ಲಾಪುರ, ಧಾರವಾಡ – ೫೮೦ ೦೦೧

# ದಲಿತ ಚಳುವಳಿ ಮತ್ತು ಅಲೆಮಾರಿ ಸಮುದಾಯಗಳ ಸ್ಥಿತಿಗತಿ

ಡಾ॥ ಸಣ್ಣವೀರಣ್ಣ ದೊಡ್ಡಮನಿ

– ದೇವನೂರ ಮಹಾದೇವರ ನುಡಿ –

*ಭೂಮಿಗೆ ಬಿದ್ದ ಬೀಜ*
*ಎದೆಗೆ ಬಿದ್ದ ಅಕ್ಷರ*
*ಇಂದಲ್ಲ ನಾಳೆ ಫಲ ಕೊಡುವುದು.*

– ನನ್ನ ನುಡಿ –

*ಹದನೋಡಿ ನಾಟಿ ಮಾಡಿದ ಸಸಿ*
*ಜಗನೋಡಿ ಕಲಿತ ಮನ*
*ಇಂದಲ್ಲ ನಾಳೆ ಬೆಳಕು ಕಾಣುವುದು.*

ಇತ್ತೀಚಿನ ದಲಿತ ಬದುಕು ತುಂಬ ಭಾರವೆನಿಸಿದೆ. ನನ್ನವರಿಗೆ ಊರಿನಲ್ಲಿ ಊರಾಚೆ ಬದುಕಲು ಬಿಟ್ಟು ಭಾರವೆನಿಸಿದರೆ, ನನ್ನ ಬಂಧುಗಳಿಗೆ ಊರೂ ಗತಿಯಿಲ್ಲದೆ ಇಂದು ಈ ಊರು, ನಾಳೆ ಮತ್ತೊಂದು ಊರು, ನಾಡಿದ್ದು ಇನ್ನೆಲ್ಲೊ ... ಎಂದು ಭಾರವೆನಿಸಿದೆ. ಊರಿನಲ್ಲಿ ಬದುಕುವವರ ಸಮಸ್ಯೆ – ಮನೆ, ಮಂದಿರ, ಓಣಿಗಳ ಬೀದಿಯಲ್ಲಿ ಕೆರೆ, ಹಳ್ಳ, ಬಾವಿಗಳ ಬೀದಿಯಲ್ಲಿ, ನನ್ನವರು ಹಾಯ್ದುಹೋದರೆ ಮೈಲಿಗೆ ಎಂದೊರಗುವ ಜನ, ನನ್ನವರಿಗೆ ಕೈ ತಾಗದ ಹಾಗೆ – ತುತ್ತು ರೊಟ್ಟಿ, ಗುಟುಕು ನೀರು, ಅಳಿದುಳಿದ ದವಸಧಾನ್ಯ ಕೊಟ್ಟಾರು. ಆದರೆ ನನ್ನ ಬಂಧುಗಳಿಗೆ (ಅಲೆಮಾರಿ ಬದುಕಿಗೆ) ಊರಾಚೆಯೂ ಜಾಗೆಯಿಲ್ಲ, ಓಣಿಯ ಬೀದಿಯಲ್ಲಿ ಹಾದು ಹೋಗಲು ಅವಕಾಶವಿಲ್ಲ. ತುಂಡು ಬಟ್ಟೆ ತೊಟ್ಟು, ಅಗಸೆ ಬಾಗಿಲಿನಲ್ಲಿ ದೇವಿ ಬುಟ್ಟಿಯಿಟ್ಟು ದುರು ಮುರು ಎಂದು ತುಸು ಸದ್ದು ಮಾಡಿ, ಅನ್ನಕ್ಕಾಗಿ, ಹೊಟ್ಟೆ ಹೊರೆದುಕೊಳ್ಳಲು ನನ್ನ ಬಂಧುಗಳು ಬಾರ್‍ಕೋಲಿನ ಚಾಟಿಯಿಂದ ತಮ್ಮನ್ನು ತಾವು ಬಾಸುಂಡೆ ಬರುವಂತೆ ಬಾರಿಸಿಕೊಂಡು ಆಣೆ ದುಡ್ಡು, ಅರ್ಧ ರೊಟ್ಟಿಗಾಗಿ ಕೇಕೆ ಹಾಕಿ ಆರ್ಭಟಿಸಬೇಕಿದೆ. ಕೆಲವರು ತಮ್ಮ

ತಮ್ಮದೇ ಆದ ಗುರುತನ್ನು ಉಳಿಸಿಕೊಂಡು ಸಂಪೂರ್ಣ ನೆಲೆಯಿಲ್ಲದ ಅತಂತ್ರ ಸ್ಥಿತಿಯಲ್ಲಿರುವ ಕರ್ನಾಟಕ ರಾಜ್ಯದ ದಲಿತ ಅಲೆಮಾರಿ ಸಮುದಾಯಗಳೆಂದರೆ, ಪರಿಶಿಷ್ಟ ಜಾತಿಯಲ್ಲಿರುವ ಬುಡ್ಗ ಜಂಗಮ, ಚನ್ನದಾಸರ, ದಕ್ಕಲಿಗ, ದೊಂಬರ, ಗೋಸಂಗಿ, ಹಂಡಿಜೋಗಿ, ಕೊರಮ, ಮದಾರಿ, ಮಾಂಗಗಾರುಡು, ಸಿಂದೊಳ್ಳು, ಸುಡಗಾಡು ಸಿದ್ಧ ಅಥವಾ ಮಸಣಜೋಗಿ, ಶಿಳ್ಳೇಕ್ಯಾತರು ಮತ್ತು ಇವುಗಳ ಪರ್ಯಾಯ ಪರಿಶಿಷ್ಟ ಪಂಗಡದಲ್ಲಿರುವ ಅಡವಿ ಚಿಂಚೇರ, ಪಾರ್ಧಿ, ಡುಂಗ್ರಿ ಗರಾಸೀಯಾ, ಹಕ್ಕಿ ಪಿಕ್ಕಿ, ನಾಯಕ (ಮಂಡ್ರು) ಮತ್ತು ರಾಜೀಗೊಂಡ. ಹಿಂದುಳಿದ ವರ್ಗದಲ್ಲಿರುವ ಅಲೆಮಾರಿ ಕುರುಬ, ಬೈಲ ಪತ್ತಾರ, ಕಂಜೆರಭಾಟ, ಕಾಡುಗೊಲ್ಲ, ಗೊಂಧಳಿ, ಘಿಸಾಡಿ, ಹೆಳವ ಸಿಕ್ಲಗಾರ ಇತ್ಯಾದಿ. ಇಲ್ಲಿ ಸಿಕ್ಲಗಾರ ಎನ್ನುವ ಸಮುದಾಯ ಕರ್ನಾಟಕ ರಾಜ್ಯದ ಯಾವುದೇ ಜಾತಿಯ ಪಟ್ಟಿಯಲ್ಲಿ ಸೇರಿರುವುದಿಲ್ಲ. ಇದೊಂದು ದುರ್ದೈವದ ಸಂಗತಿ. ಇದಲ್ಲದೆ ಶಿಳ್ಳೇಕ್ಯಾತರ ಪರ್ಯಾಯ ಪದ ಕಿಳ್ಳೇಕ್ಯಾತ ಎಂಬ ಪದವನ್ನು ಬೇರೆ ಬೇರೆ ವರ್ಗದ ಪಟ್ಟಿಯಲ್ಲಿ ಸೇರಿಸಲಾಗಿದೆ. ಇಂತಹ ಹಲವು ಪ್ರಮಾದಗಳ ಉದಾಹರಣೆಗಳೂ ಇವೆ. ಅಲೆಮಾರಿಗಳಿಗೆ ಐಡೆಂಟಿಟಿಯನ್ನು ನಿರ್ಧರಿಸಿ, ಬದುಕುವ ಹಕ್ಕನ್ನು ಅರ್ಥೈಸುವ, ಅಭಿಯಾನ ಹಾಕಿಕೊಳ್ಳುವ ಮೂಲಕ ನಮ್ಮ ದಲಿತ ಚಳುವಳಿಯನ್ನು ಗಟ್ಟಿಗೊಳಿಸಬೇಕಿದೆ. ಸಂವಿಧಾನಬದ್ಧವಾದ ಸಾಮಾಜಿಕ ನ್ಯಾಯ ದೊರಕಿಸಿಕೊಡುವ ಕಾರ್ಯ ಇದುವರೆಗೂ ಸಂಪೂರ್ಣವಾಗಿ ಯಾವುದೇ ಸರ್ಕಾರದಿಂದ ಆಗಿರಲಾರದು. ಈ ನಿಟ್ಟಿನಲ್ಲಿ ಸರ್ಕಾರಗಳಿಗೆ ಹಲವು ಆಯೋಗಗಳಿಗೆ ಸಮುದಾಯಗಳ ಗೋಳನ್ನು ಕಣ್ಣಾರೆ ಕಾಣಿಸುವಂತೆ ನಮ್ಮ ಚಳುವಳಿ ಕೆಲಸ ಮಾಡಬೇಕಿದೆ.





ದೇಹವನ್ನು ಇಂಚಿಗೊಂದರಂತೆ ಇರಿದುಕೊಂಡು ನೆತ್ತರಿನ ನಕ್ಷೆಯನ್ನು (ದೇಹದ ತುಂಬ) ಬಿಡಿಸಿ ಗಡ-ಗಡ ನಡುಗಿ ಕಣ್ಣಾಲಿಗಳ ಅಗಲಿಸಿ ಹಸಿದು ಹೊಟ್ಟೆ ತೋರಬೇಕಿದೆ. ಆ ಮೂಲಕ ತುತ್ತಿನ ಚೀಲ ತುಂಬಿಕೊಳ್ಳಬೇಕಿದೆ. "ಅನ್ನ ದೇವರ ಮುಂದೆ ಇನ್ನು ದೇವರು ಉಂಟೆ" ಎನ್ನುವುದರಲ್ಲಿ ಸತ್ಯವಿದೆ. ಇಲ್ಲದ ದೇವರುಗಳ ವೇಷಕ್ಕಾಗಿ ಚಿಂದಿ ಆಯ್ದು ನಡುಪಟ್ಟಿ ಕಟ್ಟಿಕೊಂಡು ಕೊರಳಲ್ಲಿ ದೇವರುಗಳ ಸರಮಾಲೆ ನೇತುಹಾಕಿಕೊಂಡು ತಿರುಗಬೇಕಿದೆ.

ಜಾಗತೀಕರಣದ ಸಂದರ್ಭದಲ್ಲಂತೂ ತುಂಬ ಹೇಯವೆನಿಸಿದ ನನ್ನ ಬಂಧುಗಳ ಬಾಳು ಬದಲಾಗುವ ಬಗೆ ಹೇಗೆ ? – ಈ ಯೋಚನೆ ಕಾಡಿ ಇಂಚಿಂಚು ಕೊಲ್ಲುತ್ತದೆ. ಆಳುವವರಿಗೆ ಅರಸೊತ್ತಿಗೆ ಮುಖ್ಯ. ಅದಕ್ಕಾಗಿ ಪ್ರಭುತ್ವಗಳು ಓಟಿನ ಸಂಖ್ಯಾಬಲದ ಸಮುದಾಯಗಳಿಗೆ ಏನೆಲ್ಲ ಭಾಗ್ಯಗಳ ಬಾಗಿಲನ್ನು ತೆರೆಯುತ್ತವೆ. ಅನ್ನ ಭಾಗ್ಯ, ಕ್ಷೀರ ಭಾಗ್ಯ, ಲಕ್ಷ್ಮೀ ಭಾಗ್ಯ, ತಾಯಿ ಭಾಗ್ಯವೆಂದು ಉದ್ಘೋಷಿಸಿಕೊಂಡು ತಮ್ಮ ಶುಭ್ರತೆಯ ಖಾದಿಯನ್ನು ಗಟ್ಟಿಗೊಳಿಸಿ ಕೊಳ್ಳುತ್ತಿವೆ. ಆದರೆ ಇಲ್ಲಿ ತಾಯಿಯಾದರೂ ಭಾಗ್ಯವಿಲ್ಲ, ಮಕ್ಕಳಿದ್ದರೂ ಕ್ಷೀರವಿಲ್ಲ. ನನ್ನ ಅಲೆಮಾರಿ ಬಾಂಧವರಿಗೆ ನೆಲೆಯಿಲ್ಲ. ಸಾಂಘಿಕ ನೆಲೆಯಂತೂ ದೂರದ ಮಾತು. ಅದರಲ್ಲೂ ಓಟಿನ ಸಂಖ್ಯಾಬಲ ಇಲ್ಲವೇ ಇಲ್ಲ. ಊರೂರು ತಿರುಗುವುದರಿಂದ ಶಿಕ್ಷಣ ಗಗನ ಕುಸುಮವಾಗಿದೆ. ಇದನ್ನೆಲ್ಲ ನೆನೆದರೆ ಕಂಬನಿಗಳು ನಾವು ಉಟ್ಟಬಟ್ಟೆಯನ್ನು ತೊಯ್ಸಿ ತಪ್ಪಡೆಯಾಗಿಸುತ್ತಿವೆ. ಕೇಳುವ ಕಿವಿಗಳಿಗೆ, ಕಾಣುವ ಕಣ್ಣುಗಳಿಗೆ ಮಾನವೀಯತೆ ಅಂಟಿದ್ದರೆ ಹೃದಯ ತಲ್ಲಣಗೊಂಡು ಮೈ ಜುಮ್ಮೆನ್ನುವುದು.

ನಮ್ಮ ಎಡಬಲಗಳ ಸಮಸ್ಯೆಯಲ್ಲಿ ನಮ್ಮತನವನ್ನೇ ಕಳೆದುಕೊಂಡು ಕಣ್ಣ ಮುಂದಣದ ಕತ್ತಲೆಯನ್ನು ಅರ್ಥಮಾಡಿಕೊಳ್ಳಲಾರದೆ ಸಾಗುತ್ತಿದ್ದೇವೇನೋ ಎನ್ನುವ ಅನುಮಾನ ಕಾಡುತ್ತಿದೆ. ನಾನು ನನ್ನ ದುಃಖವನ್ನು ತೋಡಿಕೊಳ್ಳುತ್ತಿದ್ದೇನೆಂದರೆ, ಅದೇ "ದಲಿತ ಧ್ವನಿ", ಅಲೆಮಾರಿ ಬಂಧುಗಳ ಬದುಕು ನಮ್ಮ ಕಣ್ಣಿಗೆ ಕಾಣಲಾರದ್ದೆಂದರೆ ನಮ್ಮ ಧ್ವನಿ ಕ್ಷೀಣಿಸುತ್ತಿದೆ ಎಂದರ್ಥ. ದಲಿತ ನಾಣ್ಯದ ಇನ್ನೊಂದು ಮುಖ ನಮ್ಮಲ್ಲಿದೆ. ಈ ಚಳುವಳಿಯು ಅಲೆಮಾರಿ ಬದುಕಿಗೆ ಬಲ ನೀಡಬೇಕೆನ್ನುವುದು ನನ್ನ ಆಶಯ.

ಸಂವೇದನಾ ಶಕ್ತಿ ದೇವನೂರರ ಚಿಂತನೆಯಂತೆ, ಅಸ್ಪೃಶ್ಯತೆಯ ಮೂಲವೆಲ್ಲಿ ? ಅಸ್ಪೃಶ್ಯತೆ ಮತ್ತು ಜಾತೀಯತೆಯ ಭೂತಗಳನ್ನು ಈ ನೆಲದಿಂದ ದೂರ ಓಡಿಸುವ ಪ್ರಯತ್ನಗಳು ಮೇಲೆ ಮೇಲೆ ನಡೆಯುತ್ತ ಬರುತ್ತಿದ್ದರೂ ಇವು ಜಗ್ಗದೆ ನಮ್ಮ ಜೊತೆ ಜೊತೆಗೇ ಬರುತ್ತಿವೆ. ಇದಕ್ಕೆ ಕಾರಣ ಒಂದಲ್ಲ ನೂರಾರು, ಅದರಲ್ಲೂ ರಾಜ ತ್ರಿವಿಕ್ರಮ ಮತ್ತು ಬೇತಾಳನ ಕಥೆಯಂತೆ ಸಣ್ಣಪುಟ್ಟ ಜಾತಿಗಳಲ್ಲಿ ಪ್ರತಿಷ್ಠೆಗಾಗಿ ಕಿತ್ತಾಟ ನಡೆದರೂ ಇದರ ಫಲ ದಕ್ಕುವುದು ಮೇಲು ಜಾತಿಯವರಿಗೇ. ಊರಾಚೆಯ ಹೊಲೆಮಾದಿಗರಲ್ಲಿ ಒಳಗೊಳಗೆ ಪ್ರತಿಷ್ಠೆಗಾಗಿ ಜಗಳವಾದರೆ ಈ ಇಬ್ಬರಲ್ಲೂ ಮೇಲು ಕೀಳು ಏನೂ ಹೆಚ್ಚು ಕಮ್ಮಿ




ಆಗದೆ ಇವರು ಸಾಮಾಜಿಕವಾಗಿ ಮತ್ತಷ್ಟು ದೂರ ಎಸೆಯಲ್ಪಡುವರು. ಇವರ ಸ್ಥಾನಮಾನದ ವ್ಯಾಜ್ಯ ಬಗೆಹರಿಯದೆ ಜಾತಿ ಶ್ರೇಣಿಯಲ್ಲಿ ಮೇಲಿರುವವನ ಪಟ್ಟವನ್ನು ಮತ್ತಷ್ಟು ಹೆಚ್ಚು ಭದ್ರಪಡಿಸುತ್ತದೆ ಎಂದು ವಿವರಿಸಿ ನಮ್ಮ ಸಂಕುಚಿತತನವನ್ನು ಹೊಡೆದೋಡಿಸುವುದಿಲ್ಲವೆಂದರೆ ನಮಗೆ ಹೆಚ್ಚು ಹಾನಿ, ನಮ್ಮ ತಲೆ ಸಹಸ್ರ ಚೂರಾಗುವುದು ಎಂದು ಅರ್ಥೈಸುತ್ತಾರೆ.

ಈ ದಿಸೆಯಲ್ಲಿ ನಮ್ಮ ಚಳುವಳಿ ನಮ್ಮ ಜೀವನಕ್ಕಿಂತ ಹೀನಾಯವಾದ ಜೀವನವನ್ನು ಸಾಗಿಸುವ ಅಲೆಮಾರಿಗಳ ಸಾಮಾಜಿಕ ಸ್ಥಿತಿಗತಿಗಳನ್ನು ಕುರಿತು ಒಂದಿಷ್ಟು ಅವಲೋಕಿಸುವ ಸಂದರ್ಭ ಇದಾಗಿದೆ ಎಂದು ಭಾವಿಸಿದ್ದೇನೆ. ನಮ್ಮ ರಾಜ್ಯದಲ್ಲಿ ಅವುಗಳ ಚರಿತ್ರೆಯ ಮೂಲಕ ೨೩ ಅರೆ ಅಲೆಮಾರಿ ಸಮುದಾಯಗಳು ದಾಖಲಾಗಿರುವುದನ್ನು, ಆ ಸಮುದಾಯಗಳು ಇತ್ತೀಚೆಗೆ ಶಿಕ್ಷಣದ ಗಾಳಿಯನ್ನು ಸೋಕಿಸಿಕೊಳ್ಳುವುದನ್ನು ಗಮನಿಸಬೇಕಾಗಿದೆ. ಈ ಪ್ರಯತ್ನಕ್ಕೆ ಒಂದಿಷ್ಟು ಬಲ ನೀಡಿ ಪುಸ್ತಕ ಪ್ರಾಧಿಕಾರ ನಮ್ಮ ಮುಂದೆ ಅವುಗಳ ಚರಿತ್ರೆಯನ್ನು ತೆರೆದಿಟ್ಟಿದೆ. ಅವುಗಳ ಸಾಮಾಜಿಕ ಸ್ಥಿತಿಗತಿ ಶೋಚನೀಯ. ಅದಕ್ಕಾಗಿ ಇಂತಹ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ದಲಿತ ಚಳುವಳಿ ಮತ್ತು ಅಲೆಮಾರಿ ಸಮುದಾಯಗಳ ಸ್ಥಿತಿಗತಿ ಕುರಿತು ಪ್ರಬಂಧ ಮಂಡಿಸುವ ಇಚ್ಛೆಯಿಂದ ಅದರ ಸಾರಾಂಶವನ್ನು ರವಾನಿಸಲಾಗಿದೆ.

**ಚಳುವಳಿ – ಬರಹವಾದ ಬಗೆ**

ದಲಿತ ಸಾಹಿತ್ಯ ತಾಯ್ತನದ ಅಂತಃಕರಣದಿಂದ ಹುಟ್ಟಿಕೊಂಡಿದ್ದು ಎನ್ನುವುದಿದೆ. ದಲಿತ ಸಾಹಿತ್ಯ ಚಳುವಳಿ ಎಂಬುದು ಜಾತಿ ಆಧಾರಿತವಾಗಿ ಹುಟ್ಟಿಕೊಂಡದ್ದಲ್ಲ. ಅದೊಂದು ಸೈದ್ಧಾಂತಿಕ ರೂಢಿ, ತೀವ್ರ ಶೋಷಣೆಗೆ ಒಳಗೊಂಡ ಆ ಜನರ ಬದುಕಿನ ಹಿತಾಸಕ್ತಿಗಾಗಿ ಕಾಣಿಸಿಕೊಂಡು ರೂಪ ತಾಳಿದ್ದು. ದೀನ ಮಾನವರ ಮಮತೆಗಾಗಿ ತಾಯ್ತನದ ಅಂತಃಕರಣದ ಅಡಿಪಾಯದ ಮೇಲೆ ರೂಪತಳೆದಿರುವ ಯಾವುದೇ ಸಾಹಿತ್ಯವನ್ನು ಅಥವಾ ಚಳುವಳಿಗಳನ್ನು ಕಾಲವು ನುಂಗಿ ಜೀರ್ಣಿಸಿಕೊಳ್ಳುವುದು ಸಾಧ್ಯವಾಗದ ಸಂಗತಿ. ಹೀಗಾಗಿಯೇ ಚರಿತ್ರೆಯ ಒಡಲ ಸೀಳಿ ವರ್ತಮಾನದಲ್ಲಿ ಬುದ್ಧನ ಬೆಳಕು ಅಂಬೇಡ್ಕರರಂತಹ ಮಹಾತ್ಮರ ಕಣ್ಣಲ್ಲಿ ಪ್ರಕಾಶಿಸಲು ಸಾಧ್ಯವಾಗಿದೆ. ನಾಗರಿಕತೆಯ ಕುಣಿತದಲ್ಲಿ ಆಧುನಿಕತೆ ಹೆಚ್ಚು ವಿಸ್ತಾರಗೊಂಡಷ್ಟು ವೈಚಾರಿಕ ಪ್ರಜ್ಞೆಯನ್ನು ಕಳೆದುಕೊಳ್ಳುತ್ತ ನಡೆದಿದೆ ಎನಿಸುತ್ತದೆ.

ಇಲ್ಲಿ ಮುಖ್ಯವಾಗಿ ಒಂದು ಸಮುದಾಯ, ಸಮಾಜವನ್ನು ಪ್ರಮುಖ ವಾಹಿನಿಯಿಂದ ಹೊರ ತಳ್ಳಲ್ಪಟ್ಟ ವ್ಯವಸ್ಥೆಯನ್ನು ಖಂಡಿಸುವುದಾಗಿದೆ. ಅಂಬೇಡ್ಕರರ ಆಶಯದಂತೆ ಚಳುವಳಿಯ ಸ್ವರೂಪ ಆರಂಭದಲ್ಲಿ ಶಾಸ್ತ್ರೀಯತನ ಪಡೆದ ಬಗೆಯನ್ನು ಪ್ರೊ॥ ಕೆ. ನಾಗರಾಜಪ್ಪ ಅವರು ವಿವರವಾಗಿ ಗುರುತಿಸುವಂತೆ ಬ್ರಿಟಿಷರ ಆಳ್ವಿಕೆಯ ವಿರುದ್ಧ ರೂಪುಗೊಂಡ ಸ್ವಾತಂತ್ರ್ಯ ಚಳುವಳಿ ಎಲ್ಲ ಚಳುವಳಿಗಿಂತಲೂ ವಿಶಿಷ್ಟ ಮತ್ತು ಭಿನ್ನ ಸ್ವರೂಪದ್ದು. ಆ ಸಂದರ್ಭದಲ್ಲಿ ಬ್ರಿಟಿಷರು ದಲಿತರಲ್ಲಿ ರಾಜಕೀಯ ಪ್ರಾತಿನಿಧ್ಯ ಮತ್ತು ಹಕ್ಕುಗಳಿಗಾಗಿ ಜಾಗೃತಿ ಮೂಡಿಸಿ, ಅವರನ್ನು ಹೋರಾಟಕ್ಕೆ ಪ್ರಚೋದಿಸಿದರು. ದಲಿತರಲ್ಲಿ ಹೊತ್ತಿಸಿದ ಕಿಡಿ ಅಂಬೇಡ್ಕರರಲ್ಲಿ ಅಗ್ನಿಯಾಗಿ ಉರಿಯತೊಡಗಿತು. ಗಾಂಧೀಜಿಗೆ ಸ್ವಾತಂತ್ರ್ಯ ಚಳುವಳಿ ಮೊದಲು, ಅನಂತರ ದಲಿತರ ಸಮಸ್ಯೆ ಎಂದಾಗಿದ್ದರೆ, ಅಂಬೇಡ್ಕರರಿಗೆ ಮೊದಲು ದಲಿತರ ಸಮಸ್ಯೆ, ನಂತರ ಸ್ವಾತಂತ್ರ್ಯ ಚಳುವಳಿ ಎಂದಾಗಿತ್ತು. ಇಬ್ಬರ ಸಂಘರ್ಷ ತೀವ್ರಗೊಂಡಿತು. ಅಂಬೇಡ್ಕರರು ಸ್ವಾತಂತ್ರ್ಯ ಚಳುವಳಿಯನ್ನು ದಲಿತ ಚಳುವಳಿಯಾಗಿ ಬಳಸಿಕೊಂಡರು. ದಲಿತರಿಗೆ ರಾಜಕೀಯವಾಗಿ, ಸಕ್ರಿಯವಾಗಿ ಸಂಘಟಿತರಾಗಿ ಹೋರಾಟಕ್ಕಿಳಿಯಲು ಕರೆಕೊಟ್ಟರು. ಅಂಬೇಡ್ಕರರು ದಲಿತ ಚಳುವಳಿಯ ಮುಂಚೂಣಿಯ ನಾಯಕರಾಗಿ ಹೋರಾಟಕ್ಕಿಳಿದರು. ಮೇಲ್ವರ್ಗದ ಜನ ಅವರನ್ನು ಬ್ರಿಟಿಷರ ದಲ್ಲಾಳಿ ಎಂದು ಅವಮಾನಿಸಿದರು. ಆದರೂ ಅವರು ಅದಕ್ಕೆ ಜಗ್ಗಲಿಲ್ಲ, ಎಂದೂ ಮೇಲ್ವರ್ಗದವರೊಂದಿಗೆ ರಾಜಿಗೆ ಸಿದ್ಧರಾಗಲಿಲ್ಲ. ಹಿಂದೂ ಶಾಸ್ತ್ರಗಳನ್ನು ಅಂಬೇಡ್ಕರರು ಆಳವಾಗಿ ಅಧ್ಯಯನ ಮಾಡಿ, ಅವುಗಳಲ್ಲಿನ ಪೊಳ್ಳುತನವನ್ನು ಬಯಲುಮಾಡಿದರು. ಹಿಂದೂಗಳನ್ನು ಮೋಸಗಾರರು, ಅವರನ್ನು ಎಂದಿಗೂ ನಂಬಕೂಡದು ಎಂದು ತೀರ್ಮಾನಿಸಿದರು. ಬ್ರಾಹ್ಮಣರ ವರ್ಣ ಮತ್ತು ಜಾತಿ ವಿಷವರ್ತುಲವೇ ಅಸ್ಪೃಶ್ಯತೆಯ ಮೂಲವೆಂದು ಅವರನ್ನು ಖಂಡಿಸಿದರು.

ಹಿಂದೂ ಸಮಾಜದಲ್ಲಿರುವ ಅಸಮಾನತೆಯಿಂದ ಎಂದೆಂದಿಗೂ ದಲಿತರ ಅಭಿವೃದ್ಧಿಯಾಗಲಿ, ಅಸ್ಪೃಶ್ಯತೆಯಿಂದ ಬಿಡುಗಡೆಯಾಗಲು ಸಾಧ್ಯವಿಲ್ಲ ಎಂಬುದನ್ನು ಮನಗಂಡು, ಸಮಾನತಾ ತತ್ವದ ತಳಹದಿಯ ಮೇಲೆ ನಿಂತ ಬೌದ್ಧ ಧರ್ಮಕ್ಕೆ ಒಗ್ಗಿಕೊಂಡರು. ಬೌದ್ಧ ಧರ್ಮದ ಆಧ್ಯಾತ್ಮಿಕತೆ ಮತ್ತು ತಾತ್ವಿಕ ಚಿಂತನೆಗಳಿಗಿಂತ, ಅದರ ಸಾಮಾಜಿಕ ಮತ್ತು



ರಾಜಕೀಯ ವ್ಯಾಖ್ಯಾನದಿಂದ, ಬೌದ್ಧ ತತ್ವಗಳನ್ನು ಪರಿಷ್ಕರಿಸಿ, ದಲಿತರ ಬಿಡುಗಡೆ ಮತ್ತು ಅಭಿವೃದ್ಧಿಯ ಸಾಧನೆಯ ಮೂಲ ಮಂತ್ರವಾಗಿ ಬೌದ್ಧ ಧರ್ಮವನ್ನು ಸ್ವೀಕರಿಸಿದರು. ಅಂದಿನ ದಲಿತೇತರರು ತಮ್ಮ ನಾಯಕತ್ವವನ್ನು ಒಪ್ಪಿಕೊಳ್ಳುವುದು ಅನುಮಾನವೆನಿಸಿ ತಮ್ಮ ನಾಯಕತ್ವವನ್ನು ಅಂಬೇಡ್ಕರರು ದಲಿತರಿಗೆ ಮಾತ್ರ ಸೀಮಿತಗೊಳಿಸಿಕೊಂಡರು. ಅವರು ತಮ್ಮೆಲ್ಲ ಶಕ್ತಿಯನ್ನು ದಲಿತರ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯ ಜಾಗೃತಿಗಾಗಿ ಸಂಘಟಿಸಿ, ಅವರನ್ನು ಹೋರಾಟದಲ್ಲಿ ತೊಡಗಿಸಿ ಏಕತ್ರಗೊಳಿಸಿದರು. ಅಲ್ಲದೆ ದಲಿತರು ಪ್ರಬಲ ರಾಜಕೀಯ ಶಕ್ತಿಯಾಗಿ ರೂಪುಗೊಳ್ಳುವುದೇ ಅವರ ಎಲ್ಲ ಸಮಸ್ಯೆಗಳಿಗೆ, ಬಿಡುಗಡೆಗೆ ಆಯುಧವೆಂದು ನಿಶ್ಚಯಿಸಿದರು. ದಲಿತರು ಶಿಕ್ಷಣ, ಸಾಮಾಜಿಕ, ಆರ್ಥಿಕ, ಮತ್ತು ಧಾರ್ಮಿಕ ಸಮಸ್ಯೆಗಳು ತಾವಾಗಿಯೇ ಬಗೆಹರಿಯುತ್ತವೆಂದು ದೃಢವಾಗಿ ನಂಬಿ, ದಲಿತರಿಗೆ ರಾಜಕೀಯ ಪ್ರಜ್ಞೆಯ ದೀಕ್ಷೆ ಕೊಟ್ಟರು. ರಾಜಕೀಯದಲ್ಲಿ ದಲಿತರ ಶಕ್ತಿಯಿಂದಲೇ ಶಾಸನಸಭೆ, ಲೋಕಸಭೆಗಳಲ್ಲಿ ದಲಿತರಿಗೆ ಪ್ರಾತಿನಿಧ್ಯ ಸಿಕ್ಕಿ, ಅವರ ಭವಿಷ್ಯವೇ ಉಜ್ವಲವಾಗುವ ಕನಸು ಕಂಡರು. ಒಂದು ಹಂತದಲ್ಲಿ ಹಿಂದೂ ಸಮಾಜದ ದಬ್ಬಾಳಿಕೆಯ ಆಡಳಿತಕ್ಕಿಂತ, ಬ್ರಿಟಿಷ್ ಆಡಳಿತದಲ್ಲಿಯೇ ದಲಿತರು ಸುರಕ್ಷಿತರು ಎಂದು ಭಾವಿಸಿದ್ದರು. ಅಂತೂ ತಮ್ಮ ಹೋರಾಟದಲ್ಲಿ ದಲಿತರಿಗೆ ರಾಜಕೀಯ ಪ್ರಾತಿನಿಧ್ಯ ದೊರಕಿಸಿಕೊಡುವಲ್ಲಿ ಸಫಲರಾದರು. ಈ ಮೂಲಕ ದಲಿತ ಬದುಕಿನ ಇತಿಹಾಸದಲ್ಲಿ ಅಂಬೇಡ್ಕರ್ ಹೊಸ ದಲಿತ ಶಕೆಯನ್ನು ಆರಂಭಿಸಿದರು. ಅಂದಿನಿಂದ ಸ್ವತಂತ್ರ ಭಾರತದ ಇತಿಹಾಸದಲ್ಲಿ ದಲಿತರ ಬದುಕು ಎನ್ನುವುದು ಮುಖ್ಯವಾದ ಅಧ್ಯಯನ ವಿಷಯವಾಯಿತು. ಸಂವಿಧಾನದಲ್ಲಿ ಅಸ್ಪೃಶ್ಯತೆಯ ನಿಷೇಧದ ಅಧಿನಿಯಮವಾಗಿ, ದಲಿತರಿಗೆ ರಕ್ಷಣೆ ದೊರೆಯಿತು. ದಲಿತರು ಗೌರವಯುತ ಭಾರತೀಯ ನಾಗರಿಕರಾಗಿ ಬಾಳುವ ಅವಕಾಶ ಪಡೆದರು. ಇಷ್ಟಾದರೂ ಪ್ರಾಂತ ಭೇದ, ಜನಾಂಗ ಭೇದ, ಭಾಷಾ ಭೇದ, ಸಂಸ್ಕೃತಿ ಭೇದಗಳಿಂದ ದಲಿತರನ್ನು ಸಂಘಟಿಸುವುದು ಅವರಿಗೆ ಸುಲಭಸಾಧ್ಯವಾಗಲಿಲ್ಲ. ಆದರೂ ಅನ್ಯರ ನಿಂದನೆಗೆ ಸೊಪ್ಪುಹಾಕದೆ ಯಜಮಾನಿಕೆಯ ಸಂಸ್ಕೃತಿಯನ್ನು ಅಲ್ಲಗಳೆಯಲು ಮತ್ತೆ ಮತ್ತೆ ಕರೆಕೊಟ್ಟು, ಅದನ್ನು ತಿರಸ್ಕರಿಸಿದರು. ಅಂಬೇಡ್ಕರರು ದಲಿತರಿಗೆ ಒಡ್ಡಿದ ಅಡ್ಡಿಗಳನ್ನು ನಿವಾರಿಸುತ್ತ, ಯಾವುದಕ್ಕೂ ಜಗ್ಗದೆ ಹೋರಾಡಿ, ದಲಿತರಿಗೆ ಆತ್ಮವಿಶ್ವಾಸ, ಸಾಮಾಜಿಕ ಮತ್ತು ರಾಜಕೀಯ ಹಕ್ಕುಗಳ ಹೋರಾಟದ ಕಿಚ್ಚನ್ನು ಅವರಲ್ಲಿ ಹೊತ್ತಿಸಿದ ಕ್ರಾಂತಿ ಪುರುಷರೆನಿಸಿದರು. ದಲಿತರಿಗೆ ಸಂವಿಧಾನದ ಸೌಲಭ್ಯಗಳು ಮತ್ತು ರಕ್ಷಣೆಗೆ ಅವಕಾಶ ಕಲ್ಪಿಸಿದ ಡಾ॥ ಬಾಬಾ ಸಾಹೇಬ ಅಂಬೇಡ್ಕರ್ ಅವರು ಸಂವಿಧಾನ ಶಿಲ್ಪಿ ಎನಿಸಿದರು. ಅಂಥವರ ಸ್ಥಾನ ತುಂಬುವ ವ್ಯಕ್ತಿ ಬರುವುದೆಂತು ? ಮಹಾರಾಷ್ಟ್ರದಲ್ಲಿ ಅವರ ನಂತರ ದಲಿತ ಪ್ಯಾಂಥರ್ ಎಂಬ ಚಳುವಳಿ ಅಸ್ತಿತ್ವಕ್ಕೆ ಬಂದು ನಂತರ ಅದು ಒಡೆದು ಇಬ್ಭಾಗವಾಗಿ ದಲಿತ ಚಳುವಳಿಯಾಗಿ, ಮುಂದೆ ದಲಿತ ಸಾಹಿತ್ಯ ಚಳುವಳಿಯಾಗಿ ಹೊಸ ಸ್ವರೂಪ ಪಡೆಯಿತು. ಇದು ಆಂತರಿಕ ಬದುಕನ್ನು ಅನುಕೂಲಾತ್ಮಕವಾಗಿ ತೆರೆದಿಡುವ ಪ್ರಯತ್ನವನ್ನು ಮಾಡಿದ್ದು ನಿಜ ! ಇಂದು ಅದರ ರೂಪುರೇಷೆಗಳು ವಿಸ್ತಾರಗೊಳ್ಳುವುದು ತೀರಾ ಅಗತ್ಯವೆನಿಸಿದೆ. ಈ ದಲಿತ ಪ್ರಭಾತ್‌ಭೇರಿಯ ಹಿಂದಿನ ಪಂಕ್ತಿಯಲ್ಲಿ ನಿಂತು ಕೂಗುವ ದಲಿತ ಅಲೆಮಾರಿಗಳ ಧ್ವನಿಯನ್ನು ಕೇಳಿಸಿಕೊಳ್ಳಬೇಕಿದೆ. ಇಲ್ಲವಾದರೆ ಈ ಸಾಂಘಿಕ ಪರದೆಯಿಂದ ಈ ಪಂಕ್ತಿಯ ಹಿಂದೆ ಇರುವ ಸಮುದಾಯಗಳು ದೂರ ಸರಿದು ನಮ್ಮ ಬಲ ಕ್ಷೀಣಿಸುವ ಸಾಧ್ಯತೆಯಿದೆ.

ಕರ್ನಾಟಕ ರಾಜ್ಯದಲ್ಲಿನ ದಲಿತ ಅಲೆಮಾರಿ ಸಮುದಾಯಗಳ ಚಿತ್ರಣ ಗಮನಿಸಿದಾಗ ಬಹು ಸಂಸ್ಕೃತಿಯ ನೆಲೆವೀಡಾಗಿರುವ ನಮ್ಮ ದೇಶ ಇತ್ತೀಚೆಗೆ ಸಂದಿಗ್ಧ ಹಾಗೂ ಸಂಘರ್ಷ ಸ್ಥಿತಿಯಲ್ಲಿ ಮಿಂದಿದೆ ಎಂಬುದನ್ನು ಕಾಣಬಹುದು. ಖೇದದ ಸಂಗತಿಯೆಂದರೆ, ಬಲಿಷ್ಠ ಜಾತಿಗಳು ಕ್ಷಣಕ್ಷಣಕ್ಕೂ ತಮ್ಮ ಬಣ್ಣದ ಮುಖವಾಡದ ಮೂಲಕ ತಮ್ಮೊಳಗೆ ಇನ್ನಷ್ಟು ಐಕ್ಯತೆಯನ್ನು ಸಾಧಿಸುತ್ತಿವೆ. ರಾಜಕೀಯ ಅಧಿಕಾರವನ್ನು ತಮ್ಮದಾಗಿಸಿಕೊಂಡು ಶಕ್ತಿಹೀನ ಸಮುದಾಯಗಳನ್ನು ತುಳಿಯುವ ಹುನ್ನಾರವನ್ನು ತುಸು ಹೆಚ್ಚುಮಾಡಿಕೊಂಡಿವೆ. ಶಿಕ್ಷಣ, ಉದ್ಯೋಗ, ರಾಜಕೀಯ, ಅಧಿಕಾರ ಈ ಚತುರ್ಮುಖ ಶಕ್ತಿಯನ್ನು ತಮ್ಮ ಕೈವಶ ಮಾಡಿಕೊಂಡಿರುವ ಮೇಲ್ವರ್ಗಗಳು ನಮ್ಮ ನಮ್ಮಲ್ಲಿ ತಿಕ್ಕಾಟ ತೀಡಿ ಬೆಂಕಿ ಹೊತ್ತಿಸುತ್ತಿವೆ.

ಈ ಬೆಳವಣಿಗೆಗಳ ಕುರಿತ ಯಾವದೊಂದು ಅರಿವೂ ಇಲ್ಲದ ಅಲೆಮಾರಿ ಸಮುದಾಯಗಳು ಸಂಘಟನೆಯಂತಹ ಕನಿಷ್ಠ ಅರಿವೂ ಇಲ್ಲದೆ, ತಮ್ಮ ಹಕ್ಕನ್ನು ಉಳ್ಳವರ ಮತ್ತು ಬಲಿಷ್ಠರ ಪಾಲುಮಾಡಿ ಭಿಕ್ಷೆಗಿಳಿದಿರುವುದು ನೋವು ತರುವಂತಹ ವಿಷಯ. ಈ ದಿಸೆಯಲ್ಲಿ ಚಿಂತನೆಗೈದ ಹಿರಿಯರು ಗುರುತಿಸುವಂತೆ ನಮ್ಮ ದೇಶದಲ್ಲಿ ಜಾತಿ ಹಾಗೂ ಸಮುದಾಯಗಳ ಹೆಸರಿನಲ್ಲಿ ಸಂಘಟಿತವಾಗುವ ನೈತಿಕ ಹಕ್ಕು ಇರುವದು ಇಂಥ ವಂಚಿತ ಗುಂಪುಗಳಿಗೆ ಮಾತ್ರವೆನ್ನುವುದನ್ನು ಅರ್ಥೈಸಿಕೊಳ್ಳಬೇಕಿದೆ. ಬಲಿಷ್ಠ ಜಾತಿಗಳು ತಾವು ಮಾತ್ರ ಸಂಸ್ಕೃತಿ, ಕಲೆ, ಧರ್ಮದ ಹೆಸರಲ್ಲಿ ಒಂದುಗೂಡಿ ದಲಿತ ಸಮುದಾಯಗಳಲ್ಲಿ ಒಳಪಂಗಡಗಳೆಂಬ ವಿಷಬೀಜ ಬಿತ್ತಿ (ಅವರ ಸಮುದಾಯವನ್ನು) ಛಿದ್ರಗೊಳಿಸಿ ಒಡೆಯುವ ಪ್ರಯತ್ನದಲ್ಲಿ ಸಫಲವಾಗುತ್ತಿವೆ. ಈ ಒಳಸೂಕ್ಷ್ಮತೆ ನಮ್ಮ ದಲಿತ ಸಂಘಟನೆ ಮತ್ತು ಸಮುದಾಯಗಳಿಗೆ ಅರ್ಥವಾಗಬೇಕಿದೆ. ಈ ಹಿನ್ನೆಲೆಯಲ್ಲಿ ನಮ್ಮಲ್ಲಿ ಚಿಕ್ಕವರಿಂದ ಹಿರಿಯರವರೆಗೂ ಅವರ ಸಾಮಾಜಿಕ ಹೊಣೆಯ ಬಗ್ಗೆ ಅರಿವು ಮೂಡಿಸುವುದು ತುಂಬ ಅಗತ್ಯ. ಇಂಥ ಒಂದು ಸಾರ್ಥಕ ಜಾಗೃತಿಯತ್ತ ತಮ್ಮ ನೋವನ್ನು ತಳಮಳಿಸಿಕೊಂಡು ಅಲ್ಪಸ್ವಲ್ಪ ಶಿಕ್ಷಣ ಪಡೆದು ನೆಲೆಯ ಕಲ್ಪನೆ ಹೊತ್ತ ಅಲೆಮಾರಿ ಸಮುದಾಯದ ಯುವಕರು ಸಂಘಟನೆಯ ಕನಸು ಕಾಣುತ್ತಿದ್ದಾರೆ. ಇದರ ಫಲವೆಂಬಂತೆ ತಮ್ಮ ಸಾಂಸ್ಕೃತಿಕ ವಿವೇಚನೆಯನ್ನು ಚರಿತ್ರೆಯನ್ನಾಗಿಸುವ ಛಲ ತೊಟ್ಟು, ದಲಿತ ಅಲೆಮಾರಿ ಸಮುದಾಯಗಳ ಚಾರಿತ್ರಿಕ ದಾಖಲೆಯ ಸಾಹಸಕ್ಕಿಳಿದು, ಅತ್ಯಪೂರ್ವ ಕಾರ್ಯವನ್ನು ಮಾಡಿರುವುದು ಸಂತಸ ತರುವಂತಹ ಸಂಗತಿ.

ನಮ್ಮ ನೆಲದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಅಲೆಮಾರಿ ಸಮುದಾಯಗಳಿದ್ದರೂ



ಸದ್ಯಕ್ಕೆ ಇಪ್ಪತ್ತೆರಡು ದಲಿತ ಅಲೆಮಾರಿ ಸಮುದಾಯಗಳು ತಮ್ಮ ಚಾರಿತ್ರಿಕ ಸಂಪತ್ತನ್ನು ತೆರೆದಿಟ್ಟು ಸಾಂಸ್ಕೃತಿಕ ಕೇಂದ್ರದಲ್ಲಿ ಕರ್ನಾಟಕ ಸರ್ಕಾರದ ಪುಸ್ತಕ ಪ್ರಾಧಿಕಾರದಂತಹ ಸಂಸ್ಥೆಯಲ್ಲಿ ವಿಳಾಸ ಪಡೆದುಕೊಂಡಿರುವುದು ನಿಜಕ್ಕೂ ಹೆಮ್ಮೆಯ ಸಂಗತಿ. ಅದರಲ್ಲೂ ಆಯಾ ಸಮುದಾಯದ ಮೂಲಗಳಿಂದ ಬಂದ ಅಕ್ಷರ ಕ್ರಾಂತಿಗೆ ಒಗ್ಗಿಕೊಂಡು ಎಚ್ಚೆತ್ತ ಯುವಕರು ತಮ್ಮ ಬಂಧು-ಬಳಗದವರನ್ನು ಹುಡುಕಿ ಕ್ಷೇತ್ರಕಾರ್ಯ ನಡೆಸಿ ಚಿತ್ರಿಸಿದ ಅಧ್ಯಯನದ ಸಂಗತಿ ಹೊರಬಿದ್ದಿದೆ.

ಈ ಸಂಗತಿಯಿಂದ ದಲಿತ ಅಲೆಮಾರಿಗಳಲ್ಲಿ ಆರ್ಥಿಕ ಭದ್ರತೆಯಿಲ್ಲದೆ ನೋವು, ಹತಾಶೆ, ಅಕ್ಷರ ಜ್ಞಾನದ ಕೊರತೆ, ಎಷ್ಟೆಷ್ಟೋ ಸಮುದಾಯಗಳಿಗೆ ಒಂದೂರು, ಒಂದು ಸೂರು ಕೂಡ ಗತಿಯಿಲ್ಲದೆ, ನಗರಗಳ ಕೊಳೆಗೇರಿಯ ಕೊಳೆಯಲ್ಲಿ ಜೀವನ ಸಾಗಿಸುತ್ತಿರುವುದು, ಗ್ರಾಮಗಳ ಪಾಳು ಜಾಗೆಯಲ್ಲಿ ಬದುಕು ನಡೆಸುತ್ತಿರುವವರ ಪಾಡು ಹೇಳತೀರದು. ನಗರದಲ್ಲಿ ಬದುಕಿದರೂ ನಾಗರಿಕರಾಗದೆ, ಗ್ರಾಮದಲ್ಲಿದ್ದೂ ಗ್ರಾಮಸ್ಥರಾಗದೆ ರಾಜಕೀಯ ಮತ್ತು ಅಭಿವೃದ್ಧಿಯ ಮೋಸಕ್ಕೆ ಬಲಿಯಾಗಿ, ವಿಲವಿಲ ಒದ್ದಾಡುತ್ತಿರುವ ಆ ಸಮುದಾಯಗಳ ದಾರುಣ ಚಿತ್ರಣವನ್ನು ಅರ್ಥಮಾಡಿಕೊಳ್ಳಬೇಕಿದೆ. ನಮ್ಮ ದಲಿತ ಸಾಹಿತ್ಯ ಚಳುವಳಿ ಇದನ್ನು ಒಳಗುಮಾಡಿಕೊಂಡಿದ್ದೇ ಆದರೆ ತನ್ನ ಮೆರುಗನ್ನು ಹೆಚ್ಚಿಸಿಕೊಂಡಂತಾಗುತ್ತದೆ. ಆದ್ದರಿಂದ ಅಲೆಮಾರಿ ಸಮುದಾಯಗಳನ್ನು ವಿವರಿಸಿ ಸಾಧಾರ ವಿವೇಚನೆಯನ್ನು ಮೂಡಿಸಲು ಇಲ್ಲಿ ಪ್ರಯತ್ನಿಸಿದ್ದೇನೆ.

ಭಾರತೀಯ ಸಮುದಾಯಗಳನ್ನು ಗಮನಿಸಿದಾಗ ೭೪೯ ವಿಮುಕ್ತ ಮತ್ತು ಅಲೆಮಾರಿ ಸಮುದಾಯಗಳು ಅಸ್ತಿತ್ವದಲ್ಲಿರುವುದನ್ನು ಗಮನಿಸಬಹುದು. ನಮ್ಮ ದೇಶದ ಜನಸಂಖ್ಯೆಯ ಸುಮಾರು ೧೧ ಕೋಟಿಯಷ್ಟು ಜನ ಅಲೆಮಾರಿಗಳು ಇಲ್ಲಿ ವಾಸಿಸುತ್ತಿದ್ದಾರೆ. ಇದರಲ್ಲಿ ಅತಿ ಹೆಚ್ಚು ಜನ ಇರುವ ಪ್ರದೇಶವೆಂದರೆ ಮಹಾರಾಷ್ಟ್ರ. ಇಲ್ಲಿ ೭೨ ಬಗೆಯ ಅಲೆಮಾರಿಗಳು ವಾಸಿಸುತ್ತಿದ್ದಾರೆ. ತದನಂತರದ ಸ್ಥಾನ ನಮ್ಮ ರಾಜ್ಯಕ್ಕಿದೆ. ಕರ್ನಾಟಕದಲಿ ಇಂತಹ ೫೯ ಸಮುದಾಯಗಳು ಬದುಕುತಿವೆ. ಇವು ಸಂವಿಧಾನದ ಮೀಸಲಾತಿಯಲ್ಲಿ ಪರಿಶಿಷ್ಟ ಮತ್ತು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ವಿಲೀನಗೊಂಡಿರುತ್ತವೆ.

**'ಅಲೆಮಾರಿ' ಪದ**

'ಅಲೆಮಾರಿ' ಎನ್ನುವ ಕನ್ನಡ ಪದಕ್ಕೆ ಲ್ಯಾಟಿನ್ ಭಾಷೆಯಲ್ಲಿ ನೋಮಾಸ್ ಎಂದು, ಇಂಗ್ಲಿಷ್‌ನಲ್ಲಿ ನೋಮ್ಯಾಡ್ ಎಂದು, ಗ್ರೀಕ್ ಭಾಷೆಯಲ್ಲಿ ನೇವಿನ್, ತಮಿಳಿನಲ್ಲಿ ಪೊಕ್ಕನ್, ತೆಲುಗಿನಲ್ಲಿ ತಿರುಗುಬೋತು, ತುಳುವಿನಲ್ಲಿ ತೆಂಡುಳಿ, ಮಲೆಯಾಳಂನಲ್ಲಿ ತೆಂಟಿ, ಮರಾಠಿಯಲ್ಲಿ ಭಟಕ್ಯಾ, ಹಿಂದಿಯಲ್ಲಿ ಸಂಚಾರಿ, ಘುಮಂತು ಎಂದು, ನಮ್ಮ ಪ್ರಾದೇಶಿಕ ಕನ್ನಡ ಭಾಷೆಯಲ್ಲಿ ನೆಲೆಯಿಲ್ಲದವರು, ಸಂಚಾರಿಗಳು, ಪರಊರಿನವರು, ಬಿಡಾರದ ಜನ, ವಲಸಿಗರು, ಗುಳೇ ಹೊರಡುವವರು ಎಂದೆಲ್ಲ ಗುರ್ತಿಸಲಾಗಿದೆ. ಇವರು ಭಿಕ್ಷೆಯನ್ನು ಮುಖ್ಯವಾಗಿಸಿ ಕೊಂಡದ್ದರಿಂದ ಕನ್ನಡದಲ್ಲಿ ಭಿಕ್ಷುಕರೆಂದು, ತಮಿಳಿನಲ್ಲಿ ಪಿಚ್ಚೈಕಾರರೆಂದು, ಹಿಂದಿಯಲ್ಲಿ ಭಿಕಾರಿಯೆಂದು ಗುರುತಿಸಿಕೊಂಡು ದಿಕ್ಕು-ದೆಸೆಯಿಲ್ಲದೆ ತಿರುಗುವ ಜನ ಇವರಾಗಿದ್ದಾರೆ.

**ಅಲೆಮಾರಿಯ ಲಕ್ಷಣಗಳು**

೧. ಬೇಟೆ ಸಂಪ್ರದಾಯ, ಪ್ರಾಣಿಗಳ ಪಳಗಿಸುವಿಕೆ, ಪ್ರದರ್ಶನ, ನಾಟಿ ವೈದ್ಯ, ದೈವಾರಾಧನೆ, ಭಿಕ್ಷಾಟನೆ, ಕೆಲವು ಪ್ರಾಣಿಗಳ ಸಾಕಣಿಕೆ, ಹಗಲುವೇಷ, ಬುರ್ರಕಥಾ, ಗೊಂದಲ, ದಾಸರಪದ, ಡೊಂಬರಾಟ, ಬಯಲಾಟ, ತೊಗಲುಗೊಂಬೆಯಾಟ, ಮಾರಮ್ಮ ದೈವಗಳ ಪ್ರದರ್ಶನ, ಸಣ್ಣ-ಪುಟ್ಟ ವಸ್ತುಗಳ ಮಾರಾಟ, ಅವುಗಳ ರಿಪೇರಿ, ತ್ಯಾಜ್ಯ ವಸ್ತುಗಳನ್ನು ಆರಿಸುವುದು.

೨. ನಿರಾಡಂಬರ, ನಿಷ್ಕಪಟ, ಸರಳ, ಸಹಜ ನಿರಕ್ಷರಿಗಳು, ಅತಿಯಾದ ಮೌಢ್ಯ, ಬಂಡವಾಳ ಶೂನ್ಯ, ಹೊಟ್ಟೆ ಹೊರೆಯುವುದೇ ಕಾಯಕ.

೩. ಪ್ರಕೃತಿಯ ಆರಾಧಕರು ಅಗೋಚರ ಶಕ್ತಿಗಳ ಸಿದ್ಧಹಸ್ತರು, ಸರ್ವಚೇತನವಾದಿಗಳು.

೪. ತಮ್ಮ ಸಮುದಾಯಕ್ಕೆ ಸೀಮಿತವಾದ ಮಾತೃಭಾಷೆ ಬಳಕೆ, ಕುಟುಂಬಕ್ಕೆ ಸೀಮಿತವಾದ ಮುರುಗ ಭಾಷೆ ಬಳಕೆ.

೫. ಗುಡಿ-ಗುಂಡಾರಗಳ ಪಾಳು ಜಾಗೆ, ಬಯಲಿನ ಗಿಡ ಮರಗಳ ಕೆಳಗೆ, ನಗರದ ಕೊಳಚೆ ಪ್ರದೇಶಗಳಲ್ಲಿ ತಾತ್ಕಾಲಿಕ ವಾಸ.

೬. ಎಣ್ಣೆ ಕಾಣದ ಹೆಣ್ಣು-ಗಂಡಿನ ಒರಟಾದ ಕೂದಲು, ತೊಳೆಯಲಾಗದ ಬಟ್ಟೆ-ಬರೆ.



೭. ತಮ್ಮ ಜ್ಞಾನಕ್ಕನುಸರಿಸಿ ಕೈಯಲ್ಲಿ ತಾಳ-ತಂಬೂರಿ, ಬಗಲಿಗೊಂದು ಜೋಳಿಗೆ.

೮. ಭವಿಷ್ಯದ ಅರಿವಿಲ್ಲದೆ ಸದ್ಯದ ಯೋಚನೆಯಲ್ಲಿ ಕಾಲ ವಿಳಂಬ.

ಇಂತಹ ತಮ್ಮದೇ ಆದ ಗುರುತನ್ನು ಉಳಿಸಿಕೊಂಡು ಸಂಪೂರ್ಣ ನೆಲೆಯಿಲ್ಲದ ಅತಂತ್ರ ಸ್ಥಿತಿಯಲ್ಲಿರುವ ಕರ್ನಾಟಕ ರಾಜ್ಯದ ದಲಿತ ಅಲೆಮಾರಿ ಸಮುದಾಯಗಳೆಂದರೆ, ಪರಿಶಿಷ್ಟ ಜಾತಿಯಲ್ಲಿರುವ ಬುಡ್ಗ ಜಂಗಮ, ಚನ್ನದಾಸರ, ದಕ್ಕಲಿಗ, ದೊಂಬರ, ಗೋಸಂಗಿ, ಹಂಡಿಜೋಗಿ, ಕೊರಮ, ಮದಾರಿ, ಮಾಂಗಗಾರುಡು, ಸಿಂದೊಳ್ಳು, ಸುಡಗಾಡು ಸಿದ್ಧ ಅಥವಾ ಮಸಣಜೋಗಿ, ಶಿಳ್ಳೇಕ್ಯಾತರು ಮತ್ತು ಇವುಗಳ ಪರ್ಯಾಯ ಪರಿಶಿಷ್ಟ ಪಂಗಡದಲ್ಲಿರುವ ಅಡವಿ ಚಿಂಚೇರ, ಪಾರ್ಥಿ, ಡುಂಗ್ರಿ ಗರಾಸೀಯಾ, ಹಕ್ಕಿ ಪಿಕ್ಕಿ, ನಾಯಕ (ಮಂಡ್ರು) ಮತ್ತು ರಾಜಗೊಂಡ. ಹಿಂದುಳಿದ ವರ್ಗದಲ್ಲಿರುವ ಅಲೆಮಾರಿ ಕುರುಬ, ಬೈಲ ಪತ್ತಾರ, ಕಂಜೆರಭಾಟ, ಕಾಡುಗೊಲ್ಲ, ಗೊಂಧಳಿ, ಘಿಸಾಡಿ, ಹೆಳವ ಸಿಕ್ಕಲಗಾರ ಇತ್ಯಾದಿ. ಇಲ್ಲಿ ಸಿಕ್ಕಲಗಾರ ಎನ್ನುವ ಸಮುದಾಯ ಕರ್ನಾಟಕ ರಾಜ್ಯದ ಯಾವುದೇ ಜಾತಿಯ ಪಟ್ಟಿಯಲ್ಲಿ ಸೇರಿರುವುದಿಲ್ಲ. ಇದೊಂದು ದುರ್ದೈವದ ಸಂಗತಿ. ಇದಲ್ಲದೆ ಶಿಳ್ಳೇಕ್ಯಾತರ ಪರ್ಯಾಯ ಪದ ಕಿಳ್ಳೇಕ್ಯಾತ ಎಂಬ ಪದವನ್ನು ಬೇರೆ ಬೇರೆ ವರ್ಗದ ಪಟ್ಟಿಯಲ್ಲಿ ಸೇರಿಸಲಾಗಿದೆ. ಇಂತಹ ಹಲವು ಪ್ರಮಾದಗಳ ಉದಾಹರಣೆಗಳೂ ಇವೆ. ಅಲೆಮಾರಿಗಳಿಗೆ ಐಡೆಂಟಿಟಿಯನ್ನು ನಿರ್ಧರಿಸಿ, ಬದುಕುವ ಹಕ್ಕನ್ನು ಅರ್ಥೈಸುವ, ಅಭಿಯಾನ ಹಾಕಿಕೊಳ್ಳುವ ಮೂಲಕ ನಮ್ಮ ದಲಿತ ಚಳುವಳಿಯನ್ನು ಗಟ್ಟಿಗೊಳಿಸಬೇಕಿದೆ. ಸಂವಿಧಾನಬದ್ಧವಾದ ಸಾಮಾಜಿಕ ನ್ಯಾಯ ದೊರಕಿಸಿಕೊಡುವ ಕಾರ್ಯ ಇದುವರೆಗೂ ಸಂಪೂರ್ಣವಾಗಿ ಯಾವುದೇ ಸರ್ಕಾರದಿಂದ ಆಗಿರಲಾರದು. ಈ ನಿಟ್ಟಿನಲ್ಲಿ ಸರ್ಕಾರಗಳಿಗೆ ಹಲವು ಆಯೋಗಗಳಿಗೆ ಸಮುದಾಯಗಳ ಗೋಳನ್ನು ಕಣ್ಣಾರೆ ಕಾಣಿಸುವಂತೆ ನಮ್ಮ ಚಳುವಳಿ ಕೆಲಸ ಮಾಡಬೇಕಿದೆ.

ನಮ್ಮ ದೇಶ ಜಾತಿ ಆಧಾರಿತ ಮೀಸಲಾತಿ ಅನುಸರಿಸುವ ಮಾರ್ಗಕ್ಕೆ ಇಳಿದಿದೆ. ಅದರಂತೆ ನಮ್ಮ ರಾಜ್ಯ ಸರ್ಕಾರಗಳು ಈ ದಿಸೆಯಲ್ಲಿ ಕಟ್ಟ ಕಡೆಯ ನಿರ್ಲಕ್ಷಿತ ಸಮುದಾಯಗಳಿಗೆ ಮೀಸಲಾತಿ ಪಟ್ಟಿಯಲ್ಲಿ ಸೂಕ್ತ ಸ್ಥಾನ ಕಲ್ಪಿಸುವಂತಾಗಬೇಕು. ದಿಕ್ಕು ದೆಸೆಯಿಲ್ಲದ ಈ ಸಮುದಾಯಗಳಿಗೆ ನೆಲೆ ಕಲ್ಪಿಸಲು ಸದ್ಯ ಯಾವ ಊರಿನಲ್ಲಿ ಅವರು ಟೆಂಟ್ ಊರಿರುವರೋ, ಅದೇ ಊರಿನಲ್ಲಿ ಅವರೆಲ್ಲರಿಗೂ ಬದುಕುವಂತೆ ಸೂರು ಒದಗಿಸುವ ಕೆಲಸವನ್ನು ಸರ್ಕಾರ ಮಾಡಬೇಕೆಂದು ಒತ್ತಡ ತರುವಂತೆ ನಮ್ಮ ಸಂಘಟನೆ, ನಮ್ಮ ಚಳುವಳಿಯ ಸಂಕೀರ್ಣ ಗಟ್ಟಿಯಾಗಬೇಕು. ಹೀಗಾದಾಗ ಸಂಘಟನಾ ಚಿಂತನೆಗಳು ಇಂತಹ ಹೊಸ ರೂಪಕ್ಕೆ ನಾಂದಿಯಾಗುವುದು ಸೂಕ್ತವೆನಿಸುತ್ತದೆ. ಅಂತೆಯೇ ಇಂತಹ ಚರ್ಚೆಗಳು ನಡೆಯುವುದು ಅಗತ್ಯವೆಂದು ಭಾವಿಸಿದ್ದೇನೆ.

**ಡಾ॥ ಸಣ್ಣವೀರಣ್ಣ ದೊಡ್ಡಮನಿ**
ಎಸ್. ಎಮ್. ಭಂಡಾರಿ ಮರಾಠಿ ಪದವಿ ಮಹಾವಿದ್ಯಾಲಯ
ಗುಳೇದಗುಡ್ಡ – ೫೮೭ ೨೦೩, ಬದಾಮಿ ತಾಲೂಕು
ಬಾಗಲಕೋಟ ಜಿಲ್ಲೆ

ನಾನು ಓದಿದ ಪುಸ್ತಕ

ಕೃತಿ : **'ಡೇರಿ ಡಾಕ್ಟರ್ ಹೋರಿ ಮಾಸ್ಟರ್'**
(ಪಶುವೈದ್ಯರ ನೈಜ ಅನುಭವ ಕುರಿತ ಜೇಮ್ಸ್ ಹೆರಿಯಟ್ ಕಥಾನಕ)

ಮೂಲ ಲೇಖಕರು : **ಜೇಮ್ಸ್ ಹೆರಿಯಟ್**
ಕನ್ನಡ ರೂಪಾಂತರ : **ಡಾ|| ಗಣೇಶ್ ಎಂ. ನೀಲೇಸರ**

ಪ್ರಕಾಶಕರು
ಭೂಮಿ ಬುಕ್ಸ್, ೧೫೦/೧ನೇ ಮುಖ್ಯರಸ್ತೆ ಶೇಷಾದ್ರಿಪುರಂ, ಬೆಂಗಳೂರು.

ಪುಟಗಳು : ೧೬೦    ಬೆಲೆ : ರೂ. ೧೨೦/-




# ಪಶುವೈದ್ಯಕೀಯ ಲೋಕದ ಹಸುರು ಹೊನ್ನು ಡೇರಿ ಡಾಕ್ಟರ್ ಹೋರಿ ಮಾಸ್ಟರ್

ವೆಟಿಕೊ (ಪಶುವೈದ್ಯ ವಿದ್ಯಾರ್ಥಿ) ಸುಮಂತ್ ತರಗತಿಗಳನ್ನು ಮುಗಿಸಿ ಮನೆಗೆ ಬಂದಾಗ ಅವನ ಏಪ್ರನ್ ತುಂಬ ಹತ್ತಿರುವ ಧೂಳು, ಕೆಸರು, ಗಲೀಜು ಪ್ರಾಣಿಗಳೊಂದಿಗೆ ಅವನ ಕುಸ್ತಿಯನ್ನು ಸಾರಿ ಹೇಳುತ್ತವೆ. ಬಿಳಿ ಏಪ್ರನ್ ಇಸ್ತ್ರಿ ಮಾಡಿದಾಗಷ್ಟೇ ಬೆಳ್ಳಗಿರುತ್ತೆ. ಪ್ರಾಕ್ಟಿಕಲ್ಸ್ ಮುಗಿಸಿ ಬಂದಾಗ ಕಂದು, ಹಳದಿ, ಹಸಿರು, ಮಣ್ಣು, ಕೆಸರು ಎಲ್ಲ ಬಣ್ಣಗಳ ಮಿಶ್ರಣ ಆಗಿರುತ್ತೆ. ಆ ಬಣ್ಣಗಳಷ್ಟೇ ಅವನ ಅನುಭವಗಳೂ ಬಣ್ಣಬಣ್ಣವಾಗಿರುತ್ತವೆ !

"ಪಪ್ಪು, ಇವತ್ತು ಹಂದಿ ಮರಿಗಳನ್ನು ತೊಳೆದು, ಔಷಧಿ ಹಾಕಿದೆ ಕಣೋ", ಅಂತಲೋ, "ಅಮ್ಮ, ಇವತ್ತು ಮೊಲದ ಮರಿಗಳನ್ನು ಸ್ವಚ್ಛಮಾಡಿದೆ. ಕೋಳಿ ಪಿಳ್ಳೆಗಳಿಗೆ ಡ್ರಾಪ್ಸ್ ಹಾಕಿದೆ", ಅಂತಲೋ ಹೇಳುತ್ತಲೇ ಇರುತ್ತಾನೆ. ಒಂದು ದಿನ ತಲೆಯಿಂದ ಕಾಲಿನವರೆಗೆ ಕೆಸರಿನಲ್ಲಿ ಅದ್ದಿ ತೆಗೆದ ರೂಪ ಇಟ್ಟುಕೊಂಡು ಬಂದು, "ಪಪ್ಪು, ಇವತ್ತು ಕುರಿ, ಮೇಕೆ, ಟಗರುಗಳ ಅಳತೆ ನೋಡಿ, ತೂಕ ಹಾಕಿದ್ವಿ ಕಣೋ. ಎಲ್ರೂ ಸಣ್ಣ ಸಣ್ಣ ಗಾತ್ರದವುಗಳನ್ನು ಬೇಗ ಬೇಗ ತೆಗೆದುಕೊಂಡು, ಅಳತೆ ಮಾಡಿಬಿಟ್ರು. ಒಂದು ದೊಡ್ಡ ಟಗರು, ಸುಮಾರು ೪೮ ಕಿಲೋ ತೂಕದ್ದು. ಅದನ್ನು ಹಿಡೀಲಿಕ್ಕೆ ಬಹಳ ಕಷ್ಟ ಆಯ್ತು. ಕೊನೆಗೆ ಡಬ್ಲ್ಯುಡಬ್ಲ್ಯುಎಫ್ ಫೈಟಿಂಗ್ ಥರ ಅದರ ಜೊತೆ ಗುದ್ದಾಡಿ, ಎತ್ತಿಕೊಂಡು ಬಂದು, ತೂಕ ಹಾಕಿಯೇ ಬಿಟ್ಟೆ ಕಣೋ", ಅಂತ ತನ್ನ ಸಾಹಸ ಕೊಚ್ಚಿಕೊಂಡ !

ಪ್ರಾಣಿಗಳ ಜೊತೆ ಒಡನಾಟ ನಿಜಕ್ಕೂ ಆಸಕ್ತಿ ಹುಟ್ಟಿಸುವಂಥದ್ದು. ಒಂದೊಂದು ಪ್ರಾಣಿಯೂ ಒಂದೊಂದು ಸ್ಪೆಸಿಮನ್. ಒಂದರಂತೆ ಮತ್ತೊಂದು ಇರುವುದು ಅಪರೂಪವೇ. ಅವುಗಳ ಆರೈಕೆ ಅವುಗಳ ಒಡೆಯರ ತೃಪ್ತಿ ಎರಡೂ ಒಂದಕ್ಕೊಂದು ತಳಕು ಹಾಕಿಕೊಂಡೇ ಇರುತ್ತವೆ. ಭಾರತದಲ್ಲಿ ಪಶುವೈದ್ಯಕೀಯ ರಂಗ ಇನ್ನೂ ಅರಳುವ ಸ್ಥಿತಿಯಲ್ಲಿಯೇ ಇದೆ. ಇರುವ ನಾಲ್ಕು ಕಾಲೇಜುಗಳಿಂದ ಹೊರಬರುವ ಬೆರಳೆಣಿಕೆಯ ಡಾಕ್ಟರುಗಳು, ಪಶುವೈದ್ಯ

**ಬೇದ್ರೆ ಮಂಜುನಾಥ**

ಸಹಾಯಕರು, ಪಶುವೈದ್ಯ ಇಲಾಖೆಯ ಸಿಬ್ಬಂದಿಯ ಜೊತೆ ಹಾಲು ಒಕ್ಕೂಟಗಳಿಂದ ನೇಮಕಗೊಂಡಿರುವ ಸಿಬ್ಬಂದಿ ತಮ್ಮ ನಿತ್ಯದ ರುಟೀನ್ ಟ್ರೀಟ್‌ಮೆಂಟ್‌ಗಳ ತಲೆಬಿಸಿಗಳಲ್ಲಿ ಪಶುಗಳ ಜೊತೆಗೆ ಒಡನಾಡುವ ಅಪೂರ್ವ ಅವಕಾಶದ ಸವಿಯನ್ನು ಕಳೆದು ಕೊಳ್ಳುತ್ತಿದ್ದಾರೆಂದೇ ಹೇಳಬೇಕು. ಅಲ್ಲೊಂದು ಇಲ್ಲೊಂದು ಅಪವಾದಗಳಿರಬಹುದಾದರೂ ಪಶುಗಳ ಆರೈಕೆಯ ಸವಿನೆನಪುಗಳನ್ನು ಹಂಚಿಕೊಳ್ಳುವವರು ಇಲ್ಲವೆಂದರೆ ಅತಿಶಯೋಕ್ತಿಯಲ್ಲ.

ಇಂಗ್ಲೆಂಡಿನ ಪಶುವೈದ್ಯ ಜೇಮ್ಸ್ ಹೆರಿಯಟ್ (ಜೇಮ್ಸ್ ಆಲ್‌ಫ್ರೆಡ್ ವೈಟ್) ತನ್ನ ಡೈರಿಯಲ್ಲಿ ಬರೆದಿಟ್ಟುಕೊಂಡ ಅಪೂರ್ವ ಅನುಭವಗಳನ್ನು 'ಆಲ್ ಕ್ರೀಚರ್ಸ್ ಗ್ರೇಟ್ ಅಂಡ್ ಸ್ಮಾಲ್' ಎಂಬ ಪುಸ್ತಕದ ರೂಪದಲ್ಲಿ ಪ್ರಕಟಿಸಿದ ನಂತರ ಜನಸಾಮಾನ್ಯರಿಗೂ ಪಶುವೈದ್ಯನ ಅನುಭವಗಳು ಆತ್ಮೀಯವಾಗ ತೊಡಗಿದವು. "ಪಶುವೈದ್ಯರಷ್ಟೇ ಅಲ್ಲದೇ ಸಾಮಾನ್ಯ ಓದುಗರನ್ನೂ ಸಹಿತ ಪ್ರಾಣಿಗಳ ಲೋಕಕ್ಕೆ ಕೊಂಡೊಯ್ಯುವ ಸಾಮರ್ಥ್ಯವಿರುವುದು ಈತನ ಕಥೆಗಳ ವಿಶೇಷ" ಎನ್ನುವ ಬೆರಗುಗಣ್ಣಿನಿಂದ ಹೆರಿಯಟ್‌ನ ಬರಹಗಳನ್ನು ಓದಿದ ಡಾ|| ಗಣೇಶ್ ಎಂ. ನೀಲೇಸರ ಆ ಕಥೆಗಳಲ್ಲಿ ಕೆಲವನ್ನು ಆಯ್ದು, ಕನ್ನಡದ ವಾತಾವರಣಕ್ಕೆ ಹೊಂದುವಂತೆ ಮಾರ್ಪಡಿಸಿ, ಮೂಲದ ಸಾರವನ್ನು ಯಥಾವತ್ತಾಗಿ, ಆತ್ಮೀಯವಾಗಿ ನಿರೂಪಿಸಿದ್ದಾರೆ. **"ಇದು ಪಶುವೈದ್ಯಕೀಯ ಲೋಕದ ಹಸುರು ಹೊನ್ನು"** ಎಂಬ ಬೆನ್ನುಡಿಯ ಮಾತು, ಬಿ. ಜಿ. ಎಲ್. ಸ್ವಾಮಿಯವರು ಅನಾವರಣಗೊಳಿಸಿದ ಸಸ್ಯಲೋಕದ ಕೌತುಕ ಪ್ರಾಣಿಪ್ರಪಂಚದಲ್ಲಿಯೂ ಕಾಣಿಸಲು ಸಾಧ್ಯ ಎನ್ನುವುದಕ್ಕೆ ಈ ಕೃತಿ ಸಾಕ್ಷಿಯಾಗುತ್ತದೆ. ಹೆರಿಯಟ್ 'ಹರಿ'ಯಾಗಿದ್ದರೆ, ಅವನ ಬಾಸ್ 'ಪ್ರಜಾಪತಿ'ಯಾಗಿದ್ದಾರೆ ಇಲ್ಲಿ ! ಇಂಗ್ಲೆಂಡಿನ ಕ್ರಿಶ್ಚಿಯನ್ ಹೆಸರುಗಳೆಲ್ಲಾ ಕನ್ನಡಕ್ಕೆ ವಲಸೆ ಬಂದು ಗುಡ್ಡದಮನೆಯ ಭರಮಣ್ಣ, ಮಾವಿನಕೆರೆಯ ಅಣ್ಣ-ತಮ್ಮಂದಿರು, ಕಿರೀಟಿ,

ಪಶುವೈದ್ಯಕೀಯ ಕ್ಷೇತ್ರದತ್ತ ಹೆಚ್ಚಿನ ಆಸಕ್ತಿ ಕೆರಳಿಸುವ ಇಲ್ಲಿನ ಕಥೆಗಳಲ್ಲಿ ಪಶು ಸಹಾಯಕ ಮತ್ತು ಪಶುವೈದ್ಯದ ವಿದ್ಯಾರ್ಥಿಗಳಿಗೆ ತಾವು ಮುಂದೆ ಕೈಗೊಳ್ಳಲಿರುವ ಸೇವಾ ಚಟುವಟಿಕೆ, ಪಶುವೈದ್ಯರ ದಿನಚರಿ, ಪೇಚಾಟಗಳು, ಮಾನವೀಯ ಗುಣಗಳು ಹೇಗಿರುತ್ತವೆ ಎನ್ನುವುದರ ಕಿರುಪರಿಚಯ ಮಾಡಿಕೊಡುತ್ತವೆ. ಹಾಗೆಯೇ ಇಲ್ಲಿ ಪ್ರಸ್ತಾಪಿತವಾಗಿರುವ ಕೀಟೋಸಿಸ್, ಬ್ರುಸೆಲೋಸಿಸ್, ಮಿಲ್ಕ್ ಫೀವರ್, ಮಿಕ್ಸೆಡಿಮಾ, ಅರ್ಟಿಕೇರಿಯಾ, ಆಕ್ಟಿನೋ ಬ್ಯಾಸಿಲೋಸಿಸ್, ಕೆನ್ಯೆನ್ ಡಿಸ್ಟೆಂಪರ್, ಪೆರಿಟೋನೈಟಿಸ್, ಲಿವರ್ ಫ್ಲೂಕ್, ಪಶುಗಳಿಗೆ ಬರುವ ಕೆಲವು ಕಾಯಿಲೆಗಳು, ಅವುಗಳಿಂದ ಉಂಟಾಗುವ ನಷ್ಟ, ಫಜೀತಿ, ಮಾಲೀಕರ ಪರದಾಟ ಎಲ್ಲವೂ ಅತಿ ಎನಿಸದಂತೆ, ಹಾಸ್ಯರಸ ಲೇಪನದೊಂದಿಗೆ ಮೂಡಿಬಂದು ನಗುವಿನೊಂದಿಗೆ ನೋವಿನ ಗಾಢತೆಯನ್ನೂ ಪರಿಚಯಿಸುತ್ತವೆ.

ದೇವಪ್ಪ, ರಾಜಪ್ಪ, ವಾಸು, ಈಶ್ವರ, ಶೇಷಪೂಜಾರಿ, ಹಂಪಣ್ಣ, ಧಾಕಪ್ಪ, ಜಲಜಮ್ಮ, ಮಾಲಿನಿ ಶರ್ಮ, ನಳಿನಿ, ಲೀನಾ, ಕರಿಯಪ್ಪ, ಭರಮಣ್ಣ, ಹೊನ್ನಪ್ಪ, ಸೋಮಶೇಖರ, ಭೀಮೇಶ, ಶಾಣಪ್ಪ, ಚಂದಪ್ಪ, ನಾಥಪ್ಪ, ಕಪಾಲಿ, ರೈ, ಸೋಮಯ್ಯ – ಇತ್ಯಾದಿ ಕನ್ನಡದ ಕಣ್ಮಣಿಗಳಾಗಿವೆ !

"ಎಮ್ಮೆಯ ಬೆನ್ನಿಗೆ ತಣ್ಣೀರು" ಎಂಬ ಲೇಖಕರ ಸ್ವಂತ ಅನುಭವಗಳ ನಿರೂಪಣೆಯಿಂದ ಆರಂಭಗೊಳ್ಳುವ ಇಪ್ಪತ್ತು ಕಥೆಗಳ ಈ ರಸಗವಳದ ಭಾಷೆ, ಶೀರ್ಷಿಕೆ ಮತ್ತು ಚಿತ್ರಕಲಾ ಪರಿಷತ್ತಿನ ವಿದ್ಯಾರ್ಥಿನಿ ಶ್ವೇತಾ ಆಡುಕಲಾ ರಚಿಸಿರುವ ಚಿತ್ರಗಳು ಘಟನಾವಳಿಗಳನ್ನು ಕಣ್ಣಿಗೆ ಕಟ್ಟಿಸುವಂತಿವೆ. ನಾಗೇಶ್ ಹೆಗಡೆಯವರ ಮುಖಪುಟ ವಿನ್ಯಾಸವೂ ಗ್ರಾಮೀಣ ಪರಿಸರಕ್ಕೆ ಒಪ್ಪುವಂತಿದೆ. ಮೇಲುನೋಟಕ್ಕೆ ಇದು ಪಶುವೈದ್ಯರ ನಿತ್ಯ ಅನುಭವಗಳ ನಿರೂಪಣೆಯಂತಿದ್ದರೂ ಆಂತರ್ಯದಲ್ಲಿ ಮಾನವ ಸ್ವಭಾವ, ಪ್ರಾಣಿಗಳ ಪ್ರೀತಿ, ನೋವು–ನಲಿವು, ಗ್ರಾಮೀಣ ಪರಿಸರ, ಜೀವನ, ಆರ್ಥಿಕ ಸ್ಥಿತಿ ಮುಂತಾದವುಗಳನ್ನು ತಿಳಿಸುವ ಸಾಮಾಜಿಕ–ಸಾಂಸ್ಕೃತಿಕ ಕಥಾನಕವಾಗಿದೆ.

ಒಬ್ಬೊಬ್ಬರ ಸ್ವಭಾವ ಒಂದೊಂದು ರೀತಿಯದ್ದು. ಮಾರ್ಜಾಲದ ಜಲಜಮ್ಮನಂತಹ ಜಿಪುಣ ವ್ಯಕ್ತಿ, ಕ್ರಿಸ್‌ಮಸ್ ಬೆಳ್ಳಂಬೆಳಗ್ಗೆ ಎಬ್ಬಿಸಿ ತೊಂದರೆ ಕೊಟ್ಟದ್ದಲ್ಲದೆ ಮಿಲ್ಕ್‌ಫೀವರ್‌ಗೆ ಸಕಾಲದಲ್ಲಿ ಚಿಕಿತ್ಸೆ ಕೊಟ್ಟದ್ದಕ್ಕಾಗಿ ಥ್ಯಾಂಕ್ಸ್ ಹೇಳದ ಗುಡ್ಡದಮನೆಯ ಭರಮಣ್ಣ, ತೇಜೋವಧೆ ಮಾಡುವುದನ್ನೇ ಕಸುಬಾಗಿಸಿಕೊಂಡ ಸತ್ಯಪಾಲ, ಪಶು ಪ್ರದರ್ಶನಗಳಲ್ಲಿ ಬಹುಮಾನ ಗೆಲ್ಲಲೆಂದೇ ಕಳ್ಳ ಮಾರ್ಗಗಳನ್ನು ಅನುಸರಿಸುವ ಪ್ರಾಣಿಗಳ ಒಡೆಯರು ಒಂದೆಡೆ ಇದ್ದರೆ ಡೇರಿ ಫಾರ್ಮಿನ ಕನಸು ಕಟ್ಟಿಕೊಂಡು ನಗರದಿಂದ ಗ್ರಾಮಕ್ಕೆ ಬರುವ ಕಿರೀಟಿಯಂತಹ ತರುಣರು ರೋಗಗ್ರಸ್ತ ಹಸುಗಳನ್ನು ನಿಭಾಯಿಸಲಾಗದೆ ಕನಸನ್ನೇ ಮಾರಿಕೊಳ್ಳುವುದು, ನಾಯಿ ಸಾಕಿ, ಅದರ ಆರೈಕೆಗೆ ಕಷ್ಟಪಟ್ಟು ದುಡಿದು, ದುಷ್ಟ ಹವ್ಯಾಸಗಳಿಂದ ಮುಕ್ತನಾದ ವಾಸು ನಾಯಿ ಕಾಯಿಲೆಗೆ ಬಲಿಯಾದಾಗ ಮರಳಿ ದುಷ್ಟತನಕ್ಕೆ ಇಳಿಯುವುದು, ಕೈಗುಣದ ಮೇಲೆ ಅತಿಯಾದ ವಿಶ್ವಾಸ ಇರಿಸಿ ಪ್ರತಿಬಾರಿಯೂ ಅತಿ ಎನಿಸುವಷ್ಟು ಹೊಗಳುವ ದೇವಪ್ಪ, ಮುದ್ದು ಬೆಕ್ಕಿನ ಉಪಸ್ಥಿತಿಯಿಂದಾಗಿಯೇ ಆತ್ಮವಿಶ್ವಾಸದಿಂದ ವ್ಯವಹಾರ ನಡೆಸುವ, ಆ ಬೆಕ್ಕು ಕಾಯಿಲೆಗೆ ತುತ್ತಾಗಿ ಸಾಯುವ ಸ್ಥಿತಿಗೆ ಬಂದಾಗ ಆತ್ಮವಿಶ್ವಾಸವೇ ಕುಸಿದರೂ ಮತ್ತೆ ಬೆಕ್ಕು ಗುಣಮುಖವಾದಾಗ ಆತ್ಮವಿಶ್ವಾಸ ಗರಿಗೆದರಿ ಚುರುಕಿನಿಂದ ವ್ಯವಹರಿಸುವ ಭಪಾರಿ ಕಾಂಡಿಮೆಂಟ್ಸ್‌ನ ಮಾಲೀಕ ರಾಜಯ್ಯನಂತಹವರೂ ಇಲ್ಲಿ ಇದ್ದಾರೆ.

ಪದೇ ಪದೇ ಕಾಯಿಲೆ ಬೀಳುತ್ತಿದ್ದ ತನ್ನ ವೀಣೆ ಹಸುವನ್ನು ಕಸಾಯಿಖಾನೆಗೆ ಮಾರಲು ಸಿದ್ಧನಾಗುವ ಧಾಕಪ್ಪ ಹಸುವನ್ನು ಉಸ್ಮಾನ್ ಸಾಬನೊಂದಿಗೆ ಕಳುಹಿಸಿಕೊಟ್ಟರೂ ಅದು ಸ್ವಲ್ಪ ಹೊತ್ತು ಬಿಟ್ಟು ಮತ್ತೆ ಧಾಕಪ್ಪನ ಕೊಟ್ಟಿಗೆಗೇ ಮರಳಿದ್ದು ನೋಡಿ ಪ್ರೀತಿ ಉಕ್ಕಿಬಂದು, 'ಈ ಹಸು ಇಲ್ಲೇ ಇರುತ್ತೆ. ನೀ ಕೊಡೋ ಹಣ ನಂಗೆ ಬೇಡ. ಈ ಹಸು ಇನ್ನು ನಂಗೇನೂ ಕೊಡ್ಬೇಕಾಗಿಲ್ಲ' ಎಂದು ಹೇಳಿ ಅದರ ಭುಜ ಅಪ್ಪಿಕೊಂಡು ಮೈಸವರತೊಡಗುವುದು ಮಾನವೀಯತೆಗೆ ಹಿಡಿದ ಕನ್ನಡಿಯಾದರೆ ಥೇಟ್ ನರ್ಸಿನಂತೆಯೇ ಪ್ರಾಣಿಗಳ ಆರೈಕೆ ಮಾಡುವ ಸೋಮಶೇಖರರ ನಾಯಿ ಟ್ರೂಡಿ (ನಾಯಮ್ಮ ನರ್ಸಮ್ಮ) ಅಪರೂಪವಾದರೂ ನಿರ್ಮಲವಾದ ಪ್ರೀತಿಯನ್ನು ತೋರಿಸಿ, ಜೀವನ ಮೌಲ್ಯಗಳು ಪ್ರಾಣಿ ಮತ್ತು ಮನುಷ್ಯಲೋಕದಲ್ಲಿ ಏಕಪ್ರಕಾರವಾಗಿದೆ ಎನ್ನುವುದನ್ನು ಸಾರುತ್ತವೆ.





ಜೋಕ್ ಮಾಡಿ ಪಶುವೈದ್ಯರನ್ನು ಗೇಲಿಮಾಡುವ ಸೋಮಯ್ಯನನ್ನೇ ಪೇಚಿಗೆ ಸಿಲುಕಿಸಿ ಅವನ ತಂತ್ರವನ್ನೇ ಪ್ರತಿ ತಂತ್ರವಾಗಿಸಿ ಶಾಕ್ ಕೊಡುವ ಜೂನಿಯರ್ ವೈದ್ಯ ಕದಂ (ಒಳ್ಳೇ ಜೋಕ್‌ನಿಂದ ಮನಸ್ಸು ಫ್ರೆಶ್ ಆಗುತ್ತೆ), ಪ್ರಾಣಿಗೆ ಶುಶ್ರೂಷೆ ಮಾಡುವ ಸಂದರ್ಭದಲ್ಲಿ ಕುದುರೆಯಿಂದ ಒದೆ ತಿನ್ನುವ, ಹೋರಿಯಿಂದ ಗುದ್ದಿಸಿಕೊಳ್ಳುವ ಡಾ॥ ಹರಿ, ಅವನ ಕೈಯಲ್ಲಿದ್ದ ಸಿರಿಂಜ್ ಅಚಾನಕ್ ಆಗಿ ಒಮ್ಮೆ ತಗುಲಿದ್ದಕ್ಕಾಗಿ ತನಗೆ ನಪುಂಸಕತ್ವವೇ ಬಂತು ಎಂದು ಅಲವತ್ತುಕೊಳ್ಳುವ ಮತ್ತು ಎರಡನೇ ಬಾರಿ ಸಿರಿಂಜ್ ತಗುಲಿದ್ದಕ್ಕಾಗಿ ನಪುಂಸಕತ್ವ ಕಳೆದು ಅವಳಿ ಜವಳಿ ಮಕ್ಕಳು ಹುಟ್ಟಿವೆ ಎಂದು ನಂಬುವ ನಾಥಪ್ಪ, ಅವನನ್ನು ಗೇಲಿ ಮಾಡುವ ರೈ ಮತ್ತು ಕಪಾಲಿ, ನಾಯಿಯ ಚಿಕಿತ್ಸೆಗೆಂದು ತೆರಳಿದಾಗ ಟಿ. ವಿ. ರಿಪೇರಿಯನ್ನೂ ಮಾಡಿಸಿಕೊಂಡು ಮತ್ತೊಮ್ಮೆ ಟಿ. ವಿ. ಕೈಕೊಟ್ಟಾಗ ಡಾಕ್ಟರರನ್ನೇ ಕರೆಸುವ ಚಂದಪ್ಪ, ಜೂಜಿನ ಕುದುರೆಯ ಆರೋಗ್ಯ ತಪಾಸಣೆಗೆ ಬಾಸ್ ಪ್ರಜಾಪತಿಯ ಬದಲಿಗೆ ಹೋಗಿ ಅವಜ್ಞೆಗೊಳಗಾದರೂ ತೀವ್ರ ಅಲರ್ಜಿಯಿಂದ ಬಳಲುತ್ತಿದ್ದ ಬೆಸ್ಟ್ ಕುದುರೆ ಅಮೃತಾಳನ್ನು ತನ್ನ ಸಮಯೋಚಿತ ಚಿಕಿತ್ಸೆಯಿಂದಾಗಿ ಬದುಕಿಸಿದಾಗ ಅದರ ಉಸ್ತುವಾರಿ ನೋಡಿಕೊಳ್ಳುವ ಭೀಮೇಶನಿಂದ ಮೆಚ್ಚುಗೆ ಗಳಿಸುವುದು... ಹೀಗೆ ಹಲವು ನೈಜ ಘಟನೆಗಳು ಯಥಾವತ್ತಾಗಿ ಮೂಡಿಬಂದು ಓದುಗರ ಅನುಭವವನ್ನು ವಿಸ್ತರಿಸುತ್ತವೆ.

ಪಶುವೈದ್ಯಕೀಯ ಕ್ಷೇತ್ರದತ್ತ ಹೆಚ್ಚಿನ ಆಸಕ್ತಿ ಕೆರಳಿಸುವ ಇಲ್ಲಿನ ಕಥೆಗಳಲ್ಲಿ ಪಶು ಸಹಾಯಕ ಮತ್ತು ಪಶುವೈದ್ಯದ ವಿದ್ಯಾರ್ಥಿಗಳಿಗೆ ತಾವು ಮುಂದೆ ಕೈಗೊಳ್ಳಲಿರುವ ಸೇವಾ ಚಟುವಟಿಕೆ, ಪಶುವೈದ್ಯರ ದಿನಚರಿ, ಪೇಚಾಟಗಳು, ಮಾನವೀಯ ಗುಣಗಳು ಹೇಗಿರುತ್ತವೆ ಎನ್ನುವುದರ ಕಿರುಪರಿಚಯ ಮಾಡಿಕೊಡುತ್ತವೆ. ಹಾಗೆಯೇ ಇಲ್ಲಿ ಪ್ರಸ್ತಾಪಿತವಾಗಿರುವ ಕೀಟೋಸಿಸ್, ಬ್ರುಸೆಲೋಸಿಸ್, ಮಿಲ್ಕ್ ಫೀವರ್, ಮಿಕ್ಸೆಡಿಮಾ, ಅರ್ಟಿಕೇರಿಯಾ, ಆಕ್ಟಿನೋ ಬ್ಯಾಸಿಲೋಸಿಸ್, ಕೆನ್ನೈನ್ ಡಿಸ್ಟೆಂಪರ್, ಪೆರಿಟೋನೈಟಿಸ್, ಲಿವರ್ ಫ್ಲೂಕ್, ಪಶುಗಳಿಗೆ ಬರುವ ಕೆಲವು ಕಾಯಿಲೆಗಳು, ಅವುಗಳಿಂದ ಉಂಟಾಗುವ ನಷ್ಟ, ಫಜೀತಿ, ಮಾಲೀಕರ ಪರದಾಟ ಎಲ್ಲವೂ ಅತಿ ಎನಿಸದಂತೆ, ಹಾಸ್ಯರಸ ಲೇಪನದೊಂದಿಗೆ ಮೂಡಿಬಂದು ನಗುವಿನೊಂದಿಗೆ ನೋವಿನ ಗಾಢತೆಯನ್ನೂ ಪರಿಚಯಿಸುತ್ತವೆ. ಬಹುಶಃ ಈ ಸಂಕಥನಗಳನ್ನು ರಚಿಸಿದ ೪೦ರಿಂದ ೬೦ರ ದಶಕಗಳವರೆಗೆ ಲಭ್ಯವಿದ್ದ ಚಿಕಿತ್ಸಾ ಪದ್ಧತಿ ಮತ್ತು ಔಷಧಗಳ ಮಿತಿಯಲ್ಲಿದ್ದ ಕಾರಣ ಅನೇಕ ರೋಗಗಳಿಗೆ ಚಿಕಿತ್ಸೆ ತಗುಲುತ್ತಿರಲಿಲ್ಲವೇನೋ. ಈಗ ಹೊಸ ಆವಿಷ್ಕಾರಗಳಿಂದಾಗಿ ಬದಲಾವಣೆಗಳು ಬಂದಿರಲೂಬಹುದು.

ಒಮ್ಮೆ ಪುಟ ತೆರೆದರೆ ಕೊನೆಯ ಪುಟದವರೆಗೂ ಒಂದೇ ಓಟದಲ್ಲಿ ಓದಿಸಿಕೊಂಡು ಹೋಗುವ 'ಡೇರಿ ಡಾಕ್ಟರ್ ಹೋರಿ ಮಾಸ್ಟರ್' ಪಶುವೈದ್ಯಲೋಕದ ನೋವು–ನಲಿವುಗಳಿಗೆ ಕಿಟಕಿಯಾಗುವ, ಕನ್ನಡದಲ್ಲಿ ನಿರೂಪಿತವಾಗಿರುವ ಅಪರೂಪದ, ಸಂಗ್ರಹಯೋಗ್ಯ ಕೃತಿ ಎನ್ನಲು ಅಡ್ಡಿಯೇನಿಲ್ಲ.

**ಬೇದ್ರೆ ಮಂಜುನಾಥ**
ಕಾರ್ಯಕ್ರಮ ನಿರ್ವಾಹಕರು, ಆಕಾಶವಾಣಿ ಕೇಂದ್ರ, ಸಲಾಗಮೆ ರಸ್ತೆ
ಹಾಸನ – ೫೭೩ ೨೦೧

# ಮಾಂಸಾಹಾರ ಜಾತಿ ಮತ್ತು ಜ್ಞಾನ

ನಮ್ಮ ರಾಜ್ಯದಲ್ಲಿ ಆಗಿಂದಾಗ್ಗೆ ಆಹಾರ ಪದ್ಧತಿಗಳ ವಿಷಯದಲ್ಲಿ ಚರ್ಚೆ ನಡೆಯುತ್ತಲೇ ಇರುತ್ತದೆ. ಅದು ಗ್ರಾಮ ದೇವತೆಗಳ ಹಬ್ಬಗಳ ಸಮಯದಲ್ಲಿ ಕೊಡುವ ಪ್ರಾಣಿ ಬಲಿಯಂತಹ ಆಚರಣೆಯ ವಿಷಯವೇ ಆಗಲಿ ಅಥವಾ ಮಕ್ಕಳಿಗೆ ಮಧ್ಯಾಹ್ನದ ಬಿಸಿ ಊಟದಲ್ಲಿ ಮೊಟ್ಟೆ ಕೊಡುವುದೇ ಬೇಡವೇ ಅನ್ನುವ ವಿಷಯವೇ ಆಗಲಿ, ಅವಕಾಶ ಸಿಕ್ಕಿದಾಗಲೆಲ್ಲಾ ಮಾಂಸಾಹಾರಿಗಳು ಪರೋಕ್ಷವಾಗಿಯಾದರೂ ಟೀಕೆಗೆ ಒಳಗಾಗುತ್ತಾರೆ.

ಮಾಂಸಾಹಾರ ಒಂದು ಕೆಟ್ಟ ಅಭ್ಯಾಸ, ತಾಮಸಿಕ ಆಹಾರ, ಅದು ನಾಲಿಗೆ ಚಪಲ ತೀರಿಸಿಕೊಳ್ಳುವ ಸಲುವಾಗಿಯೇ ಹೊರತು ಶಕ್ತಿಯುತ ದೇಹದ ಬೆಳವಣಿಗೆಗೆ ಬೇಕಿಲ್ಲ ಎನ್ನುವವರದ್ದು ಒಂದು ವಾದ. ಮಾಂಸಾಹಾರ ಜನಸಮುದಾಯಗಳ ಆಹಾರ ಪದ್ಧತಿ, ಅದನ್ನು ಬಿಡಲಾಗುವುದಿಲ್ಲ ಮತ್ತು ಯಾಕಾಗಿ ಬಿಡಬೇಕು ಎಂದು ಹೇಳುವವರದ್ದು ಇನ್ನೊಂದು ವಾದ. ಮೊದಲನೆಯ ಗುಂಪಿನ ವಾದಗಳು ಕಾಲಕ್ರಮೇಣ ಎಷ್ಟೊಂದು ವಿಪರೀತಕ್ಕೆ ಹೋಗಿವೆ ಎಂದರೆ ಮನುಷ್ಯನಿಗೆ ಬರುವ ಎಲ್ಲ ಕಾಯಿಲೆಗಳಿಗೆ ಮಾಂಸಾಹಾರ ಕಾರಣ ಎನ್ನುವ ವಾದ ಕೇಳಿಬರುತ್ತದೆ. ಹೊಸ ಹೊಸ ಕಾಯಿಲೆಗಳು ಬೆಳಕಿಗೆ ಬರುತ್ತಲೇ, ಎಲ್ಲಾ ಕಾಯಿಲೆಗಳಿಗೂ ಸಸ್ಯಾಹಾರವೇ ರಾಮಬಾಣ ಎನ್ನುವಂತೆ ದಿನಪತ್ರಿಕೆಗಳು, ಇತರ ಮಾಧ್ಯಮಗಳೂ ಬಿಂಬಿಸುತ್ತವೆ. ನಾನು ಓದಿದ ಒಂದು ಪುಸ್ತಕದಲ್ಲಂತೂ ಮಾಂಸಾಹಾರಿಗಳ ಬಾಯಿಯಲ್ಲಿ ಮೃಗಾಲಯಗಳಲ್ಲಿರುವ ಹುಲಿ, ಸಿಂಹಗಳ ಬೋನಿನ ವಾಸನೆ ಬರುತ್ತದೆ ಎಂದು ಕೂಡ ಹೇಳಲಾಗಿದೆ. ಹಾಗೆಂದರೆ ವಿಶ್ವದ ಶೇಕಡ ೯೦ರಷ್ಟು ಜನರ ಬಾಯಿಯಲ್ಲಿ ಈ ಬಗೆಯ ವಾಸನೆ ಬರುತ್ತದೆ ಎಂದಾಯ್ತು.

ಆಹಾರ ಪದ್ಧತಿಗಳು ನಮ್ಮ ಜಾತಿ ವ್ಯವಸ್ಥೆಗೆ ಭದ್ರವಾದ ಅಡಿಪಾಯ ಒದಗಿಸಿರುವುದರಿಂದ ಈ ವಿಷಯ ಚರ್ಚೆಗೆ ಬಂದಾಗಲೆಲ್ಲಾ ಅದು ಮೇಲುಜಾತಿ, ಕೀಳುಜಾತಿ, ಹೊಲಸಾವುದು, ಮಡಿ ಯಾವುದು ಎನ್ನುವಂತಹ ವಿಷಯಗಳ ಜೊತೆಗೆ ತಳಕು ಹಾಕಿಕೊಂಡಿರುತ್ತದೆ. ವೇದಕಾಲದ ಬ್ರಾಹ್ಮಣರು ದನದ ಮಾಂಸ ತಿನ್ನುತ್ತಿದ್ದರು ಎಂದು ಹೇಳಿದ ತಕ್ಷಣ ಕೆಲವರು ಕೆರಳಿ ಪ್ರತಿಭಟನೆಯನ್ನೂ ಮಾಡುತ್ತಾರೆ. ಯಾವುದೋ ಶತಮಾನದಲ್ಲಿ ಈಗಿನ ಮೇಲ್ಜಾತಿ ಸಸ್ಯಾಹಾರಿಗಳ ಪೂರ್ವಿಕರು ಮಾಂಸ ತಿಂದರು ಎಂದು ಹೇಳುವುದೂ ಅಪರಾಧ ಎನ್ನುವವರ ಮನಃಸ್ಥಿತಿ ಎಂತಹದ್ದು ಮತ್ತು ಅವರ ಮನಸ್ಸಿನಲ್ಲಿ ಮಾಂಸಾಹಾರಿಗಳ ಬಗ್ಗೆ ಯಾವ ಭಾವನೆಗಳು ಇವೆ ಎಂದು ಗೊತ್ತಾಗುತ್ತದೆ.

ದೆಹಲಿ ವಿಶ್ವವಿದ್ಯಾಲಯದಲ್ಲಿನ ಇತಿಹಾಸ ವಿಭಾಗದಲ್ಲಿ ಪ್ರೊ॥ ಡಿ. ಎನ್. ಝಾ ಅವರ 'ದಿ ಮಿತ್ ಆಫ್ ದಿ ಹೋಲಿ ಕೌ' ಎಂಬ ಪುಸ್ತಕ ಹೊರಬರುತ್ತಲೇ ಅವರಿಗೆ ಬಂದ ಬೆದರಿಕೆಗಳು, ಆದ ಪ್ರತಿಭಟನೆಗಳು ಹಲವಾರು ದಿನಪತ್ರಿಕೆಗಳಲ್ಲಿ ಸುದ್ದಿಯಾಗಿದ್ದವು. ಆಗ ಅವರು ಮಾಧ್ಯಮಗಳೊಂದಿಗೆ ಮಾತನಾಡುತ್ತ ಅವರ ಪುಸ್ತಕದಲ್ಲಿರುವ ಮಾಹಿತಿಯ ಮೂಲ ವೇದಗಳೇ ಆಗಿರುವುದರಿಂದ, ಅವರ ಪುಸ್ತಕವನ್ನು ಪ್ರತಿಭಟನಾಕಾರರು ಸುಡುವುದಕ್ಕಿಂತ ವೇದಗಳನ್ನೇ ಸುಡಬೇಕಾಗುತ್ತದೆ ಎಂದಿದ್ದರು. ಈ ಪ್ರತಿಭಟನಾಕಾರರು ನಮ್ಮ ದೇಶದ ಆಹಾರ ಪದ್ಧತಿಗಳ ಇತಿಹಾಸ ಓದಿಕೊಂಡಿದ್ದರೆ ಪ್ರತಿಭಟನೆ ಮಾಡುತ್ತಿರಲಿಲ್ಲ. ಆಹಾರ ವಿಜ್ಞಾನಿ





ಆಹಾರ ಪದ್ಧತಿಗಳು ನಮ್ಮ ಜಾತಿ ವ್ಯವಸ್ಥೆಗೆ ಭದ್ರವಾದ ಅಡಿಪಾಯ ಒದಗಿಸಿರುವುದರಿಂದ ಈ ವಿಷಯ ಚರ್ಚೆಗೆ ಬಂದಾಗಲೆಲ್ಲಾ ಅದು ಮೇಲುಜಾತಿ, ಕೀಳುಜಾತಿ, ಹೊಲಸಾವುದು, ಮಡಿ ಯಾವುದು ಎನ್ನುವಂತಹ ವಿಷಯಗಳ ಜೊತೆಗೆ ತಳಕು ಹಾಕಿಕೊಂಡಿರುತ್ತದೆ. ವೇದಕಾಲದ ಬ್ರಾಹ್ಮಣರು ದನದ ಮಾಂಸ ತಿನ್ನುತ್ತಿದ್ದರು ಎಂದು ಹೇಳಿದ ತಕ್ಷಣ ಕೆಲವರು ಕೆರಳಿ ಪ್ರತಿಭಟನೆಯನ್ನೂ ಮಾಡುತ್ತಾರೆ. ಯಾವುದೋ ಶತಮಾನದಲ್ಲಿ ಈಗಿನ ಮೇಲ್ಜಾತಿ ಸಸ್ಯಾಹಾರಿಗಳ ಪೂರ್ವಿಕರು ಮಾಂಸ ತಿಂದರು ಎಂದು ಹೇಳುವುದೂ ಅಪರಾಧ ಎನ್ನುವವರ ಮನಃಸ್ಥಿತಿ ಎಂತಹದ್ದು ಮತ್ತು ಅವರ ಮನಸ್ಸಿನಲ್ಲಿ ಮಾಂಸಾಹಾರಿಗಳ ಬಗ್ಗೆ ಯಾವ ಭಾವನೆಗಳು ಇವೆ ಎಂದು ಗೊತ್ತಾಗುತ್ತದೆ.

ಡಾ॥ ಕೆ. ಟಿ. ಅಚ್ಚಯ್ಯನವರು ಬರೆದ, 'ಇಂಡಿಯನ್ ಫುಡ್ – ಎ ಹಿಸ್ಟಾರಿಕಲ್ ಕಂಪ್ಯಾನಿಯನ್' ಎಂಬ ಪುಸ್ತಕವನ್ನು ಅವರು ಒಂದು ಸಲ ಓದಿಕೊಳ್ಳಬೇಕು. ಅದರಲ್ಲಿ ವೇದಕಾಲದ ಆಹಾರ ಪದ್ಧತಿ, ಸಿಂಧೂ ನಾಗರಿಕತೆಯ ಕಾಲದ ಆಹಾರಗಳು, ಚರಕ ಸಂಹಿತೆ, ಸುಶ್ರುತ ಸಂಹಿತೆಗಳಲ್ಲಿ ಬರುವ ಮಾಂಸಾಹಾರದ ವಿವರಗಳು, ಆಯುರ್ವೇದ ವೈದ್ಯಕೀಯ ಪದ್ಧತಿಯಲ್ಲಿ ಇವುಗಳನ್ನು ಉಪಯೋಗಿಸುತ್ತಿದ್ದ ವಿವರಗಳು ಇವೆ. ಹೊರದೇಶದಿಂದ ನಮ್ಮ ದೇಶಕ್ಕೆ ಬಂದ ಹಣ್ಣು, ತರಕಾರಿ, ಟೀ, ಸಂಬಾರ ಪದಾರ್ಥಗಳ ಬಗ್ಗೆ ವಿವರಣೆ ಸಿಗುತ್ತದೆ. ಅಷ್ಟೇ ಅಲ್ಲದೆ, ಬ್ರಾಹ್ಮಣರು ಮಾಂಸಾಹಾರ ತ್ಯಜಿಸುವುದಕ್ಕೆ ಒಂದು ಕಾರಣ ಅಂದರೆ ಅದನ್ನು ಅರಗಿಸಿಕೊಳ್ಳುವುದಕ್ಕೆ ಆಗದಿರುವುದು. ಮಾಂಸಾಹಾರ ಏನಿದ್ದರೂ ಚಳಿಗಾಲದ ಆಹಾರ ಮತ್ತು ಶ್ರಮಜೀವಿಗಳಿಗೆ ಒಪ್ಪುವಂತಹ ಆಹಾರ ಪದ್ಧತಿ ಎಂದು ಸುಶ್ರುತ ಸಂಹಿತೆ ಹೇಳುತ್ತದಂತೆ. ಆದ್ದರಿಂದ ಮೇಲ್ಜಾತಿಯವರು ದೈಹಿಕ ಶ್ರಮ ಬೇಡುವ ಕೆಲಸಗಳನ್ನು ಮಾಡುತ್ತಿರಲಿಲ್ಲವಾದ್ದರಿಂದ ಮಾಂಸಾಹಾರವನ್ನು ತ್ಯಜಿಸುವುದಕ್ಕೆ ಅದೊಂದು ಕಾರಣವೂ ಇರಬಹುದು.




ಬಳಸುವ ಅಸ್ತ್ರ ಎಂದು ಹೇಳುತ್ತಾರೆ. ನಮ್ಮಲ್ಲಿರುವ ಆಹಾರ ಪದ್ಧತಿಗಳನ್ನೇ ಆಧಾರವಾಗಿಟ್ಟುಕೊಂಡು ಮೇಲ್ಜಾತಿಗಳು ಹೇಗೆ ಸಮಾಜದ ತಳ ಸಮುದಾಯದವರನ್ನು ಹೀನಾಯವಾಗಿ ನಡೆಸಿಕೊಂಡವು ಎನ್ನುವುದನ್ನು ನೋಡಿದರೆ ಲೋಹಿಯಾ ಅವರ ಮಾತು ಸತ್ಯ ಎನಿಸುತ್ತದೆ. ಆಶ್ಚರ್ಯದ ಸಂಗತಿ ಅಂದರೆ ಜಾತಿಪದ್ಧತಿ ಭಾರತದಲ್ಲಿ ಮಾತ್ರ ಅಲ್ಲದೆ, ನಮ್ಮ ದೇಶದ "ಸಂಸ್ಕೃತಿ"ಯ ಪ್ರಭಾವ ಎಲ್ಲೆಲ್ಲಿ ಇತ್ತೋ ಅಲ್ಲೆಲ್ಲಾ ಇಂದಿಗೂ ಜಾತಿವ್ಯವಸ್ಥೆಯ ಪಳೆಯುಳಿಕೆಗಳನ್ನು ಕಾಣಬಹುದು. ಪಾಕಿಸ್ತಾನ, ಬಾಂಗ್ಲಾದೇಶ, ಶ್ರೀಲಂಕಾ, ನೇಪಾಳದಲ್ಲಿ ಜಾತಿಯ ವಿಷಚಕ್ರ ಇನ್ನೂ ಕೆಲಸ ಮಾಡುತ್ತಿದೆ. ಕೊರಿಯಾ ಹಾಗೂ ಜಪಾನ್ ಕೂಡ ಒಂದು ಕಾಲದಲ್ಲಿ ಜಾತಿವ್ಯವಸ್ಥೆಯನ್ನು ಪಾಲಿಸುತ್ತಿದ್ದವು. ಅಲ್ಲಿಯ ಜನರು ಎಲ್ಲರೂ ಮಾಂಸಾಹಾರಿಗಳಾಗಿದ್ದರೂ ಮಾಂಸದ ವ್ಯಾಪಾರದಲ್ಲಿ ಇರುವವರನ್ನು ಕೀಳಾಗಿ ಕಾಣುತ್ತಿದ್ದರು. ಕಸಾಯಿಖಾನೆಯಲ್ಲಿ ಕೆಲಸ ಮಾಡುವವರು, ಹೆಣಗಳನ್ನು ಮರಣಯಾತ್ರೆಗೆ ಸಿದ್ಧಪಡಿಸುವ ಕಸಬು ಮತ್ತು ಮರಣದಂಡನೆಗೆ ಗುರಿಯಾದವರನ್ನು ಗಲ್ಲಿಗೇರಿಸುವಂತಹ ಕೆಲಸಗಳನ್ನು ಮಾಡುತ್ತಿದ್ದವರನ್ನು "ಮೈಲಿಗೆ" ಎಂದು ಕರೆಯುತ್ತಿದ್ದರು. ಇಂದಿಗೂ ಜಪಾನ್‌ನಲ್ಲಿ ಜಾತಿವ್ಯವಸ್ಥೆಯ ಕೆಲವು ವಿಲಕ್ಷಣಗಳು ಉಳಿದುಕೊಂಡಿವೆ. ಜಪಾನೀಯರು ಜಾತಿಪದ್ಧತಿಯನ್ನು ೧೯ನೆಯ ಶತಮಾನದ ಮಧ್ಯಭಾಗದಲ್ಲೇ (ಅಂದರೆ ಮೈಯಿಜಿಯ ಆಡಳಿತ ಕಾಲದಲ್ಲಿ) ಕಾನೂನುಬಾಹಿರವೆಂದು ಘೋಷಿಸಿದ್ದರೂ, ಅದು ಇಂದಿಗೂ ಉಳಿದುಕೊಂಡಿದೆ. ಬುರಾಕುಮಿನ್ ಎಂದು ಕರೆಯಲ್ಪಡುವ ಜನರನ್ನು ಈಗಲೂ ಮೇಲ್ಜಾತಿಗೆ ಸೇರಿದ ಜಪಾನೀಯರು ಅವರ ಹೆಸರುಗಳಿಂದಲೋ, ಅವರ ಊರಿನ ಹೆಸರುಗಳಿಂದಲೋ ಕಂಡುಹಿಡಿದುಬಿಡುತ್ತಾರೆ. ಅವರ ನಡುವೆ ಮದುವೆ ಸಂಬಂಧಗಳೂ ಇರುವುದಿಲ್ಲ. ಹಳೆಯ ಕಾಲದಲ್ಲಿ ಬುರಾಕುಮಿನ್ ಊರಿನ ಹೊರಗೋ, ನದಿಯ ತೀರಗಳಲ್ಲೋ ವಾಸಿಸುತ್ತಿದ್ದು, ಅಂತಹ ನದಿಗಳಿಗೆ ಸೇತುವೆ ವ್ಯವಸ್ಥೆ ಕೂಡ ಇರುತ್ತಿರಲಿಲ್ಲವಂತೆ. ಬುರಾಕುಮಿನ್ ಜನರು ಈ ಜಾತಿ ತಾರತಮ್ಯದ ಬಗ್ಗೆ ಇತ್ತೀಚೆಗೆ, ಅಂದರೆ ೧೯೫೫ರಲ್ಲಿ ವಿಶ್ವಸಂಸ್ಥೆಗೂ ದೂರು ನೀಡಿದ್ದರು. ಜಪಾನೀಯರಲ್ಲಿ ಎಲ್ಲರೂ ಮಾಂಸಾಹಾರಿಗಳಾಗಿರುವುದರಿಂದ ಜಾತಿ ಘರ್ಷಣೆಗಳು ನಮ್ಮಲ್ಲಿರುವಂತೆ ಇಲ್ಲ. ಅಲ್ಲದೆ ಬುರಾಕುಮಿನ್ ಜನರೂ, ಇತರ ಜಪಾನೀಯರೂ ಒಂದೇ ಜನಾಂಗಕ್ಕೆ ಸೇರಿದವರು. ಬುರಾಕುಮಿನ್‌ರ ಜನಸಂಖ್ಯೆ ತೀರ ಕಡಿಮೆ ಇರುವುದರಿಂದ, ಹಾಗೂ ಶಿಕ್ಷಣದಲ್ಲಿ ಅವರೇನೂ ತುಂಬ ಹಿಂದೆ ಬಿದ್ದಿಲ್ಲದಿರುವುದರಿಂದ ಅವರ ಜಾತಿವ್ಯವಸ್ಥೆ ನಮ್ಮ ಕಣ್ಣಿಗೆ ಬೀಳುವುದಿಲ್ಲ. ಜಪಾನ್‌ನ ಓಕಿನಾವಾ ದ್ವೀಪದಲ್ಲಿ ವಾಸಿಸುವ ಐನು ಎಂಬ ಬುಡಕಟ್ಟಿಗೆ ಸೇರಿದ ಜನರನ್ನೂ, ಶತಮಾನಗಳಿಂದಲೇ ಜಪಾನ್‌ನಲ್ಲಿ ವಾಸಿಸುವ ಕೊರಿಯನ್ನರನ್ನೂ ಜಪಾನೀಯರು ಹೀನಾಯವಾಗಿಯೇ ಕಾಣುತ್ತಾರೆ. ಅದರ ಬಗ್ಗೆ ಚರ್ಚೆಗಳು ನಡೆಯುತ್ತಲೇ ಇದ್ದು ಕಾಲ ಕ್ರಮೇಣ ಜಾತಿಪದ್ಧತಿ ಸಂಪೂರ್ಣ ಮಾಯವಾಗುವ ಸಾಧ್ಯತೆಗಳು ಇವೆ.

ಅಹಿಂಸೆಯ ನೆಲೆಗಟ್ಟಿನಲ್ಲಿ ನೋಡಿದಾಗ ಸಸ್ಯಾಹಾರ ಒಂದು ಶ್ರೇಷ್ಠ ಹಾಗೂ ನೈತಿಕವಾದ ಆಹಾರ ಪದ್ಧತಿ. ಇದನ್ನು ತಮ್ಮ ದೈನಂದಿನ ಜೀವನದಲ್ಲಿ ಅಳವಡಿಸಿಕೊಂಡು ಇಂದಿಗೂ ಪಾಲಿಸಿಕೊಂಡು ಬಂದಿರುವ ಸಮುದಾಯಗಳ ಕಾಳಜಿ ಪ್ರಾಣಿಗಳ ಮೇಲಿನ ಕರುಣೆಯೇ ಆಗಿದ್ದರೆ ನಿಜವಾಗಿಯೂ ಅವರ ಬದ್ಧತೆ ಶ್ಲಾಘನೀಯ. ೨೦೦೩ರಲ್ಲಿ ನೊಬೆಲ್ ಪ್ರಶಸ್ತಿ ವಿಜೇತ ಸಾಹಿತಿ ದಕ್ಷಿಣ ಆಫ್ರಿಕಾದ ಜೆ. ಎಂ. ಕೊಯೆಟ್‌ಜೀರವರು ತಮ್ಮ 'ದಿ ಲೈವ್ಸ್ ಆಫ್ ಆ್ಯನಿಮಲ್ಸ್ ' ಎನ್ನುವ ನೀಳ್ಗತೆಯಲ್ಲಿ ಮಾನವ ತನ್ನ ಉಪಯೋಗಕ್ಕಾಗಿ ಪ್ರಾಣಿಗಳ ಮೇಲೆ ಮಾಡುವ ಕ್ರೌರ್ಯವನ್ನು ತುಂಬ ಸೂಕ್ಷ್ಮವಾಗಿ ಬಿಚ್ಚಿಡುತ್ತಾರೆ. ಅದನ್ನು ಯಾರೂ ಇದು ಬ್ರಾಹ್ಮಣರ ವಾದ ಎಂದು ತಳ್ಳಿಹಾಕುವಂತಿಲ್ಲ. ಹಿಂಸೆಯ ಮೂಲವನ್ನು ಅರಿತುಕೊಂಡು, ಅಹಿಂಸಾ ಮಾರ್ಗವನ್ನು ಜೀವನದಲ್ಲಿ ಆದಷ್ಟು ಮಟ್ಟಿಗೆ ಪಾಲಿಸಲು ಯತ್ನಿಸುತ್ತಿರುವವರಲ್ಲಿ ಜೈನ ಸಮುದಾಯವೂ ಒಂದು. ಹಾಗೆಯೇ ಅಹಿಂಸೆಯ ಮಾರ್ಗದಲ್ಲಿಯೇ ನಡೆದುಕೊಂಡು ಬಂದಿರುವ ರಾಜಸ್ಥಾನದ ಬಿಶ್ನೋಯ್ ಸಮುದಾಯವನ್ನು ಯಾರೂ ಗೇಲಿ ಮಾಡುವುದಿಲ್ಲ. ಬಿಶ್ನೋಯ್ ಜನ ಬುಡಕಟ್ಟಿಗೆ ಸೇರಿದ್ದು, ತಮ್ಮ ಮರಳುಗಾಡಿನ ಪರಿಸರದಲ್ಲಿ ಬಾಳಿ ಬದುಕಲು ಸಸ್ಯಾಹಾರ ಅನಿವಾರ್ಯ ಎಂಬುದನ್ನು ಎಂದೋ ಕಂಡುಕೊಂಡು ಪ್ರಾಣಿಗಳನ್ನೇ ಅಲ್ಲದೆ ಮರಗಳನ್ನೂ ದೇವರೆಂದು ಪೂಜಿಸುತ್ತಾರೆ. ಇವರು ಸಸ್ಯಾಹಾರದ ಹಿಂದೆ ಇರುವ ಮೂಲ ಉದ್ದೇಶವನ್ನು ಮರೆಯದೆ ಮರಗಳನ್ನು ಮಾತ್ರವಲ್ಲದೆ ಸಮಸ್ತ ಜೀವಿಗಳನ್ನೂ ಕರುಣೆಯಿಂದ ನೋಡುತ್ತಾರೆ.

ನಮ್ಮ ದೇಶದಲ್ಲಿ ಹುಟ್ಟಿದಷ್ಟು ಧರ್ಮಗಳು ಬೇರೆ ಎಲ್ಲಿಯೂ ಹುಟ್ಟಲಿಲ್ಲ. ಅಲ್ಲದೆ ಭಾರತದಲ್ಲಿ ಬಿಟ್ಟು ವಿಶ್ವದ ಬೇರೆ ಯಾವ ದೇಶದಲ್ಲೂ ಅಹಿಂಸೆಯ ಬಗ್ಗೆ ಇಷ್ಟೊಂದು ಚರ್ಚೆಗಳು, ವ್ಯಾಖ್ಯಾನಗಳು ನಡೆದೇ ಇಲ್ಲ. ಅದೇಕೆ ಪ್ರಾಣಿಗಳ ವಧೆ ಮತ್ತು ಮಾಂಸಾಹಾರ ನಮ್ಮ ಧರ್ಮ ಬೋಧಕರನ್ನು, ಚಿಂತಕರನ್ನು ಅಷ್ಟೊಂದು ಕಾಡಿತ್ತು ಎನ್ನುವುದು ಇಲ್ಲಿ ಮುಖ್ಯವಾಗುತ್ತದೆ. ನಮ್ಮ ಕಾಲದಲ್ಲಿಯೇ ಗಾಂಧೀಜಿಯವರು ಅಹಿಂಸೆಯ ಚರ್ಚೆಯನ್ನು ಆಹಾರ ಪದ್ಧತಿಗಳಿಗೆ ಮಾತ್ರ ಸೀಮಿತಗೊಳಿಸದೆ ಅದನ್ನು ಮೀರಿ ಅಹಿಂಸೆಯ ಮಾರ್ಗವು ಮನುಷ್ಯನ ರಾಜಕೀಯ, ಆರ್ಥಿಕ, ಸಾಮಾಜಿಕ ಕ್ಷೇತ್ರಗಳಿಗೆ ಕೂಡ ಹೇಗೆ ಅನ್ವಯಿಸುತ್ತದೆ ಎನ್ನುವುದನ್ನು ತೋರಿಸಿಕೊಟ್ಟರು. ಇತರ ಮನುಷ್ಯರನ್ನು ಕೀಳಾಗಿ ಕಾಣುವುದು ಅವರ ಪ್ರಕಾರ ಹಿಂಸೆಯೇ ಆಗಿತ್ತು. ಲೋಹಿಯಾರವರು ಹಿಂದೂ ಧರ್ಮದ ವ್ಯಾಖ್ಯಾನ ಮಾಡುತ್ತಾ ನಮ್ಮ ಧರ್ಮದಲ್ಲಿ ಅಹಿಂಸೆ ಎನ್ನುವುದು ಪ್ರಾಣಿಗಳ ಮೇಲಿನ ನಿಜವಾದ ಮಮತೆ ಹಾಗೂ ದಯೆಯಿಂದ ಹುಟ್ಟಿಕೊಂಡದ್ದು ಅಲ್ಲ, ಆದರೆ ಮೇಲ್ಜಾತಿಯವರು ತಮಗಿಂತ ಕೀಳು ಎಂದು ಭಾವಿಸಿರುವ ಮನುಷ್ಯರನ್ನು ಕೀಳಾಗಿಯೇ ಕಾಣುವುದಕ್ಕೆ ಹಾಗೂ ಇತರರನ್ನು ಹತೋಟಿಯಲ್ಲಿ ಇಟ್ಟುಕೊಳ್ಳಲು

ನಮ್ಮ ದೇಶದಲ್ಲಿ ಮಾಂಸಾಹಾರಿಗಳ ಸಂಖ್ಯೆ ದಿನೇದಿನೇ ಹೆಚ್ಚಾಗುತ್ತಿದೆ. ಹಾಗೆಯೇ, ಮಾಂಸಾಹಾರಿಗಳೂ ಸಸ್ಯಾಹಾರಿಗಳಾಗುತ್ತಾರೆ. ಸಸ್ಯಾಹಾರವೇ ಶ್ರೇಷ್ಠ ಹಾಗೂ ಎಲ್ಲರೂ ಸಸ್ಯಾಹಾರಿಗಳೇ ಆಗಿರಬೇಕು ಎಂದೇ ಇಟ್ಟುಕೊಳ್ಳೋಣ. ಇಡೀ ವಿಶ್ವವೇ ಸಸ್ಯಾಹಾರಿಯಾಗಲು ಸಾಧ್ಯವೇ ? ಹೋಗಲಿ, ಭಾರತವನ್ನಾದರೂ ಸಸ್ಯಾಹಾರಿ ದೇಶವನ್ನಾಗಿ ಪರಿವರ್ತನೆ ಮಾಡಲಿಕ್ಕಾಗುತ್ತದೆಯೇ ಎಂಬುದನ್ನು ನಾವು ಯೋಚಿಸಬೇಕು. ಆಹಾರ ಪದ್ಧತಿಗಳು ಪ್ರಾಣಿಗಳ ಶೋಷಣೆ ಮಾಡಲೆಂದೇ ಹುಟ್ಟಿಕೊಂಡವೇ ? ಅಥವಾ ಮಾಂಸಾಹಾರ ಸಮುದಾಯಗಳಿಗೆ ಅನಿವಾರ್ಯವಾಗಿದ್ದಿತೇ ?

ಭಾರತ ಇತಿಹಾಸದುದ್ದಕ್ಕೂ ಬರಗಾಲ, ಕ್ಷಾಮ, ಅತಿವೃಷ್ಟಿ, ಅನಾವೃಷ್ಟಿಗಳಿಗೆ ತುತ್ತಾಗಿದ್ದ ದೇಶ. ಈಗಲಂತೂ ನಮ್ಮ ಸುತ್ತುಮುತ್ತಲಿನ ಪರಿಸರ, ವಾತಾವರಣ ಬದಲಾಗುತ್ತಿರುವಂತೆ ಬರಗಾಲ, ಪ್ರಕೃತಿ ವಿಕೋಪದ ಕಾರಣ ಇವೆಲ್ಲವೂ



ಹೆಚ್ಚಾಗುತ್ತಿದೆ. ಆದರೆ ಪ್ರತಿ ಹಳ್ಳಿಗೂ ಸಂಪರ್ಕ ಇರುವ ಈ ಕಾಲದಲ್ಲಿ ಕ್ಷಾಮ, ಬರಗಾಲ ಬಂದರೆ, ಅಲ್ಪ ಸಮಯದಲ್ಲಿ ಆಹಾರ ಒದಗಿಸುವ ಸೌಕರ್ಯವೂ ನಮ್ಮಲ್ಲಿ ಇದೆ. ಅಂತಾದರೂ ಕೂಡ ಇಂದು ಕೆಲವು ಬುಡಕಟ್ಟಿನ ಸಮಾಜಗಳು ಪಡಿತರ ಸೌಲಭ್ಯಗಳಿಲ್ಲದೆ ಹಸಿವೆಯಿಂದ ಬಳಲುತ್ತಾರೆ. ಪರಿಸರದ ದೃಷ್ಟಿಯಿಂದ ನೋಡಿದರೂ ಯಾವ ಸಮುದಾಯವೇ ಆಗಲಿ ಸ್ಥಳೀಯವಾಗಿ ಯಾವ ಆಹಾರ ಸಿಗುತ್ತದೋ ಅದನ್ನು ಅವಲಂಬಿಸಿ ಬದುಕುವುದೇ ಸರಿಯಾದ ಮಾರ್ಗ ಅನ್ನಿಸುತ್ತದೆ. ಅತಿ ದೂರದಿಂದ ಆಹಾರ ವಸ್ತುಗಳನ್ನು ತಂದು ಅವನ್ನು ಜನವಸತಿ ಇರುವ ಊರುಗಳಿಗೆ ತಲುಪಿಸಬೇಕು ಅಂದರೆ ಅದಕ್ಕೆ ಬೇಕಾದ ವ್ಯವಸ್ಥೆ ಮಾಡಿಕೊಳ್ಳಬೇಕು. ಅದು ಶೀತಲೀಕರಣ ಇರುವ ವಾಹನಗಳು, ಆಹಾರವನ್ನು ಪ್ಯಾಕಿಂಗ್ ಮಾಡಲು ಬಳಸುವ ಪ್ಲಾಸ್ಟಿಕ್ ಪರಿಕರಗಳು, ಸರಿಯಾದ ರಸ್ತೆ, ರೈಲ್ವೆ, ಸಾಗಣೆ ಮಾಡುವ ಟ್ರಕ್‌ಗಳಿಗೆ ಡೀಸೆಲ್ ಇತ್ಯಾದಿ. ಇವೆಲ್ಲವೂ ಪರಿಸರಕ್ಕೆ ಹಾನಿಕರ.

ಹಿಂದಿನ ಕಾಲದಲ್ಲಿ ಮಾಂಸಾಹಾರಿಗಳಿಗೂ ಅದು ದಿನನಿತ್ಯದ ಆಹಾರವಾಗಿರಲಿಲ್ಲ. ಬೇಟೆಯಾಡಿ ಜೀವಿಸುತ್ತಿದ್ದವರು ಕೂಡ ಕಾಡಿನ ನಿಯಮಗಳನ್ನು ಪಾಲಿಸುತ್ತಿದ್ದರು. ಪ್ರಾಣಿಗಳು ತಮ್ಮ ಸಂತಾನಾಭಿವೃದ್ಧಿ ಮಾಡುವ ಸಮಯದಲ್ಲಿ ಬೇಟೆಗೆ ನಿಷೇಧವಿತ್ತು. ಅಂತಹ ನಿಷೇಧವನ್ನು ಯಾವ ಸರಕಾರದ ಒತ್ತಡವೂ ಇಲ್ಲದೆ ತಾವೇ ಪಾಲಿಸುತ್ತಿದ್ದರು. ಕಾಡಿನಲ್ಲಿ ಸಿಗುವ ಗೆಡ್ಡೆ, ಗೆಣಸು, ಹಣ್ಣು ಇಲ್ಲವೇ ತಾವು ಬೆಳೆದ ಬೆಳೆಗಳನ್ನು ಬಳಸುವುದು ಇವರ ಆಹಾರ ಕ್ರಮವಾಗಿತ್ತು. ಗುಡ್ಡಗಾಡಿನ ಪರಿಸರದಲ್ಲಿದ್ದ ಜಾಗಗಳಲ್ಲಿ, ಅತೀ ಮಳೆಯಿರುವ ಪ್ರದೇಶಗಳಲ್ಲಿ ತೊಗರಿಬೇಳೆ ಮತ್ತು ಇತರ ದ್ವಿದಳ ಧಾನ್ಯಗಳನ್ನು, ಬಯಲುಸೀಮೆಯಲ್ಲಿ ಇದ್ದಂತೆ ಬೆಳೆಯಲು ಸಾಧ್ಯವಿರಲಿಲ್ಲ. ಸಂಪರ್ಕ ಹೆಚ್ಚಾಗಿ ಇಲ್ಲದಿದ್ದ ನಗರ, ಪಟ್ಟಣಗಳಿಂದ ದೂರ ಇದ್ದು, ರಸ್ತೆ ಸಂಪರ್ಕ ಇಲ್ಲದಂತಹ ಸ್ಥಳಗಳಲ್ಲಿ ಸಮುದಾಯಗಳು ಸ್ಥಳೀಯವಾಗಿ ಏನು ಸಿಗುತಿತ್ತೋ ಅದನ್ನೇ ತಿನ್ನುತ್ತಿದ್ದರು. ನದಿ, ತೋಡುಗಳಲ್ಲಿ ಸಮೃದ್ಧವಾಗಿ ಸಿಗುತ್ತಿದ್ದ ಮೀನು ಹಿಡಿಯುತ್ತಿದ್ದು, ಹಂದಿ ಅಥವಾ ಕೋಳಿ ಸಾಕಣೆ ಮಾಡಿ ಅವನ್ನು ಬಳಸುತ್ತಿದ್ದರಷ್ಟೇ ಅಲ್ಲದೆ, ಆಹಾರ ಕಡಿಮೆ ಇರುವ ಸಮಯದಲ್ಲಿ ಬಳಸಲು ಎಂದು ಸತ್ತ ಮೀನುಗಳನ್ನು ಒಣಗಿಸಿ ಇಟ್ಟುಕೊಳ್ಳುತ್ತಿದ್ದರು. ಆದ್ದರಿಂದಲೇ ಸಮುದ್ರ ತೀರದ ಬ್ರಾಹ್ಮಣರಿಗೆ ಕೂಡ ಮೀನು ತಿನ್ನುವ ಅನಿವಾರ್ಯತೆ ಇತ್ತು.

ಮಾನವ ಯಾವಾಗ ಕಾಡು ಬಿಟ್ಟು ಊರಲ್ಲಿ ವಾಸಿಸಲು ತೊಡಗಿದನೋ ಅಂದಿನಿಂದ ನಗರಗಳ ಜನಸಂಖ್ಯೆಯೂ ಹೆಚ್ಚಾಯಿತು, ಹಾಗೆಯೇ ವ್ಯವಸಾಯದ ಮೇಲಿನ ಅವಲಂಬನೆ ಕಾಡಿನ ನಾಶಕ್ಕೆ ಕಾರಣವಾಯಿತು. ತನಗೆ ಬೇಕಾದ ಬೆಳೆಗಳನ್ನು ಬೆಳೆಯಲು, ಕಾಡನ್ನು ನಾಶಮಾಡಿ, ಭೂಮಿಯನ್ನು ಹಸನುಗೊಳಿಸಿ ಬೇಸಾಯದಲ್ಲಿ ತೊಡಗಿಕೊಂಡ. ಬಿಲ್ ಮೋಲಿಸನ್ ಎಂಬುವರು 'ಪರ್ಮಾಕಲ್ಚರ್' ಎಂಬ ಸಿದ್ಧಾಂತವನ್ನು ಹುಟ್ಟುಹಾಕಿದವರು ಹಾಗೂ ಅದರ ಪ್ರತಿಪಾದಕರು. ಅವರ ಪ್ರಕಾರ 'ಪರ್ಮಾಕಲ್ಚರ್' ಅನ್ನುವುದು 'ಪರ್ಮನೆಂಟ್' ಅಗ್ರಿಕಲ್ಚರ್. ಮೋಲಿಸನ್‌ರವರು ಅವರ ಪುಸ್ತಕಗಳಲ್ಲಿ ಸಸ್ಯಾಹಾರಿಗಳನ್ನು ಚೆನ್ನಾಗಿಯೇ ತರಾಟೆಗೆ ತೆಗೆದುಕೊಳ್ಳುತ್ತಾರೆ. ಹಾಗೆಂದು ಅವರೇನೂ ಮಾಂಸಾಹಾರಿಗಳಾಗಿರಲಿಲ್ಲ ಎಂದು ಆಸ್ಟ್ರೇಲಿಯಾದಲ್ಲಿರುವ ಅವರ ಸಂಸ್ಥೆಗೆ ಹೋಗಿ, ಟ್ರೈನಿಂಗ್ ಪಡೆದುಕೊಂಡವರಿಂದ ಕೇಳಿ ತಿಳಿದಿದ್ದೇನೆ.

ಸಸ್ಯಾಹಾರಿಗಳು ತಿನ್ನುವ ಕೆಲವೇ ಕೆಲವು ಪ್ರೋಟೀನ್‌ಯುಕ್ತ ಆಹಾರವೆಂದರೆ ದ್ವಿದಳ ಧಾನ್ಯಗಳನ್ನು ಬೆಳೆಸುವುದಕ್ಕಾಗಿ ಅದೆಷ್ಟು ಸಾವಿರಾರು ಹೆಕ್ಟೇರು ಕಾಡನ್ನು ಕಡಿದು ಹಸನುಗೊಳಿಸಿದ್ದಾರೆ ? ಎಂಬ ಪ್ರಶ್ನೆ ಕೇಳುತ್ತಾರೆ ಅವರು. ಸಮಗ್ರ ಕೃಷಿ ಪದ್ಧತಿಯನ್ನು ಪಾಲಿಸುವ ಸಮುದಾಯಗಳಲ್ಲಿ ಮಾಂಸಾಹಾರಕ್ಕೆ ಅದರದೇ ಸ್ಥಾನ ಇದೆ, ಅದರಿಂದ ಪರಿಸರ ನಾಶವಾಗುವುದರ ಬದಲು ಅಂತಹ ಪದ್ಧತಿಗಳು ತಮ್ಮ ಪರಿಸರದ ಮೇಲೆ ಆದಷ್ಟು ಕಡಿಮೆ ಭಾರ ಹಾಕುವಂತಹ ಕೃಷಿ ಪದ್ಧತಿಗಳು. ಇವನ್ನು ಬಿಟ್ಟು ಹೊಸ, ಆಧುನಿಕ ಕೃಷಿ ಪದ್ಧತಿಗಳನ್ನು ಬರಮಾಡಿಕೊಂಡಾಗಲೇ ಶುರುವಾಯಿತು ನಮ್ಮ ಪರಿಸರದ ಅವನತಿ. ಮಾಂಸಾಹಾರದ ಪರವಾಗಿ ಅವರು ಕೊಡುವ ಇನ್ನೊಂದು ನಿದರ್ಶನ ಎಂದರೆ ಹಸುವಿನಂತಹ ಹಾಲು ಕೊಡುವ ಪ್ರಾಣಿ ಇರಬಹುದು ಅಥವಾ ಮಾಂಸಕ್ಕಾಗಿ ಬೆಳೆಸುವ ಕುರಿ, ಆಡು, ಹಂದಿ, ಕೋಳಿ ಇರಬಹುದು. ಇವೆಲ್ಲ ಮನುಷ್ಯ ಏನು ತಿನ್ನುವುದಿಲ್ಲವೋ ಅಂತಹ ಗಿಡಗಂಟಿಗಳನ್ನು ತಿಂದು ಇಲ್ಲವೇ ಅಡುಗೆ ಮಾಡಿ ಉಳಿದದ್ದನ್ನು, ನಾವು ತಿನ್ನಲಾರದೆ ಏನು ಬಿಸಾಕುತ್ತೇವೋ ಅದನ್ನು ತಿಂದು ಜೀವಿಸುವ ಪ್ರಾಣಿಗಳು. ಇವು ನಾವು ತಿನ್ನಲಾರದ ಹಸಿರನ್ನು ತಿಂದು ಅವನ್ನು ನಾವು ಉಪಯೋಗಿಸಬಹುದಾದ ಪ್ರೋಟೀನ್‌ಯುಕ್ತ ಆಹಾರವಾಗಿಸುತ್ತವೆ. ಪ್ರಾಣಿಗಳು ರೈತನಿಗೆ ಯಾವಾಗ ಬೇಕೋ ಆಗ ಆಹಾರವಾಗಬಲ್ಲವು. ಅವನ್ನು ತಿಂಗಳುಗಟ್ಟಲೆ ಇಟ್ಟರೆ ಧಾನ್ಯಗಳ ಹಾಗೆ ಕೊಳೆತುಹೋಗುವುದಿಲ್ಲ. ಆದ್ದರಿಂದ ಇಂತಹದ್ದನ್ನು ಮೇಯ್ದು ಬೆಳೆವ ಪ್ರಾಣಿಗಳು ಯಾರಿಗೂ ಹೊರೆಯಲ್ಲ. ಈ ಪ್ರಾಣಿಗಳು ರೈತರಿಗೆ ಆಹಾರ ಭದ್ರತೆ ಒದಗಿಸಬಲ್ಲವು. ನನ್ನ ಅನುಭವದಲ್ಲಿ, ಅತೀ ಚಳಿ, ಹಿಮಬೀಳುವ ಪ್ರದೇಶಗಳು, ಕೆಲವು ಮರಳುಗಾಡಿನ ಪ್ರದೇಶಗಳಲ್ಲಿರುವ ಸಮುದಾಯಗಳಿಗಂತೂ ಸಸ್ಯಾಹಾರ ಒಂದು ಆಯ್ಕೆಯೇ ಅಲ್ಲ. ಚೀನಾದಂತಹ ಕೃಷಿ ಯೋಗ್ಯ ಭೂಮಿ ಕಡಿಮೆಯಿರುವ ದೇಶಕ್ಕೂ ಮಾಂಸಾಹಾರ ಅನಿವಾರ್ಯ. ಹಾಗೂ ಜನಸಂಖ್ಯೆ ಹೆಚ್ಚಾಗಿರುವ ದೇಶದಲ್ಲಿ, ಮಾಂಸಾಹಾರ ಜನರಿಗೆ ಆಹಾರ ಭದ್ರತೆಯನ್ನು ಒದಗಿಸುತ್ತದೆ. ಉತ್ತರ ಆಫ್ರಿಕಾದ ಮೊರಾಕ್ಕೊದಂತಹ ದೇಶದಲ್ಲಿ ಆಲಿವ್ ಹಣ್ಣುಗಳು, ಪೀಚ್, ಅಕ್ರೋಟು, ಬಾದಾಮಿ, ಕಲ್ಲಂಗಡಿ ಮತ್ತು ಕೆಲವು ತರಹದ ಹಣ್ಣು, ತರಕಾರಿಗಳು ಸಿಗುತ್ತವೆ. ಅಲ್ಲಿ ಕಳ್ಳಿ ಗಿಡದ ಹಣ್ಣನ್ನು ಮಾರುವುದನ್ನು ನೋಡಿದೆ. ಈ ಕಳ್ಳಿ ಹಣ್ಣನ್ನು ಇಂಡಿಯನ್ ಫಿಗ್ ಎಂದು ಕರೆಯುತ್ತಾರೆ. ಈ ಪಾಪಾಸ್‌ಕಳ್ಳಿಯನ್ನು ನೀರಿಲ್ಲದಲ್ಲೆಲ್ಲಾ ಬೇಲಿಯಂತೆ ಬೆಳೆದು ಫಸಲು ತೆಗೆಯುತ್ತಾರೆ. ಇದರ ರಸದಿಂದ ಶಾಂಪೂ ಮತ್ತು ವಿಧವಿಧವಾದ ಔಷಧಗಳನ್ನು ತಯಾರಿಸುವುದನ್ನು ಇತ್ತೀಚೆಗೆ ಕಂಡುಕೊಂಡಿದ್ದಾರಂತೆ ಮತ್ತು ಅದನ್ನು ಅಭಿವೃದ್ಧಿಗೊಳಿಸಲು ಯೂರೋಪಿನಿಂದ ವಿದೇಶೀ ನೆರವು ಸಿಗುತ್ತಾ ಇದೆ. ಮೊರಾಕ್ಕೊದಲ್ಲಿಯ ಸೂಕ್ಷ್ಮ ಪರಿಸರದಲ್ಲಿ ಮೂರು ವರ್ಷಕ್ಕೊಮ್ಮೆಯಾದರೂ ಬರಗಾಲ ಬಂದೇ ಬರುತ್ತದಂತೆ. ಆ ದೇಶದ ಜನರಿಗೆ



ಬೇಕಾದ ಧಾನ್ಯಗಳೆಲ್ಲವನ್ನು ಸ್ಥಳೀಯವಾಗಿ ಬೆಳೆಯಲಾಗುವುದಿಲ್ಲ. ಹೆಚ್ಚುವರಿ ಧಾನ್ಯಗಳನ್ನು ಯೂರೋಪಿನಿಂದ ಆಮದು ಮಾಡಿಕೊಳ್ಳುತ್ತಾರೆ. ಕುರಿ, ಮೇಕೆ, ಹಸುಗಳನ್ನು ಹಾಲು ಮತ್ತು ಮಾಂಸಕ್ಕಾಗಿ ಸಾಕುವುದು ಅವರಿಗೆ ಅನಿವಾರ್ಯ. ಆಫ್ರಿಕಾದ ಸೂಕ್ಷ್ಮ ಪರಿಸರದಲ್ಲಿ ಯಾವ ದೇಶವೂ ಆಹಾರದ ವಿಷಯದಲ್ಲಿ ಸಂಪೂರ್ಣ ಸ್ವಾವಲಂಬನೆ ಹೊಂದಲು ಅಸಾಧ್ಯವಾಗಿದೆ. ಅಂತಹ ಸ್ವಾವಲಂಬನೆ ಸಾಧ್ಯವಿದ್ದರೆ ಅದು ಮೊರಾಕ್ಕೊ ದೇಶಕ್ಕೆ ಮಾತ್ರವಂತೆ. ಆಫ್ರಿಕಾ ಖಂಡದ ಅನೇಕ ದೇಶಗಳು ಈಗ ಸ್ವತಂತ್ರವಾದರೂ ಇನ್ನೂ ಪಾಶ್ಚಿಮಾತ್ಯ ದೇಶಗಳ ಮೇಲೆ ಅವಲಂಬಿತರಾಗಿರುವುದು ಏಕೆ ಎಂದು ನಾವು ಯೋಚಿಸಬೇಕು. ಆಫ್ರಿಕಾದ ಪರಿಸರ ನಾಶ, ಕಾಡು ನಾಶ ಆಗಿರುವುದರಿಂದ ಮತ್ತು ಆಹಾರ ಪದ್ಧತಿಗಳು ಬದಲಾಯಿಸಿರುವುದರಿಂದ, ಪರಿಸರ ತೀರ ಹದಗೆಟ್ಟು ಇಂದಿಗೂ ಆ ಜನರು ಆಹಾರಕ್ಕಾಗಿ ಪಾಶ್ಚಿಮಾತ್ಯ ದೇಶಗಳ ಮೇಲೆ ಅವಲಂಬಿತರಾಗಿದ್ದಾರೆ.

ಇಂದು ಅತಿಯಾದ ಮಾಂಸ ಸೇವನೆಗೆ ಕಾರಣ ಮಾಂಸೋದ್ಯಮ. ಈಗ ಮಾಂಸ ಉತ್ಪಾದನೆ ಹಾಲು ಉತ್ಪಾದನೆಯಂತೆ ಒಂದು ಉದ್ಯಮವಾಗಿಬಿಟ್ಟಿದೆ. ಪ್ರಾಣಿಗಳನ್ನು ಬೆಳೆಸುವ ರೀತಿ, ಅವಕ್ಕೆ ಕೊಡುವ ಮೇವು, ಅವಕ್ಕೆ ಕೊಡುವ ಹಾರ್ಮೋನುಗಳು, ಹಸುವಿನ ಹಾಲಿನಲ್ಲಿರುವ ಡಿಡಿಟಿ – ಇಂತಹವು ಕಾಯಿಲೆ ಉಂಟುಮಾಡುತ್ತವೆಯೇ ಹೊರತು ಮಾಂಸ ಸೇವನೆಯಿಂದ ಅಲ್ಲ. ಮಾಂಸ ಸೇವನೆ ಮಾಡುವವರೆಲ್ಲಾ ಕಾಯಿಲೆಗಳ ಗೂಡಾಗಿದ್ದರೆ ಜಪಾನೀಯರು ಏಕೆ ದೀರ್ಘಕಾಲ ಬದುಕುತ್ತಾರೆ? ಶಕ್ತಿಯುತ ದೇಹ ಸಂಪಾದಿಸಲು ವಿಷ ಮುಕ್ತ ಆಹಾರ ಸೇವನೆ, ಮಾಲಿನ್ಯ ಮುಕ್ತ ಪರಿಸರ, ಒಳ್ಳೆಯ ಗಾಳಿ ಬೆಳಕು ಇವೆಲ್ಲಾ ಮುಖ್ಯವಾಗುತ್ತದೆ. ಅಷ್ಟಕ್ಕೂ ಸಸ್ಯಾಹಾರವೂ ಕೂಡ ಹಿಂಸೆಯಿಂದಲೇ ಹುಟ್ಟಿಕೊಂಡದ್ದು. ಅದಕ್ಕೇ ಮತ್ತೆ ಜೈನರು ಎಲ್ಲಾ ಸಸ್ಯಾಹಾರವನ್ನು ಅಹಿಂಸಾತ್ಮಕ ಎಂದು ಕರೆಯುವುದಿಲ್ಲ. ಜಪಾನ್ ದೇಶದಲ್ಲಿ ಈಗಲೂ ಉಳಿದುಕೊಂಡಿರುವ ಕೆಲವೇ ಕೆಲವು ಬೌದ್ಧ ಸಮುದಾಯಗಳಲ್ಲಿ ಇಡೀ ಗಿಡವನ್ನೇ ನಾಶಮಾಡುವ, ಅಂದರೆ ಕ್ಯಾರೆಟ್, ಆಲೂಗೆಡ್ಡೆಯಂತಹ ತರಕಾರಿಗಳನ್ನು ಕೂಡ ಬಳಸುವುದಿಲ್ಲ. ಅದೂ ಇಂದಿನ ರಾಸಾಯನಿಕ ಕೃಷಿ ಪದ್ಧತಿಯಲ್ಲಿ ನಾವು ಬಲಿ ತೆಗೆದುಕೊಳ್ಳುವ ಕೀಟಗಳಿಗೆ, ಪ್ರಾಣಿ ಪಕ್ಷಿಗಳಿಗೆ ಲೆಕ್ಕವಿಲ್ಲ. ಆದರೆ ಶುದ್ಧ ಸಸ್ಯಾಹಾರಿಗಳು ಹಾಗೆಂದು ತರಕಾರಿ ಹಾಗೂ ಹಣ್ಣುಗಳು, ಧಾನ್ಯಗಳನ್ನು ತಿನ್ನದೇ ಇರುತ್ತಾರೇನು? ಆದ್ದರಿಂದ ನಮ್ಮ ದೇಶದಲ್ಲಿ ಮಾಂಸಾಹಾರ ಕಾಯಿಲೆಗೆ ಮೂಲ, ಅವರ ಬಾಯಿಯಲ್ಲಿ ವಾಸನೆ ಇರುತ್ತದೆ, ಇಲ್ಲವೇ ಅದು ತಾಮಸಿಕ ಆಹಾರ ಎಂದೆಲ್ಲ ಹೇಳುವ ಕಾರಣಗಳನ್ನು ಕೊಟ್ಟು, ಮಡಿ, ಮೈಲಿಗೆ ಕಾರಣಗಳನ್ನು ಇಟ್ಟುಕೊಂಡು ಜನರನ್ನು ದೂರ ಇಡುವ ಕುತಂತ್ರ ನಡೆಯುತ್ತಿದೆ. ಇದರ ಹಿಂದೆ ಜಾತಿವಾದಿಗಳ ಗಬ್ಬು ವಾಸನೆ ಇದೆಯೇ ಹೊರತು ಮಾಂಸಾಹಾರಿಗಳ ಬಾಯಿಯಲ್ಲಲ್ಲ.

ಇಂದು ನಮ್ಮ ದೇಶದಲ್ಲಿ ಮಕ್ಕಳು ಪ್ರೋಟೀನ್




ಕೊರತೆಯಿಂದ ಸಾಯುತ್ತಿರುವಾಗ, ಅದರ ಕೊರತೆಯಿಂದ ಕಾಯಿಲೆಗಳಿಗೆ ತುತ್ತಾಗುತ್ತಿರುವಾಗ, ನೀರಿನ ಅಭಾವ ಇರುವ ಸಂಕಷ್ಟದ ಸಮಯದಲ್ಲಿ, ಸಮುದಾಯಗಳು ಯಾವುದೋ ಗೊಡ್ಡು ವಿಚಾರಗಳಿಗೆ ಕಟ್ಟುಬಿದ್ದು, ಅಹಿಂಸಾವಾದದ ಪರಿಪಾಲಕರು ಎಂದು ಕರೆದುಕೊಳ್ಳುವವರ ಮಾತಿಗೆ ಮಾರುಹೋಗಿ ಸಮಗ್ರ ಕೃಷಿ ಪದ್ಧತಿಗಳನ್ನು ಕಡೆಗಣಿಸಿದರೆ ನಮ್ಮ ಕೃಷಿ ಸಮಾಜಕ್ಕೆ ಅನಾಹುತಗಳು ಕಾದಿವೆ. ಅಷ್ಟೇ ಅಲ್ಲದೆ ನಮ್ಮ ದೇಶದಲ್ಲಿ ಮಕ್ಕಳು ಅಪೌಷ್ಟಿಕತೆಯಿಂದ ಬಳಲುತ್ತಿದ್ದು, ಅಂಕಿ ಅಂಶಗಳನ್ನು ನೋಡಿದರೆ ಕೆಲವು ಆಫ್ರಿಕಾದ ದೇಶಗಳ ಸ್ಥಿತಿಗೆ ಹೋಲುತ್ತವೆ. ನಮ್ಮ ಸ್ವಾಮೀಜಿಗಳು ಇಂತಹದನ್ನು ಗಣನೆಗೆ ತೆಗೆದುಕೊಳ್ಳದೆ ಮಕ್ಕಳಿಗೆ ಬಿಸಿಯೂಟದಲ್ಲಿ ಮೊಟ್ಟೆ ಕೊಡಬಾರದು ಎಂದು ಅಪ್ಪಣೆ ಕೊಡಿಸಿದ್ದಾರೆ. ನಮ್ಮ ನೆರೆ ರಾಜ್ಯವಾದ ತಮಿಳುನಾಡಿನಲ್ಲಿ ಏಕೆ ಮಕ್ಕಳು ಅಪೌಷ್ಟಿಕತೆಯಿಂದ ಬಳಲುವುದಿಲ್ಲ? ಅಲ್ಲಿಯ ಶಾಲೆಯ ಮಕ್ಕಳಿಗೆ ಮೊಟ್ಟೆ ಕೊಡುವುದರಿಂದ ಆಗಿರುವ ಅನಾಹುತವಾದರೂ ಏನು? ಹಸುವಿನ ಹಾಲಿನ ಮೇಲೆ ಅವಲಂಬಿತರಾದವರು ಮುದಿ ಹಸುಗಳ ಆರೈಕೆ, ಹಸುವಿನ ಇಹ ಯಾತ್ರೆಯ ಜವಾಬ್ದಾರಿಯನ್ನೂ ಹೊತ್ತುಕೊಂಡಿದ್ದರೆ ಮಾತ್ರ ಅವರಿಗೆ ರೈತರ ಕಷ್ಟದ ಅನುಭವ ಗೊತ್ತಾಗುತ್ತದೆ. ರೈತರಿಗೆ ದನಗಳನ್ನು ಮಾರಬಾರದು ಎಂದು ತಾಕೀತು ಮಾಡುವ ಹಿಂದೂ ಸಂಘಟನೆಗಳು ಮುದಿ ಹಸುಗಳನ್ನು ಸಾಕುವುದಕ್ಕೆ ಏಕೆ ಮುಂದೆ ಬರುವುದಿಲ್ಲ? ರೈತರಿಗೆ ಹಣಕೊಟ್ಟು ಈ ಗೋಮಾತೆಗಳನ್ನು ಕೊಂಡು ಆರೆಸ್ಸೆಸ್ ಕಾರ್ಯಕರ್ತರು ಸಾಕಬಹುದಲ್ಲ? ಇಂದು ದನದ ಮಾಂಸ ರಫ್ತು ಮಾಡುವ ದೇಶಗಳಲ್ಲಿ ಭಾರತ ಮುಂಚೂಣಿಯಲ್ಲಿದೆ. ಈ ದೊಡ್ಡ ದೊಡ್ಡ ಕಸಾಯಿ ಖಾನೆಗಳ ಮಾಲೀಕರು ಅಲ್ಪಸಂಖ್ಯಾತರೇನೂ ಅಲ್ಲ. ನಮ್ಮಲ್ಲಿ ಗೋಮಾತೆಯನ್ನು ಮುಂದಿಟ್ಟುಕೊಂಡು ಬೀದಿಗಿಳಿದು ಪ್ರತಿಭಟನೆ ಮಾಡುವವರು ವಿಷಯದ ಮೂಲ ಹುಡುಕಿ, ಸಂಶೋಧನೆ ಮಾಡುವ ಕನಿಷ್ಠ ಆಸಕ್ತಿ ಇಲ್ಲದ ಬೆಪ್ಪುಗಳು. ಇಂತಹವರನ್ನು ಅವರ ರಾಜಕೀಯ ಬೇಳೆ ಬೇಯಿಸಿಕೊಳ್ಳುವುದಕ್ಕೆ ಸಂಘ ಪರಿವಾರ ಉಪಯೋಗಿಸಿಕೊಳ್ಳುತ್ತದೆಯಷ್ಟೆ.

ಮಾಂಸಾಹಾರದ ಇನ್ನೊಂದು ಮುಖವನ್ನು ನಾವು ನೋಡಲೇಬೇಕು. ಇಂದು ಮಾಂಸಾಹಾರ ಎಂದೋ ಒಂದು ದಿನ ತಿನ್ನುವ ವಸ್ತುವಲ್ಲ. ದಿನನಿತ್ಯ ಬಳಸುವ ಆಹಾರವಾಗಿಬಿಟ್ಟಿದೆ. ಇಂದು ಮಾಂಸಕ್ಕೆ ಇರುವ ಬೇಡಿಕೆಯಿಂದಾಗಿ ಅದನ್ನು ಪೂರೈಸಲು ಮಾಂಸ ಉದ್ಯಮ ಕಾಡುಗಳನ್ನು ನೆಲಸಮ ಮಾಡಿ ಜಾನುವಾರುಗಳಿಗೆ ಮೇಯಲು ಅನುಕೂಲವಾಗುವಂತೆ ಗೋಮಾಳ ಮಾಡುತ್ತಿರುವ ಸಮಯದಲ್ಲಿ, ಬಹುರಾಷ್ಟ್ರೀಯ ಕಂಪನಿಗಳು ಅಮೆರಿಕದಲ್ಲೋ, ಮತ್ತೆಲ್ಲೋ ಉತ್ಪಾದಿಸುವ ಮಾಂಸಕ್ಕೆ ನಮ್ಮ ದೇಶ ಮಾರ್ಕೆಟ್ಟು ಆಗಿದೆ. ಆದ್ದರಿಂದಲೇ ಇತ್ತೀಚೆಗೆ ಇಂಗ್ಲೆಂಡ್‌ನಲ್ಲಿ ಜಂಕ್ ಫುಡ್‌ಗೆ ಹೆಚ್ಚುವರಿ ತೆರಿಗೆ ಹಾಕುತ್ತಿದ್ದಾರೆ. ಆ ದೇಶದ ಆರೋಗ್ಯ ಇಲಾಖೆ ಎಲ್ಲರಿಗೂ ಉಚಿತವಾಗಿ ಇಲ್ಲವೇ ತೀರ ಅಗ್ಗದ ಬೆಲೆಯಲ್ಲಿ ವೈದ್ಯಕೀಯ ಸೌಲಭ್ಯಗಳನ್ನು ಸರ್ಕಾರದ ಖರ್ಚಿನಲ್ಲಿ ಒದಗಿಸುತ್ತಿರುವಾಗ, ಜಂಕ್ ಫುಡ್‌ನಿಂದ ಆಗುವ ಆರೋಗ್ಯದಲ್ಲಿನ ಏರುಪೇರುಗಳಿಗೆ ಸರಕಾರವೇ ಸ್ಪಂದಿಸಬೇಕಾಗುತ್ತದೆ, ಅಲ್ಲವೇ? ಅದಲ್ಲದೆ, ಈ ಮಾಂಸ ಉದ್ಯಮದಿಂದಾಗಿ ಮನುಷ್ಯರ ಉಪಯೋಗಕ್ಕಾಗಿ ಬೆಳೆದ ದವಸ ಧಾನ್ಯಗಳು ಪ್ರಾಣಿಗಳಿಗೆ ಮೇವಾಗುತ್ತವೆ. ಪ್ರಾಣಿಗಳಿಗೆ ಮೇವಾಗುವ ಈ ಧಾನ್ಯವನ್ನು ಲೆಕ್ಕ ಹಾಕಿದರೆ ಅದು ನಮ್ಮ ವಿಶ್ವದಲ್ಲಿರುವ ಎರಡರಷ್ಟು ಜನಸಂಖ್ಯೆಗೆ ಆಹಾರವಾಗ ಬಲ್ಲದು. ಹಾಲಿನ ಮತ್ತು ಮಾಂಸದ ಉತ್ಪಾದನೆಯಲ್ಲಿ ಪೋಲಾಗುವ ನೀರು ಎಲ್ಲವನ್ನು ಲೆಕ್ಕ ಹಾಕಿಕೊಂಡರೆ ಮಾಂಸಾಹಾರಿಗಳು ಪರಿಸರದ ಮೇಲೆ ಆಗುವ ಪರಿಣಾಮದ ಬಗ್ಗೆ ಚಿಂತೆ ಮಾಡಲೇಬೇಕಾದ ಸಮಯ ಬಂದಿದೆ.

ನಮ್ಮ ದೇಶದಲ್ಲಂತೂ ಮಾಂಸ, ಮೀನು ಮಾರುವ ಅಂಗಡಿಗಳನ್ನು ನೋಡಿದರೆ ವಾಕರಿಕೆ ಬರುವ ಹಾಗೆ ಇಟ್ಟುಕೊಂಡಿರುತ್ತಾರೆ. ಪ್ರಾಣಿಗಳನ್ನು ವಧೆ ಮಾಡಿದಾಗ ಅವೇನೂ ರಸಪೂರಿ ಮಾವಿನ ಹಣ್ಣಿನ ಹಾಗೆಯೋ, ಮಲ್ಲಿಗೆ ಹೂವಿನಂತೆಯೋ ಸುವಾಸನೆಯನ್ನೇನೂ ಬೀರುವುದಿಲ್ಲವಲ್ಲಾ! ಗಲೀಜಾಗಿ ಇರುವ ಮಾಂಸದ ಅಂಗಡಿಗಳು, ಮೀನಿನ ಅಂಗಡಿಗಳು ಸಸ್ಯಾಹಾರಿಗಳಲ್ಲದ ಮಕ್ಕಳ ಮನಸ್ಸಿನ ಮೇಲೆ ಎಂತಹ ಪರಿಣಾಮ ಉಂಟುಮಾಡಬಹುದು ಎಂಬ ಕನಿಷ್ಠ ಕಾಳಜಿಯೂ ಅಂಗಡಿ ಮಾಲೀಕರಿಗೆ ಇರುವಂತಿಲ್ಲ. ಆದ್ದರಿಂದ ಮಾಂಸಾಹಾರ ನಮಗೆ ಅನಿವಾರ್ಯ ಆಗಿರುವುದೇ ಆದರೆ ಪ್ರಾಣಿಗಳನ್ನು ವಧೆ ಮಾಡುವ ರೀತಿಯಲ್ಲಿಯೂ, ಶುಚಿತ್ವದ ವಿಚಾರದಲ್ಲಿಯೂ ಮಾರ್ಪಾಡುಗಳು ಖಂಡಿತವಾಗಿಯೂ ಬೇಕಾಗಿವೆ.

**ಪುಷ್ಪ ಸುರೇಂದ್ರ**
ದೇವಿ ತೋಪು, ಈರಪ್ಪನ ಕೊಪ್ಪಲು
ಇಲವಾಲ – ೫೭೦೧೩೦



# ಶಿಲ್ಪಕಲಾವಿದ ನಿಂಗಪ್ಪ ಡಿ. ಕೇರಿ





ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ನಿಂಗಪ್ಪ ಡಿ. ಕೇರಿ ತಮ್ಮ ವಿಶಿಷ್ಟ ಶಿಲ್ಪಕಲಾಕೃತಿಗಳಿಂದ ನಾಡಿನ ಕಲಾಭಿಜ್ಞರ ಗಮನ ಸೆಳೆದಿರುವರು. ಮರ, ಶಿಲೆ, ಸಿಮೆಂಟ್ ಮತ್ತು ಫೈಬರ್ ಮಾಧ್ಯಮಗಳಲ್ಲಿ ತಮ್ಮ ವಿಲಕ್ಷಣ ಅನುಭವ - ವಿಚಾರಗಳಿಗೆ ದೃಶ್ಯರೂಪ ನೀಡಿರುವರು. ಬೆಂಗಳೂರಿನ ಕೆ. ಪಿ. ಜೆ. ಪ್ರಭು ಕೇಂದ್ರದಲ್ಲಿ ಒಂದು ವರ್ಷ ಸಾಂಪ್ರದಾಯಿಕ ಶಿಲ್ಪಕಲೆಯಲ್ಲಿ ತರಬೇತಿ ಹೊಂದಿದ ಇವರು ಆಧುನಿಕ ಶೈಲಿಯಲ್ಲೂ ಶಿಲ್ಪಗಳನ್ನು ರಚಿಸುವಲ್ಲಿ ಸಿದ್ಧಿ ಪಡೆದಿರುವರು.

ಪ್ರಸ್ತುತ ಗುಲಬರ್ಗಾದ ಆರ್ಟ್ ಇಂಟಿಗ್ರೇಷನ್ ಕಾಲೇಜಿನಲ್ಲಿ ಶಿಲ್ಪಕಲಾ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿರುವರು.

– ಡಾ|| ಶಿವಾನಂದ ಬಂಟನೂರ
ಕನ್ನಡ ವಿ.ವಿ., ಹಂಪಿ









Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

**HOSATHU** Kannada Monthly / JULY 2014 / ₹ 15
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)